ಮನೋಹರ ಗ್ರಂಥಮಾಲೆಯ ೨೦ನೆಯ ಕುಸುಮ

೪ನೆಯ ವರುಷದ ೨ನೆಯ ಕುಸುಮ

# ಪುಷ್ಪಮಾಲೆ

(೧೧ ಕಥೆಗಳ ಸಂಗ್ರಹ)

ಕತೆಗಾರರು:

'ಶ್ರೀ ಸ್ವಾಮಿ'

ಬೆಂಗಳೂರು

ಅಕ್ಟೋಬರ ೧೯೩೬ ] [ ೦-೧೨-೦

ಸಂಪಾದಕರು:—

ಜಿ. ಬಿ. ಜೋಶಿ

ಜಿ. ವ್ಹಿ. ಚುಳಕಿ

ಸಾಹಿತ್ಯ ವಿಷಯದಲ್ಲಿ ಸಲಹೆಗಾರರು:—

ದ. ರಾ. ಬೇಂದ್ರೆ, ಎಂ. ಎ.

ರಂ. ಶ್ರೀ. ಮುಗಳಿ, ಎಂ. ಎ., ಬಿ. ಟಿ.

ವಿ. ಕೃ. ಗೋಕಾಕ, ಎಂ. ಎ. (ಇಂಗ್ಲಂಡದಲ್ಲಿ)

ಮುದ್ರಕರು:—
ವೆಂಕಟೇಶ ಮಾಧವರಾವ ಜೋಶಿ
ಮೋಹನ ಮುದ್ರಣಾಲಯ
ಧಾರವಾಡ

ಪ್ರಕಾಶಕರು:—
ಜಿ. ಬಿ. ಜೋಶಿ
ಮನೋಹರ ಗ್ರಂಥಮಾಲಾ
ಧಾರವಾಡ

# ನಮ್ಮ ಮಾತು

ನಮ್ಮ ಈ ಮನೋಹರ ಗ್ರಂಥಮಾಲೆಯು ಯಥಾನುಕ್ರಮದಂತೆ ತನ್ನ ಹೆಜ್ಜೆಯನ್ನು ಮುಂದೆ ಹಾಕುತ್ತಿರುವದು ಕನ್ನಡಿಗರೆಲ್ಲರಿಗೂ ತಿಳಿದ ವಿಷಯವೆಂದು ನಾವು ಭಾವಿಸಿದ್ದೇವೆ. ಹನ್ನೊಂದು ಕತೆಗಳನ್ನೊಳಗೊಂಡ ಈ ಸಂಗ್ರಹವು- 'ಪುಷ್ಪಮಾಲೆಯು' ನಮ್ಮ ನಾಲ್ಕನೆಯ ವರುಷದ ಎರಡನೆಯ ಕುಸುಮವು ಇಂದು ವಾಚಕರ ಕೈಸೇರುವುದು. ನಮ್ಮ ಮಾಲೆಯ ಪ್ರಕಟನೆಗೆಂದು ಈ ಕತೆಗಳ ಸಂಗ್ರಹವನ್ನು ಪ್ರಕಟಿಸಲು ಅನುಮತಿಯನ್ನಿತ್ತ ಕತೆಗಾರರಾದ ಶ್ರೀಮಾನ್ 'ಶ್ರೀಸ್ವಾಮಿ' ಇವರಿಗೆ ನಾವು ಅತ್ಯಂತ ಕೃತಜ್ಞರಾಗಿದ್ದೇವೆ. ಅದರಂತೆ ಈ ಸಂಗ್ರಹಕ್ಕೆ ಮುನ್ನುಡಿಯನ್ನು ನಮ್ಮ ಬಿನ್ನಹದ ಮೇರೆಗೆ ಬರೆದುಕೊಟ್ಟ ಶ್ರೀಮಾನ್ ದ. ರಾ. ಬೇಂದ್ರೆಯವರಿಗೂ ನಾವು ಕೃತಜ್ಞರಾಗಿದ್ದೇವೆ.

ನಮ್ಮ ಸಾಹಿತ್ಯ ಸಲಹೆಗಾರರಲ್ಲೊಬ್ಬರಾದ ಶ್ರೀಮಾನ್ ವಿ. ಕೃ. ಗೋಕಾಕ ಎಂ. ಎ. ಇವರು ಇಂಗ್ಲಿಷ ಭಾಷೆಯ ಉಚ್ಚ ಶಿಕ್ಷಣಕ್ಕಾಗಿ ವಿಲಾಯತಿಗೆ ಪ್ರಯಾಣ ಬೆಳೆಸಿದುದು ನಮಗೆ ಸಂತೋಷವನ್ನುಂಟು ಮಾಡಿದೆ. ಅವರು ತಮ್ಮ ಬುದ್ಧಿ ಕುಶಲತೆಯಿಂದ ಅಲ್ಲಿಯೂ ಗೌರವವನ್ನು ಪಡೆದು ಬೇಗನೆ ಮರಳಿ ಬರಲೆಂದು ಹಾರೈಸುತ್ತೇವೆ.

ಮೈಸೂರು ವಿದ್ಯಾಖಾತೆಯವರು ನಮ್ಮ ಮಾಲೆಯ ಕೆಲವು ಪುಸ್ತಕಗಳನ್ನು ಸ್ಕೂಲು ಲೈಬ್ರಿಗಳಿಗಾಗಿ ಮಂಜೂರು ಮಾಡಿದುದಕ್ಕಾಗಿ ನಾವು ಅವರಿಗೆ ಎಂದಿಗೂ ಋಣಿಯಾಗಿದ್ದೇವೆ.

ನಮ್ಮ ಈ ಮಾಲೆಯು ತನ್ನ ಅಳುವುವಿನಾರಿ ಕನ್ನಡ ಭಾಷೆಯ ಸೇವೆಯನ್ನು ಮಾಡುವುದಕ್ಕೆ ಹಲವು ವಿಧದ ಪ್ರಯತ್ನಗಳನ್ನು ಕೈಕೊಂಡಿದೆ. ಅವುಗಳು ಸಫಲವಾಗಿ ನಮಗೆ ಬೆಂಬಲವನ್ನು ಕೊಡುವವೆಂದು ಆಶಿಸುವ,

ಸಂಪಾದಕರು,
ಮ. ಗ್ರ. ಮಾಲಾ, ಧಾರವಾಡ

# ಬಿನ್ನಹ

ನಾನು ಆಗಾಗ್ಗೆ ಬರೆದಿಟ್ಟಿದ್ದ ಸಣ್ಣಕತೆಗಳ ಹಸ್ತಪ್ರತಿಗಳನ್ನು ಶ್ರೀಮಾನ್ ದತ್ತಾತ್ರೇಯ ರಾಮಚಂದ್ರ ಬೇಂದ್ರೆ ಎಂ. ಎ. ಅವರಿಗೆ ತೋರಿಸುವ ಸುಯೋಗ ನನಗೊಮ್ಮೆ ದೊರೆಯಿತು. ಅವರು ಅವುಗಳಲ್ಲಿ ತಮಗೆ ಸರಿದೋರಿದ ಎರಡು ಸಣ್ಣ ಕತೆಗಳನ್ನು ಧಾರವಾಡಕ್ಕೆ ತೆಗೆದು ಕೊಂಡು ಹೋಗಿ ಆಗ್ಗೆ ತಮ್ಮ ಜಯಕರ್ನಾಟಕದಲ್ಲಿ ಪ್ರಕಟಿಸಿದರು. ಆ ಸಣ್ಣ ಕತೆಗಳಲ್ಲಿ ಮೊದಲು ಅಚ್ಚಾದ ಕತೆಯೇ 'ಪ್ರೇಮದ ಬಹುಮಾನ.' ಇದ ರೊಂದಿಗೆ ಬೆಂಗಳೂರು ಕರ್ನಾಟಕ ಸಂಘದಿಂದ 'ಮುದ್ದಣನ ಬಹುಮಾನ' ವನ್ನು ಪಡೆದ 'ಬೀಬೀ ನಾಚ್ಚಿಯಾರ್' ಜಯಕರ್ನಾಟಕದ ಸಣ್ಣಕತೆಗಳ ಸ್ಪರ್ಧೆಯಲ್ಲಿ ಬಹುಮಾನವನ್ನು ಪಡೆದ 'ವಿಶ್ವಾಂಬರಿ' ಮತ್ತು ಫ್ರೆಂಚ್‌ಕತೆ 'ಹೈಸಿಂತ್' ಎನ್ನುವುದರ ಆಧಾರದ ಮೇಲೆ ಬರೆದ 'ಡೇರ ಹೂ' ಜಯ ಕರ್ನಾಟಕದಲ್ಲಿ ಮುದ್ರಿತವಾದುವು.' ಅಲಂಗಿರಿ'ಯು ಪ್ರಬುದ್ಧ ಕರ್ನಾಟಕ ದಲ್ಲಿಯೂ, 'ಗುಲಾಬಿ ಹೂ' 'ಉದಯರಾಗ' ಸರಸ್ವತಿಯಲ್ಲಿಯೂ, ಮತ್ತು 'ಎಂದುರೋ ಮಹಾನುಭಾವುಲು !', 'ಬೇಡವಾದರೂ ಬೇಕಾಯಿತು' ಇವು ಕಥಾಂಜಲಿಯಲ್ಲಿಯೂ ಮುದ್ರಿತವಾದುವು.

ಈ ಸಣ್ಣ ಕತೆಗಳನ್ನು ಮತ್ತು ಮುದ್ರಿತವಾಗದ 'ಪುಷ್ಪಮಾಲೆ' 'ದುರಂತನಾಟಕ' ಮತ್ತು 'ವಿಶ್ವಪ್ರೇಮ' ಇವುಗಳನ್ನೂ ಮನೋಹರ ಗ್ರಂಥಮಾಲೆಯಲ್ಲಿ ಒಂದು ಕಥಾಗುಚ್ಛವನ್ನಾಗಿ ಮುದ್ರಿಸಲೂ ನನಗೆ ಶ್ರೀಮಾನ್ ಬೇಂದ್ರೆಯವರೇ ಸಲಹೆಯನ್ನಿತ್ತರು. ಈ '**ಪುಷ್ಪಮಾಲೆ**' ಗೊಂದು ಮುನ್ನುಡಿಯನ್ನು ಬರೆದುಕೊಡಬೇಕೆಂದು ಅವರನ್ನು ವಿಜ್ಞಾಪಿಸಿ ಕೊಂಡಾಗ '............ನಿನ್ನ ಕಥಾಗುಚ್ಛಕ್ಕೆ ನಾನು ಮುನ್ನುಡಿ ಬರೆಯು' ವುದು ನಿನಗೆಷ್ಟು ಪ್ರಿಯವೊ ಅಷ್ಟೇ ನನಗೂ ಪ್ರಿಯ... ........ನಿನ್ನ ಪುಷ್ಪ ಮಾಲೆಯ ಪ್ರಕಾಶನವು ಆದರ ಮುನ್ನುಡಿಯೂ ಎಚ್ಚರದಿಂದಾಗುವಂತೆ

ನೋಡಿಕೊಳ್ಳುತ್ತೇನೆ' ಎಂದು ನನಗೆ ತಮ್ಮ ವಿಶ್ವಾಸದ ಪತ್ರದಲ್ಲಿ ಬರೆದರು. ನನ್ನ ಸಣ್ಣ ಕತೆಗಳನ್ನೆಲ್ಲಾ ಸಂಗ್ರಹಿಸಿ, ಮನೋಹರ ಗ್ರಂಥ ಮಾಲೆಯಲ್ಲಿ ಒಂದು ಪುಸ್ತಕ ರೂಪಕ್ಕೆ ತಂದು, ಅದಕ್ಕೆ ತಮ್ಮ ಅಮೋಘ ವಾದ ಮುನ್ನುಡಿಯನ್ನು ಬರೆದುಕೊಟ್ಟುದಕ್ಕಾಗಿ ಶ್ರೀಮಾನ್ ಬೇಂದ್ರೆ ಯವರಿಗೆ ನಾನು ಚಿರಋಣಿಯಾಗಿದ್ದೇನೆ.

ನನ್ನ ಸಣ್ಣ ಕತೆಗಳಲ್ಲಿ ಕೆಲವನ್ನು ನೋಡಿ, ಕೆಲವು ಪೋಷಕ ಸೂಚನೆ ಗಳನ್ನಿತ್ತು ಈ ನನ್ನೆರಡ ಕಥಾಂಕುರಕ್ಕೆ ಕಾರಣಭೂತರಾದ ಶ್ರೀಮಾನ್ ಮಾಸ್ತಿ ವೆಂಕಟೇಶ ಐಯಂಗಾರ, ಎಂ. ಎ., ಅವರಿಗೆ ನನ್ನ ಆದರದ ಅಭಿ ವಂದನೆಗಳು.

'ಪುಷ್ಪಮಾಲೆ' ಯಲ್ಲಿ ಅಡಕವಾಗಿರುವ ಕೆಲವು ಸಣ್ಣ ಕತೆಗಳನ್ನು ತಮ್ಮ ಪತ್ರಿಕೆಗಳಲ್ಲಿ ಮುದ್ರಿಸಿದ ಆಯಾ ಪತ್ರಿಕಾಸಂಪಾದಕರಿಗೂ ನನ್ನ ಸಣ್ಣ ಕತೆಗಳ ಬಿಡಿ ಹೂಗಳನ್ನು ಆಯ್ದು, ಪೋಣಿಸಿ, **'ಪುಷ್ಪಮಾಲೆ'** ಯನ್ನು ಮಾಡಿ, ಅದನ್ನು ಬೆಳಕಿಗೆ ತಂದ ಮನೋಹರ ಗ್ರಂಥಮಾಲೆಯ ಸಂಪಾದಕರಿಗೆ ನನ್ನ ವಂದನೆಗಳು.

ಈ ಪುಸ್ತಕದ ಹಸ್ತಪ್ರತಿಗಳನ್ನು ನೋಡಿ ಮುದ್ರಣಕ್ಕೆ ಅನುಕೂಲ ವಾಗುವಂತೆ ಎಲ್ಲ ಸಲಹೆಗಳನ್ನಿತ್ತ, ಬೆಂಗಳೂರು ಟಾಟಾ ವಿಜ್ಞಾನ ಶಾಲೆ ಯಲ್ಲಿ ಸಂಶೋಧಕರಾಗಿರುವ ನನ್ನ ಬಾಲ್ಯದ ಗೆಳೆಯರೂ ಸೋದರ ಬರಹ ಗಾರರೂ ಆದ ಶ್ರೀಮಾನ್ ಭೇರಿಕೆ ಸುಂದರ ಐಯಂಗಾರ್ ಅವರನ್ನು ಇಲ್ಲಿ ನೆನೆಯಬೇಕಾದುದು ನನ್ನ ಕರ್ತವ್ಯವೂ ಹೆಮ್ಮೆಯೂ ಆಗಿದೆ.

ಬೆಂಗಳೂರು
ಧಾತೃಸಂವತ್ಸರ ಶ್ರೀಕೃಷ್ಣ ಜನ್ಮಾಷ್ಟಮಿ

**ಶ್ರೀ ಸ್ವಾಮಿ**

# ಅನುಕ್ರಮಣಿಕೆ

# ಮುನ್ನುಡಿ

ನನ್ನ ತರುಣ ಮಿತ್ರರಾದ 'ಶ್ರೀಸ್ವಾಮಿ'ಯವರ ಕಥೆಗಳ ಪ್ರಥಮ ಸಂಕಲನವಾದ 'ಪುಷ್ಪಮಾಲೆ'ಗೆ ಮುನ್ನುಡಿಯೆಂದು ಎರಡು ಮಾತುಗಳನ್ನು ಬರೆಯಲು ನನಗೆ ಅಭಿಮಾನನೆನಿಸುವದು. ಅವರು ತಮ್ಮ ಮಾತಿನಲ್ಲಿ ನನ್ನ ಬಗ್ಗೆ ಬರೆದ ಗೌರವದ ಹಿಂದಿನ ನೆನಪಿನ ಮಾತು ಅಂತಿರಲಿ, ಕತೆಗಾರರ ಸ್ಪರ್ಧೆಗಳಲ್ಲಿ ಹಲಕೆಲವು ಕತೆಗೆ ಸನ್ಮಾನವನ್ನು ಪಡೆದ ಈ ಕಥೆಗಾರರನ್ನು ನಾನು ಮೊದಲು ಕಂಡಾಗ್ಗೆ ಅವರಲ್ಲಿ ಕಂಡುಬಂದ, ಶಾಲೀನತೆ ವಿನಯಗಳಲ್ಲಿ ಹುದುಗಿಕೊಂಡ ಒಂದು ಮಧುರ ವಿಜಿಗೀಷುವೃತ್ತಿಯು ಇಂದು ಅವರ ಕಥಾವಳಿಗಳಲ್ಲಿ ಪರಿಮಳಿಸಿ ಸೂಸುವದನ್ನು ಕಾಣುವ ನನಗೆ ಅವರ ಈ ಪುಷ್ಪಮಾಲೆಯಲ್ಲಿ ಸುಪ್ತವಾಗಿರುವ, ನಾಳೆ ಬರಲಿರುವ ಫಲಭಾರವನ್ನು ಕಲ್ಪಿಸಿ ವಿಶೇಷವಾದ ಆನಂದವಾಗುವದು.

ಜಾತಿ, ವರ್ಣ, ಲಿಂಗ, ವಯಸ್ಸುಗಳ ರೂಢಿಯ ತಾರತಮ್ಯವನ್ನು ಬದಿಗಿರಿಸಿ ಸರಸ್ವತಿಯ ಭಕ್ತರಿಗೆ ಸಹಜವಾದ ಪರಿಶುದ್ಧ ಮಾನವಹೃದಯ ಧರ್ಮದ ನಿಃಸೀಮವಾದ ಅಂತರಿಕ್ಷದಲ್ಲಿ ಕಾಮ–ಪ್ರೇಮ, ಕಾವ್ಯ–ಕಲೆ, ಭಾವ–ಭಕ್ತಿಗಳು ಕಲೆಬೆರೆಸುತ್ತಿರುವ ಇಂದ್ರಧನುವಿನ ಇಂದ್ರಜಾಲದ ಗೆರೆ ಬಣ್ಣಗಳನ್ನು ವಿಂಗಡಿಸಿ ಸಂಗಡಿಸಿ ನೋಡುವ, ತೋರಿಸುವ ಇವರ ಕಥೆಗಳ ಕಲೆಯನ್ನು ನೋಡಿದರೆ ಹಿಂದುಧರ್ಮದ ಸಮನ್ವಯ ಬುದ್ಧಿಯೆ ಇವರಲ್ಲಿ ಹೃದಯಕ್ಕಿಳಿಯುತ್ತಿರುವಂತೆ ತೋರುವದು ಸಾಹಿತ್ಯವೆ ಧರ್ಮವಾಗಿ ಜನ್ಮವೆತ್ತಲಿರುವ ಈ ನವೀನ ಕಾಲಕ್ಕೆ ಇಂಥ ಭಾಗವತ ಹೃದಯವು ಬೇಕು. ಚಿಕ್ಕವಯಸ್ಸಿನಲ್ಲಿಯೇ ಪರದೇಶದಲ್ಲಿ ಕ್ರಿಸ್ತವಾಸಿಗಳಾದ ಮಾಲೂರ ಭಾಸ್ಕರರಾಯರಲ್ಲಿ ಈ ದೃಷ್ಟಿಯಿತ್ತು. 'ಶ್ರೀನಿವಾಸ'ರ ಅನೇಕಾನೇಕ ಕೃತಿ ಕಥೆಗಳಲ್ಲಿ ಇಂಥ ಒಂದು ಸಿದ್ಧ ಹೃದಯವು ಬುದ್ಧಿಗೇರಿ ಹೊಸದೊಂದು ಪ್ರಭೆಯನ್ನು ಬೀರುತ್ತ ಇಂದಿನ ಸಂಸಾರಸಾಗರದಲ್ಲಿ ದೀಪಸ್ತಂಭದಂತೆ ತಲೆಯೆತ್ತಿ ನಿಂತಿದೆ.

ಈ ಕಥೆಗಳಲ್ಲಿ ಜನಜನಿತವಾಗಿ ಬಂದ ವೈಷ್ಣವಭಕ್ತಿಯ ಐತಿಹ್ಯಗಳು ಕೆಲವು, ಸಂಗೀತಕ್ಕೆ ತವರೂರಾದ ಮೈಸೂರಿಗೆ ಸಹಜವಾದ ಸಂಗೀತಗಾರ ಕಥೆಗಳು ಕೆಲವು, ದುರ್ಲಕ್ಷಿತರಾದ ಬಡವರು ಪೌರುಷದ ಬೆಂಬಲಕ್ಕಿರುವ ದೈವಕೃಪೆಯಿಂದ ಸುಖ ಸುಸ್ಥಿತಿಗಳನ್ನು ಪಡೆದ ಕಥೆಗಳು ಕೆಲವು. ಅಂತೂ ಎಲ್ಲ ಕಥೆಗಳೂ ಸುಖಸಮಾಧಿಯಲ್ಲಿ ಪರಿಣಮಿಸಿವೆ. 'ದುರಂತ ನಾಟಕ'ದಂಥ ಲೌಕಿಕರ ಕಥೆಯೂ 'ಚಿಬೀ ನಾಚ್ಚಿಯಾರ್'ದಂಥ ಅಲೌಕಿಕರ ಕಥೆಯೂ ಕೂಡ ದೇಹಾವಸಾನದಲ್ಲಿ ಸುಖದ ಪರ್ಯಾಯವನ್ನು ಸೂಚಿಸುತ್ತಿರುವವು. ಸುಖವಿರಲಿ ದುಃಖವಿರಲಿ ಪ್ರತಿಯೊಂದು ಕಥೆಯೂ ವಿಶ್ವಪ್ರೇಮದ ಒಂದು ಧಾರೆಯಾಗಿ ಪ್ರವಹಿಸುವದರಿಂದ 'ಪ್ರೇಮದಿಂದ ಬಾಳಿದ್ದೆ ಪ್ರೀತಿಗೊಂದು ಫಲ' ಎಂದು ಪಲ್ಲವಿಯಂತೆ ಕಥೆಕಥೆಗಳ ನುಡಿನುಡಿಗೂ ದನಿಗೊಡುವದು.

ಕಥೆಗಾರಿಕೆಯು ಒಳ್ಳೆ ಜೋಕೆಯ ಕಾರ್ಯ 'ಎಂದುರೋ ಮಹಾನು ಭಾವಲು' ಎಂಬ ಕಥೆಯು ಮುಕ್ತಾಯದ ವೈಚಿತ್ರ್ಯದಿಂದ ಅದಕ್ಕೊಂದು ಆಭಾಸವುಂಟಾಗಿದೆ ಕಲೆಯಲ್ಲಿ ಒಂದು ಇಂದ್ರಜಾಲವಿದೆ; 'ಡೇರ ಹೂ' ವು ಕೊನೆಯ ಭಾವೋದ್ದೀಪನವಿರದಿದ್ದರೆ, ಶಾಲಾ ಪಠ್ಯಪುಸ್ತಕದೊಳಗಿನ ಒಂದು ನವೀನ ಪಾಠದಂತೆ ಚಮತ್ಕಾರರಹಿತವಾಗಿ ಹೋಗಬಹುದಾಗಿತ್ತು. ಆದರೂ ಶ್ರೀಸ್ವಾಮಿಯವರನ್ನು ಕಥೆಗಾರಿಕೆಯೂ, ಕಲೆಯೂ ಎಲ್ಲಿಯೂ ವಿಶೇಷವಾಗಿ ಕೈಬಿಟ್ಟಿಲ್ಲ. ಅನೈಸರ್ಗಿಕವಾದ ಅದ್ಭುತವು ಒಂದೆರಡು ಕಥೆಗಳಲ್ಲಿ ಇಣಿಕಿದರೂ ಅದು ಅಲ್ಲಿಯ ವಾತಾವರಣದ ಬಣ್ಣವಾಗಿ ಹೊಂದಿಕೊಳ್ಳುವದು ಒಳ್ಳೆಯ ಕಥೆಗಾರನಿಗೆ ಬೇಕಾದ ಭಾವಸಂಪತ್ತು, ವರ್ಣನೋತ್ಸಾಹ, ರಸಿಕತೆ, ಆಶಾವಾದಿತ್ವ ಧೈರ್ಯಗಳು ಇವರಲ್ಲಿವೆ ಎಂಬುದಕ್ಕೆ 'ಪುಷ್ಪಮಾಲೆ'ಯು ಸಾಕಾದ ಸಾಕ್ಷಿ. ಇದಕ್ಕೂ ವಿಶಾಲವಾದ ಕ್ಷೇತ್ರದಲ್ಲಿ, ಇದಕ್ಕೂ ಹೆಚ್ಚಿನ ದರ್ಶನ ಬಲದಿಂದ, ಇದಕ್ಕೂ ರೇಖಾಸಂಪನ್ನವಾದ ಪಾತ್ರಗಳನ್ನು ಕನ್ನಡಿಗರ ಕಣ್ಮನಗಳಿಗೆ ಇವರು ನೀಡುವರೆಂಬ ಭರವಸೆಯನ್ನಿಟ್ಟುಕೊಂಡರೆ ಅದು ತಪ್ಪಾಗದು.

ಸಾಧನಕೇರಿ
ಧಾರವಾಡ } **ದ. ರಾ. ಬೇಂದ್ರೆ**

ಮಾಲೆಯ ಮುಂದಿನ
ಕುಸುಮ

ಮನೋಹರ ಗ್ರಂಥಮಾಲೆಯ ೨೧ನೆಯ
ಕುಸುಮ

# ‘ಸೋಲೋ ಗೆಲವೋ’

ಬರೆದವರು:

ದೇವುಡು ನರಸಿಂಹಶಾಸ್ತ್ರಿ ಎಂ. ಎ.

# ಪುಷ್ಪಮಾಲೆ ೞ ೞ ೞ ೞ ೞ ೞ

ಶ್ರೀವಿಲ್ಲಿಪುತ್ತೂರಿನಲ್ಲಿ ವಿಷ್ಣುಚಿತ್ತರ ಪರ್ಣಶಾಲೆಯ ಮುಂಭಾಗವನ್ನು ಅವರ ಮಗಳು ಆಂಡಾಳ್ ಸಾರಿಸಿ ಆಗ ರಂಗವಲ್ಲಿಯನ್ನು ಇಡುತ್ತಿದ್ದಳು. ಅರುಣೋದಯವಾಗಿ ಆಗ ತಾನೆ ಮುಸುಕು ಮುಗಿಯುತ್ತಿತ್ತು. ವಿಷ್ಣುಚಿತ್ತರು ಕುಟೀರದಿಂದ ಹೊರಗೆ ಬಂದು, ರಂಗವಲ್ಲಿ ಇಡುತ್ತಿದ್ದ ಮಗಳ ಕಡೆನೋಡಿ, ನಿಟ್ಟುಸಿರು ಬಿಟ್ಟು, " ಮಗು ! ಆಂಡಾಳ್ !! ಈ ದಿನ ಗೋಕುಲಾಷ್ಟಮಿಯಮ್ಮ " ಎಂದರು.

" ಮೂರು ದಿನಗಳ ಹಿಂದೆಯೇ ಅದನ್ನು ಹೇಳಿದ್ದೆಯಲ್ಲಾ ಅಣ್ಣಾ!"

" ಹೌದು, ಕಂದಾ ! ಮತ್ತೆ ನೆನಪುಕೊಡಲು ಹೇಳಿದೆ ಅಷ್ಟೆ. ನಮ್ಮ ಸಾಂಕೃತ್ಯ ಎಂಟು ದಿನಗಳಿಂದ ಹಾಸಿಗೆಯಲ್ಲಿ ಮಲಗಿದ್ದಾನೆ. ನಾನು ಅವನಲ್ಲಿಗೆ ಹೋಗಿ ನಾಲ್ಕು ದಿನಗಳಾದುವು. ಈ ದಿನವಾದರೂ ಹೋಗಿ ಹೇಗಿದ್ದಾನೋ ನೋಡಿಕೊಂಡು ಬರುತ್ತೇನೆ. ನೀನು ಅಷ್ಟರ ವೇಳೆಗೆ ಶ್ರೀನಿವಾಸ ಮೂರ್ತಿಯನ್ನು ಚೆನ್ನಾಗಿ ತೊಳೆದು, ಅಲಂಕರಿಸಿ, ಆತನು ಅಲಂಕರಿಸಿದ ಮಂಟಪದಲ್ಲಿ ಬೆಳಗುತ್ತಿರುವಂತೆ ಮಾಡು. ಮೂರ್ತಿಗೆ ಒಂದು ಒಳ್ಳೆಯ ಪುಷ್ಪಮಾಲೆಯನ್ನು ಕಟ್ಟಿಡು. ಸಹಸ್ರನಾಮಾರ್ಚನೆಯಾದಮೇಲೆ ಅದನ್ನು ಅವನಿಗೆ ಅರ್ಪಿಸೋಣ. ದಾಮೋದರನಿಗೆ ಹೇಳಿ ಹಾಲು ಕರೆಯಿಸಿಡು. "

"ಆಗಲಣ್ಣಾ."

ಮುತ್ತೊಮ್ಮ ವಿಷ್ಣುಚಿತ್ತರು ಮಗಳನ್ನು ದೃಷ್ಟಿಸಿ ನೋಡಿ, ಕಣ್ಣೊರಸಿಕೊಂಡು, "ಪಾಪ! ಈ ಎಳೆತನದಲ್ಲಿಯೇ ತಾಯಿಯನ್ನು ಕಳೆದುಕೊಂಡು ತಬ್ಬಲಿಯಾದುದಕ್ಕೆ ಈ ಕಷ್ಟಗಳು!" ಎಂದು ಗತಿಸಿದ ತಮ್ಮ ಜೀವನದ ಗೆಳತಿಯನ್ನು ನೆನೆದು, ಮಗಳ ಕಷ್ಟಕ್ಕಾಗಿ ಮರುಗಿ, ಪರ್ಣಶಾಲೆಯನ್ನು ಬಿಟ್ಟು ಹೊರಟರು.

ಆಂಡಾಳ್ ರಂಗವಲ್ಲಿ ಇಟ್ಟುದನ್ನು ಮುಗಿಸಿದ ಮೇಲೆ ತನ್ನ ಒಲವಿನ ಶ್ರೀನಿವಾಸ ಮೂರ್ತಿಯನ್ನು ಮನದಣಿಯೆ ನೋಡಲು ಕುಟೀರದೊಳಕ್ಕೆ ಹೋದಳು. ಮಂದಾಸನದಲ್ಲಿ ಮಂಡಿತನಾಗಿದ್ದ (ಹಿಂದಿನ ದಿನದ ಅರ್ಪಣೆ) ತುಳಸಿಮಾಲಾಧರನನ್ನು ನೋಡಿ, ಮುಗುಳು ನಗೆಯಿಂದ, "ಪುಷ್ಕರಣಿಗೆ ಹೋಗಿ ಸ್ನಾನಮಾಡಿ ಬಂದು ನಿನಗೆ ಸ್ನಾನಮಾಡಿಸುತ್ತೇನೆ" ಎಂದು ಹೇಳಿ, ಕುಟೀರವನ್ನು ಬಿಟ್ಟು ಪುಷ್ಕರಣಿಯ ಕಡೆ ಹೊರಟಳು.

ಆಕೆಯ ಮನಸ್ಸಿಗೇನೋ ಹೊಳೆಯಿತು; ಹಿಂತಿರುಗಿದಳು. ಕುಟೀರದ ಬಳಿಯಲ್ಲಿ, ಅದರ ಮುಂಭಾಗದಲ್ಲಿದ್ದ ಚಂಪಕ ಮರದ ಬಳಿಬಂದು, ಹೂಗಳ ಭಾರದಿಂದ ಬಾಗಿದ್ದ ರೆಂಬೆಗಳುಳ್ಳ ಆ ಎಳೆಮರವನ್ನು ನೋಡಿ ಸಂತೋಷಚಿತ್ತಳಾದಳು. ಇನ್ನೂ ಸ್ವಲ್ಪ ಮುಂದೆ ಹೋಗಿ, ಬಕುಳದ ಗಿಡವನ್ನು ನೋಡಿ "ಇದರಲ್ಲೂ ಎಷ್ಟು ಹೂಗಳು ಅರಳಿವೆ!" ಎಂದುಕೊಂಡಳು. ಆಮೇಲೆ ಆಕೆ ಕುಟೀರದ ಹಿಂಭಾಗದಲ್ಲಿದ್ದ ಪಾರಿಜಾತದ ಗಿಡದ ಬಳಿ ಬಂದಳು. ಗಿಡದ ಬುಡಲೆಲ್ಲಾ ಕೆಂಪು ಬಿಳಿಯ ಬಣ್ಣಗಳ ಮಿಶ್ರಿತವಾದ ಹಾಸಿಗೆಯಂತಿತ್ತು! "ಇವೆಲ್ಲಾ ನನ್ನ ದೊರೆಗೆ!" ಎಂದು ಆಂಡಾಳ್ ನಸುನಗೆಯಿಂದ ಮನಸ್ಸಿನಲ್ಲಿಯೇ ಉಸುರಿಕೊಳ್ಳುತ್ತಾ "ಪುಷ್ಕರಣಿಯ ಬಳಿ ಇರುವ ತೋಟಕ್ಕೆ ಹೋಗಿ, ಅಲ್ಲಿ ಮಲ್ಲಿಗೆ ಸೇವಂತಿಗೆ ಗಿಡಗಳಲ್ಲಿ ಹೂಗಳು ಹೇಗಿವೆಯೋ ನೋಡುತ್ತೇನೆ. ಈ ದಿನವಾದರೂ ತುಳಸಿಮಾಲಾಧರನನ್ನು ಪುಷ್ಪಮಾಲಾಧರನನ್ನಾಗಿ ಮಾಡುತ್ತೇನೆ. ಹೂ! ಅದೇ ನನ್ನ ಇಷ್ಟ........ ಅವನು ಅದಕ್ಕೆ ಏನನ್ನುತ್ತಾನೆಯೋ....ನಡುವೆ ಒಂದೆರಡು ತುಳಸಿ ಪುಷ್ಪಮಾಲೆಯಲ್ಲಿರಲಿ. ಜತೆಗೆ ಬೇರೆ ಎಲೆಗಳು; ದವನ,

ಮರಗ. ಎಲ್ಲಾ ಸೇರಿದರೆ ಮಾಲೆ ನನ್ನ ರಸಿಕೆಗೆ ಚೆನ್ನಾಗಿ ಒಪ್ಪುತ್ತೆ '' ಎಂದು ಕೊಂಡು ತೋಟದ ಕಡೆ ಬಂದಳು.

ಅದು ಸೊಗಸಾದ ತೋಟ. ದಾಮೋದರನು ಮಲ್ಲಿಗೆಯ ಗಿಡಕ್ಕೆ ನೀರೆರೆಯುತ್ತಿದ್ದನು. ಗುರುವಿನ ಮಗಳು ಬಂದುದನ್ನು ನೋಡಿ, '' ಅಮ್ಮಾ ! ಈ ದಿನ ಬೇಕಾದಷ್ಟು ಹೂ ಬಿಟ್ಟಿದೆ '' ಎಂದನು.

'' ಸಂತೋಷ. ಆ ಏಳುಸುತ್ತಿನಮಲ್ಲಿಗೆ ಗಿಡದಲ್ಲಿ ? ''

'' ಅದರಲ್ಲಿಯೂ ಒಂದಿಪ್ಪತ್ತು ಹೂ ಸಿಕ್ಕುತ್ತದೆಯಮ್ಮಾ. ''

'' ಮಾಲೆಗೆ ಚೆನ್ನಾಗಿ ಅದು ಒಪ್ಪುತ್ತದೆ '' ಎಂದುಕೊಂಡು, '' ಅಣ್ಣನವರು ಸಾಂಕೃತ್ಯನನ್ನು ನೋಡಿ ಬರಲು ಹೋಗಿದ್ದಾರೆ. ನಿನಗೆ ಹಾಲು ಕರೆದಿಟ್ಟು, ಹಣ್ಣುಗಳನ್ನು ಕುಟೀರದಲ್ಲಿ ತಂದಿಡಲು ಹೇಳುವಂತೆ ನನಗೆ ಹೇಳಿಹೋದರು '' ಎಂದು ಆಕೆ ದಾಮೋದರನಿಗೆ ಹೇಳಿದಳು.

'' ನನಗೂ ಮೊನ್ನೆಯೇ ಹೇಳಿದ್ದರು ತಾಯಿ, ಈ ದಿನ ಶ್ರೀ ಕೃಷ್ಣ ದೇವನ ಜನ್ಮಾಷ್ಟಮಿಯೆಂದು '' ಎಂದು ನಗುತ್ತಾ ವಿಷ್ಣುಚಿತ್ತರ ಶಿಷ್ಯ– ಅರವತ್ತು ವರುಷದ ಮುದುಕ– ದಾಮೋದರನು ಹೇಳಿ, '' ಹೂಗಳನ್ನೆಲ್ಲಾ ಕಿತ್ತು ಕುಟೀರದಲ್ಲಿ ತಂದಿಟ್ಟು ಆಮೇಲೆ ಹಾಲು ಕರೆದಿಡುತ್ತೇನೆಯಮ್ಮ'' ಎಂದನು.

'' ಈದಿನ ನಾನೇ ಹೂ ಕಿತ್ತಿಡುತ್ತೇನೆ. ನೀನು ಹಸು ಹೊಡೆದು ಕೊಂಡು ಬಂದು ಹಾಲು ಕರೆದಿಟ್ಟು, ಅರ್ಪಣೆಗೆ ಒಳ್ಳೆ ಹಣ್ಣುಗಳನ್ನು ಆಶ್ರಮದ ಮರಗಳಿಂದ ಕಿತ್ತುಕೊಂಡು ಬಾ'' ಎಂದು ಆಂಡಾಳ್ ದಾಮೋದರನಿಗೆ ಹೇಳಿ, ಪುಷ್ಕರಣಿಯ ಕಡೆ ಹೊರಟಳು.

ಕಮಲಪುಷ್ಪಗಳಿಂದ ಬೆಳಗುತ್ತಿದ್ದ ಪುಷ್ಕರಣಿಯನ್ನು ಆಂಡಾಳ್ ನೋಡಿ, ಹರ್ಷಚಿತ್ತಳಾಗಿ, '' ಕಮಲವೂ ತುಂಬಿ ತುಳುಕಾಡುತ್ತಿದೆ. ಇವನ್ನೂ ಮಾಲೆಗೆ ಸೇರಿಸುತ್ತೇನೆ. ಇಂದು ಸೊಗಸಾದ ಪುಷ್ಪಮಾಲೆ ನನ್ನ ದೊರೆಗೆ ! '' ಎಂದು ನಸುನಕ್ಕು, ಪುಷ್ಕರಣಿಯಲ್ಲಿ ಸ್ನಾನಮಾಡಿ, ಒದ್ದೆಬಟ್ಟೆಯೊಡನೆಯೇ ಕುಟೀರಕ್ಕೆ ಬಂದು, ಮಡಿಯುಟ್ಟು, ತಾನು ಹಿಂದೆ ನೋಡಿದ್ದ ಪುಷ್ಪ ಮತ್ತು ಪತ್ರಗಳನ್ನು ಬುಟ್ಟಿಯ ತುಂಬ ಕಿತ್ತುತಂದು, ಎಲ್ಲವನ್ನೂ ಹಾಸಿದ್ದ ಕೃಷ್ಣಾಜಿನದ ಮೇಲೆ ಹರವಿ, ಮಾಲೆಯನ್ನು ಕಟ್ಟಲು

ಕುಳಿತಳು. ಆಕೆ ತನ್ನ ಮನಸ್ಸು ಒಪ್ಪುವಂತೆ ಒಪ್ಪುವ ಸ್ಥಳದಲ್ಲಿ ಒಪ್ಪುವ ಪುಷ್ಪವನ್ನು ಸೇರಿಸಿ ಮಾಲೆಯನ್ನು ಮಾಡಿದಳು.

ದಾಮೋದರನು ಹಾಲು ತಂದಿಟ್ಟು ಪುಷ್ಪಮಾಲೆಯ ಕಡೆಯೇ ಆಶ್ಚರ್ಯದಿಂದ ನೋಡುತ್ತಾ "ಇಂದು ಮಾಲೆ ಬಹಳ ಚೆನ್ನಾಗಿದೆ ಯಮ್ಮಾ! ಎಂದೂ ನೀನು ಇಷ್ಟು ಸೊಗಸಾದ ಮಾಲೆಯನ್ನು ಕಟ್ಟಿರಲಿಲ್ಲ. ಗುರುಗಳು ಇದನ್ನು ಇಂದು ನೋಡಿ ಬಹಳ ಮೆಚ್ಚುತ್ತಾರೆ!" ಎಂದನು.

ಆಂಡಾಳ್ ಮುದುಕನ ಮಾತನ್ನು ಕೇಳಿ ನಸುನಕ್ಕಳು. "ಅವರ ಒಪ್ಪಿಗೆಗಿಂತಲೂ ನನ್ನ ದೊರೆ ಇದನ್ನು ಮೆಚ್ಚಿದರೆ ನನ್ನಂಥ ಪುಣ್ಯವಂತಳೇ ಇಲ್ಲ!" ಎಂದುಕೊಂಡಳು.

ಆಕೆ ಕಟ್ಟಿದ್ದ ಮಾಲೆಯನ್ನು ಒದ್ದೆಯ ಬಟ್ಟೆಯೊಂದರಲ್ಲಿ ಸುತ್ತಿ ತಟ್ಟೆ ಯೊಂದರಲ್ಲಿಟ್ಟಳು. ಆಮೇಲೆ ದೇವನಿದ್ದ ಸನ್ನಿಧಿಗೆ ಹೋಗಿ, ಹಿಂದಿನ ದಿನದ ಅರ್ಚನೆಯ ಪುಷ್ಪಗಳನ್ನೆಲ್ಲಾ ತಟ್ಟೆಯೊಂದರಲ್ಲಿ ತೆಗೆದಿಟ್ಟು, ಎರಡು ಮಲ್ಲಿಗೆ ಪುಷ್ಪಗಳನ್ನು ಕಣ್ಣಿಗೊತ್ತಿಕೊಂಡು ತುರುಬಿನಲ್ಲಿ ಸಿಕ್ಕಿಸಿಕೊಂಡು, ಶ್ರೀನಿವಾಸ ಮೂರ್ತಿಯನ್ನು ಆ ತಟ್ಟೆಯಲ್ಲಿದ್ದ ಪುಷ್ಪಗಳ ಮೇಲಿಟ್ಟಳು. ಆಕೆ ದೇವನ ಮಂದಾಸನವನ್ನು ಪುಷ್ಪ ಮತ್ತು ಲತೆ, ತಳಿರು ಮತ್ತು ತೋರ ಣಗಳಿಂದ ಮನಸ್ಸು ತೃಪ್ತಿಯಾಗುವಂತೆ ಅಲಂಕರಿಸಿದಳು. ಮಂದಾಸನದ ಮುಂದೆ ಮಂಟಪವೊಂದನ್ನು ಕಟ್ಟಿ, ದೊರೆತ ಹಣ್ಣು, ಹಂಪಲು, ಹೂ, ಕಾಯಿಗಳಿಂದ ಅದನ್ನು ಅಲಂಕರಿಸಿ, ಮುಂಭಾಗದಲ್ಲಿ ಎರಡು ಬಾಳೆ ಕಂದಲ ಗಳನ್ನು ಕಟ್ಟಿ, ಬೆಳಗ್ಗೆಯೇ ಸಾರಿಸಿದ್ದ ದೇವನ ಗೃಹಕ್ಕೆ ರಂಗವಲ್ಲಿ ಇಟ್ಟು, ಎಲ್ಲವನ್ನೂ ಒಮ್ಮೆ ನೋಡಿ "ಸರಿ!" ಎಂದುಕೊಂಡು, ಶ್ರೀನಿವಾಸ ಮೂರ್ತಿಯಿದ್ದ ತಟ್ಟೆಯನ್ನು ಹೊತ್ತುಕೊಂಡು, ಅದನ್ನು ತೊಳೆಯಲು ಅವಳು ಪುಷ್ಕರಣಿಗೆ ಹೊರಟಳು.

ಆಂಡಾಳ್ ಮೂರ್ತಿಗೆ ಚೆನ್ನಾಗಿ ಸ್ನಾನ ಮಾಡಿಸಿ, ಅದನ್ನು ಮಂದಾ ಸನದಲ್ಲಿ ಮಂಡಿಸಿದಳು. ಆಕೆ ಅದನ್ನು ಪೀತವಸ್ತ್ರನನ್ನಾಗಿ ಸಿಂಗರಿಸಿ ದಳು; ಹಬ್ಬದ ದಿನಗಳಲ್ಲಿ ಮಾತ್ರವಿಡುವ ಕಿರೀಟವನ್ನು ಮೂರ್ತಿಯ ತಲೆಯ ಮೇಲಿಟ್ಟಳು. ಆ ಪೀತವಸ್ತ್ರಕ್ಕೂ, ಬೆಳಗುತ್ತಿರುವ ಆ ವಜ್ರ ಕಿರೀ ಟಕ್ಕೂ ಮೂರ್ತಿ ತೇಜೋಮೂರ್ತಿಯಾಗಿದ್ದನು! "ನನ್ನ ದೊರೆ!

ಪ್ರಪಂಚದಲ್ಲೆಲ್ಲಾ ನೀನೇ ರೂಪವಂತ" ಎಂದು ಆ ವಿಗ್ರಹವನ್ನು ಆಂಡಾಳ್ ಮುದ್ದಿಟ್ಟು, "ಪುಷ್ಪಮಾಲೆ ಹಾಕಿದ ಮೇಲೆ ಸಹಾರ ವಕ್ಷನಾದ ನಿನ್ನನ್ನು ಮನಸದಣಿಯೆ ನೋಡುತ್ತೇನೆ. ಮಾಲೆಯನ್ನು ಮೊತ್ತ ಮೊದಲು ನಾನು ಹಾಕಿಕೊಂಡು ನೋಡಿ, ಅದು ನನ್ನ ಮನಸ್ಸಿಗೆ ಚೆನ್ನಾಗಿ ದೆಯೆಂದು ಒಪ್ಪಿದರೆ ಆಮೇಲೆ ನಿನಗೆ ಅದನ್ನೇ ಅರ್ಪಿಸುತ್ತೇನೆ. ಇಲ್ಲವೆ ಒಪ್ಪುವಂಥ ಬೇರೆ ಮಾಲೆಯನ್ನು ಕಟ್ಟಿ ಅರ್ಪಿಸುತ್ತೇನೆ" ಎಂದು ಇನಿಯನ ಮುಂದೆ ಒಯ್ಯಾರದಿಂದ ಹೇಳುವ ಇನಿಯಳಂತೆ ನುಡಿದಳು.

ಸಂಜೆಯಾಯಿತು. "ಅಣ್ಣನವರು ಬರುವ ಹೊತ್ತು. ಅಡಿಗೆಯೆಲ್ಲಾ ಆಗಿದೆ. ಇನ್ನು ಪುಷ್ಕರಣಿಗೆ ಹೋಗಿ ಮತ್ತೊಮ್ಮೆ ಸ್ನಾನ ಮಾಡಿ, ಸಿಂಗರಿಸಿಕೊಂಡು ನನ್ನ ಸ್ವಾಮಿಗೆ ಆತ್ಮಸಮರ್ಪಣೆ ಮಾಡುತ್ತೇನೆ" ಎಂದುಕೊಂಡು ಆಂಡಾಳ್ ಪುಷ್ಕರಣಿಗೆ ಹೋಗಿ ಸ್ನಾನಮಾಡಿ, ಬಿಳಿಯ ರೇಷ್ಮೆಯ ಸೀರೆಯುಟ್ಟು, ತುರುಬಿನಲ್ಲಿ ಹಾರ ಕಟ್ಟಿ ಮಿಕ್ಕ ಹೂಗಳಲ್ಲಿ ತಾನು ಕಟ್ಟಿಟ್ಟಿದ್ದ ದಂಡೆಯನ್ನು ಮುಡಿದು, ದೇವನಿಗಾಗಿ ಕಟ್ಟಿಟ್ಟಿದ್ದ ಪುಷ್ಪಮಾಲೆ ಇಟ್ಟಿದ್ದ ತಟ್ಟೆಯನ್ನು ತೆಗೆದುಕೊಂಡು ಪುಷ್ಕರಣಿಯ ಕಡೆ ಹೊರಟಳು.

ಆಗ ಪುಷ್ಕರಣಿಯ ನೀರು ಅಲೆಗಳಿಲ್ಲದೆ ಶಾಂತವಾಗಿತ್ತು. ಅದರಲ್ಲಿದ್ದ ತಾವರೆ ಹೂಗಳು ಸ್ವಲ್ಪಸ್ವಲ್ಪವಾಗಿ ಮುಚ್ಚಿಕೊಳ್ಳುತ್ತಿದ್ದುವು. ಆಂಡಾಳ್ ತಟ್ಟೆಯಿಂದ ಪುಷ್ಪಮಾಲೆಯನ್ನು ಕೈಗೆ ತೆಗೆದುಕೊಂಡು, ಅದನ್ನು ತನ್ನ ಕೊರಳಿಗೆ ಹಾಕಿಕೊಂಡು, ತನ್ನ ಪ್ರತಿಬಿಂಬವನ್ನು ಪುಷ್ಕರಣಿಯ ನಿರ್ಮಲೋದಕದಲ್ಲಿ ನೋಡಿದಳು. ನಕ್ಕಳು! "ನೀನಿಂದು ಈ ಮಾಲೆಯನ್ನು ಒಪ್ಪಲೇ ಬೇಕು ದೊರೆ!" ಎಂದುಕೊಂಡು, ಮಾಲೆಯನ್ನು ಪುನಃ ಒದ್ದೆಯ ಬಟ್ಟೆಯಲ್ಲಿಯೇ ಸುತ್ತಿಟ್ಟು, ಅದನ್ನು ತಟ್ಟೆಯಲ್ಲಿಟ್ಟು, ಆ ತಟ್ಟೆಯನ್ನು ಹೊತ್ತುಕೊಂಡು ಕುಟೀರದ ಕಡೆ ಹೊರಟಳು.

ಆ ವೇಳೆಗೆ ವಿಷ್ಣುಚಿತ್ತರು ಆಶ್ರಮಕ್ಕೆ ಬಂದಿದ್ದರು. ಮಗಳು ಕುಟೀರದಲ್ಲಿಲ್ಲದಿದ್ದುದನ್ನು ನೋಡಿ, ಅವಳನ್ನು ಇದಿರು ನೋಡುತ್ತಾ ಕುಟೀರದ ಮುಂಬಾಗಿಲಲ್ಲಿ ಕುಳಿತಿದ್ದರು. ಮಗಳನ್ನು ನೋಡಿದ ಅವರು ನಸುನಗೆಯಿಂದ, "ಸುರಿತ ಮುತ್ತೈದೆಯಂತೆ ಮನೆಯ ಕೆಲಸವನ್ನು ಈದಿನ ಮಾಡಿದ್ದೀ, ಮಗು! ಯಾವನು ಪುಣ್ಯ ಮಾಡಿದ್ದಾನೋ ನಿನ್ನ ಕೈಹಿಡಿಯಲು'

ಎಂದು ಬಾಷ್ಪಲೋಚನರಾದರು. ತಂದೆಯ ಮಾತನ್ನು ಕೇಳಿ ಲಜ್ಜೆಯಿಂದ ಆಂಡಾಳ್ ತಲೆತಗ್ಗಿಸಿದಳು. ವಿಷ್ಣುಚಿತ್ತರು ಮಗಳ ಕೈಯಲ್ಲಿದ್ದ ತಟ್ಟೆಯ ಕಡೆ ನೋಡಿ, ' ಅದರಲ್ಲಿ ಸುತ್ತಿಟ್ಟಿರುವುದೇನು ಮಗು ? '' ಎಂದು ಕೇಳಿದರು.

'' ದೇವನಿಗೆ ಪುಷ್ಪಮಾಲೆ '' ಎಂದು ಆಂಡಾಳ್ ತಂದೆಗೆ ಹೇಳಿ, ಕುಟೀರದೊಳಕ್ಕೆ ನಡೆದಳು.

* * * * *

ರಾತ್ರಿ ಸುಮಾರು ಒಂಬತ್ತು ಗಂಟೆ. ದೇವಮಂದಿರದಲ್ಲಿ ನಂದಾದೀಪವು ಉರಿಯುತ್ತಿತ್ತು. ವಿಷ್ಣುಚಿತ್ತರು ಶ್ರೀನಿವಾಸ ಮೂರ್ತಿಯನ್ನು ಸಹಸ್ರನಾಮದಿಂದ ಅರ್ಚಿಸುತ್ತಿದ್ದರು. ದೇವಮಂದಿರದ ಮಧ್ಯಭಾಗದಲ್ಲಿ ಕೃಷ್ಣಾಜಿನವೊಂದು ಹಾಸಿತ್ತು. ಆಂಡಾಳ್ ಅದರ ಮೇಲೆ ಒಂದಂಚಿನಲ್ಲಿ ನಿಂತು ಅರ್ಚನಾಶೋಭಿತನಾದ ಮೂರ್ತಿಯನ್ನು ಮನದಣಿಯೆ ನೋಡುತ್ತಿದ್ದಳು.

ಸಹಸ್ರನಾಮಾರ್ಚನೆಯು ಮುಗಿಯಿತು. ವಿಷ್ಣುಚಿತ್ತರು ಮುಂದೆ ತಟ್ಟೆಯಲ್ಲಿದ್ದ ಪುಷ್ಪಮಾಲೆಯನ್ನು ದೇವನಿಗರ್ಪಿಸಲು ಕೈಗೆ ತೆಗೆದುಕೊಂಡರು. ಆಂಡಾಳ್ ಮೂರ್ತಿಯನ್ನೇ ದೃಷ್ಟಿಸಿ ನೋಡುತ್ತಿದ್ದಳು. ವಿಷ್ಣುಚಿತ್ತರು ಮಾಲೆಯನ್ನು ನೀರಿನಿಂದ ಪ್ರೋಕ್ಷಿಸಿ, ದೇವನಿಗೆ ಹಾಕಲು ಅದನ್ನು ಎರಡು ಕೈಗಳಿಂದಲೂ ಹಿಡಿದರು. ನಂದಾದೀಪದ ಬೆಳಕಿನಿಂದ ಮಾಲೆಯು ಬೆಳಗಿತು. ಪುಷ್ಪಮಾಲೆಯ ಸೊಗಸನ್ನು ನೋಡಿ ನಸುನಗೆಯಿಂದ ದೇವಮೂರ್ತಿಯನ್ನು ಒಮ್ಮೆ ನೋಡಿ, ಆಮೇಲೆ ಮಗಳನ್ನು ನೋಡಿ, ದೇವನ ಕೊರಳಿಗೆ ಅರ್ಪಿಸಲು ಮೊದಲು ಆ ಮಾಲೆಯನ್ನು ದೃಷ್ಟಿಸಿ ನೋಡಿದರು. ನಿಟ್ಟುಸಿರು ಬಿಟ್ಟರು ! ಮಗಳನ್ನು ಕೆಂಗಣ್ಣುಗಳಿಂದ ದುರುಗುಟ್ಟಿಕೊಂಡು ನೋಡಿದರು ! ಕುಪಿತನಾದ ತಂದೆಯನ್ನು ನೋಡಿ ಆಂಡಾಳ್ ನಡುಗಲು ಪ್ರಾರಂಭಿಸಿದಳು. '' ಹುಡುಗಿ !.... ನೀನೇ ಇದನ್ನು ಹಾಕಿಕೋ. ಇದೇನು ನಿನ್ನ ಕುರುಳು ಈ ಮಾಲೆಯಲ್ಲಿ ! '' ಎಂದು ಆ ಮಾಲೆಯನ್ನು ಮಗಳ ಕಡೆ ಕೋಪದಿಂದ ಬಿಸಾಡಿದರು. ಅದು ಹಾಸಿದ್ದ ಕೃಷ್ಣಾಜಿನದ ಮೇಲೆ ಆಂಡಾಳುವಿನ ಪಾದಗಳ ಬಳಿ ಬಿದ್ದಿತು !

ಆಂಡಾಳ್ ಅದನ್ನು ಎರಡು ಕೈಗಳಿಂದ ಎತ್ತಿ ಕಣ್ಣಿಗೊತ್ತಿಕೊಂಡು, "ಯಾಕಣ್ಣಾ ಮಾಲೆಯನ್ನು ಹೀಗೆ ಬಿಸಾಡುತ್ತೀ! ಪುಷ್ಪಮಾಲೆ ಚೆನ್ನಾಗಿಲ್ಲವೇ? ದೇವನಿಗೆ ಒಪ್ಪುವುದಿಲ್ಲವೇ ಇದು? ಕಟ್ಟುವಾಗಲೇ ನಾನು ಕೊರಳಿಗಿದನ್ನು ಹಾಕಿಕೊಂಡು ದೇವನಿಗೆ ಒಪ್ಪುವ ಹಾಗಿದೆಯೋ ಇಲ್ಲವೋ ಎಂದು ಆಗಿಂದಾಗ್ಗೆ ಪರೀಕ್ಷಿಸಿ ಮಾಲೆಯನ್ನು ಪೋಣಿಸಿದ್ದೇನೆ. ನಾನು ದೇವನಿಗೆ ಮಾಲೆ ಕಟ್ಟುವಾಗಲೆಲ್ಲ ಹಾಗೆಯೇ ಮಾಡುತ್ತಿದ್ದೇನೆ. ಎಂದೂ ಇಲ್ಲದ ತಪ್ಪು ಮಾಲೆಯಲ್ಲಿ ಈ ಹೊತ್ತು ಏನಿದೆಯಣ್ಣಾ!" ಎಂದು ಮುಗ್ಧತೆಯಿಂದ ತಂದೆಯನ್ನು ಕೇಳಿದಳು.

"ಸಾರ್ಥಕವಾಯಿತು ನೀನು ಪೋಣಿಸಿದ ಮಾಲೆಗಳಿಂದ ದೇವನನ್ನು ಇಷ್ಟು ದಿನಗಳಿಂದಲೂ ಪೂಜೆಮಾಡಿ!" ಎಂದು ನಿರಾಶರಾಗಿ, ಹಾಗೆ ಮೂರ್ತಿಯನ್ನು ಆರಾಧಿಸಿದುದಕ್ಕಾಗಿ ಆತ ಎಲ್ಲಿ ಕುಪಿತನಾಗಿರುವನೋ ಎನ್ನುವ ಭಯದಿಂದ ವಿಷ್ಣುಚಿತ್ತರು ಸ್ತಂಭೀಭೂತರಾದರು!

ಸ್ವಲ್ಪ ಹೊತ್ತಾದಮೇಲೆ ವಿಷ್ಣುಚಿತ್ತರು ಹಾಗೂ ಹೀಗೂ ದೇವನನ್ನು ಕರ್ಪೂರದಾರತಿಯಿಂದ ಬೆಳಗಿ, ದೇವನ ಪ್ರಸಾದವಾದ ಹಾಲನ್ನು ಮೂರು ಗುಟುಕು ಕುಡಿದು, ಮಗಳ ಕಡೆ ಕೂಡ ನೋಡದೆ, ಪಕ್ಕದಲ್ಲಿ ಹಾಸಿದ್ದ ಕೃಷ್ಣಾಜಿನದ ಮೇಲೆ ಮಲಗಿದರು.

ಆಂಡಾಳ್ ಹೀಗೆ ತಿಳಿಯದೆ, ತಾನು ಮಾಡಿದ ನಿಷೇಧವಾದ ಕೆಲಸಕ್ಕಾಗಿ ತನ್ನನ್ನು ತಾನೇ ಬೈದುಕೊಳ್ಳುತ್ತಾ ಬಹಳ ಹೊತ್ತು ಅತ್ತಳು! ಅವಳ ಕೈಯಲ್ಲಿ ಆ ಪುಷ್ಪಮಾಲೆ ಹಾಗೆಯೇ ಇದ್ದಿತು!

ನಡುರಾತ್ರಿ. ಆಂಡಾಳ್ ಅತ್ತು ಅತ್ತು ಕೆಂಪಗಾಗಿ ಬಾತುಕೊಂಡಿದ್ದ ತನ್ನ ಕಣ್ಣುಗಳನ್ನೊರಸಿಕೊಂಡು, ಶ್ರೀನಿವಾಸ ಮೂರ್ತಿಯ ಕಡೆ ನೋಡಿದಳು. ಆತನ ಬಳಿಯಿದ್ದ ನಂದಾದೀಪವು ಮಾತ್ರ ಶಾಂತವಾಗಿ ನಿಶ್ಚಲತೆಯಿಂದ ಉರಿಯುತ್ತಿತ್ತು! ನಿತ್ಯ ಮೂರ್ತಿಯ ಮುಖದಲ್ಲಿದ್ದ ಕಳೆಯನ್ನು ಅಂದು ಆಂಡಾಳ್ ಕಾಣಲಿಲ್ಲ. ಆಕೆ ತಂದೆಯ ಕಡೆ ನೋಡಿದಳು. ಆತನು ಕಣ್ಣುಮುಚ್ಚಿ ಧ್ಯಾನಾಸಕ್ತನಾಗಿದ್ದನು. ಆಕೆ ಮಂದಾಸನದ ಬಳಿ ಹೋಗಿ ಮೊಳಕಾಲೂರಿ, ಕೈಗಳಲ್ಲಿ ಪುಷ್ಪಮಾಲೆಯಿರಲು, "ದೊರೆಯೇ! ನಾನಿಂದು ತಪ್ಪು ಮಾಡಿದ್ದರೆ ನಿನ್ನರಸಿಯನ್ನು ಕ್ಷಮಿಸು. ಎಲ್ಲಿ ನಿನ್ನ ನಗುಮುಖ

ವನ್ನು ನೋಡಲು ಕಾತರಳಾಗಿರುವ ನನಗೆ ನಿನ್ನ ನಗುಮುಖವನ್ನು ತೋರಿಸು!" ಎಂದು,ಅದನ್ನು ಮೂರ್ತಿಯ ಕೊರಳಿಗೆ ಹಾಕಿದಳು. ಸಹಾರ ವಕ್ಷನಾದ ಸ್ವಾಮಿಯ ನಗುಮುಖವನ್ನು ನೋಡಿ ಆಂಡಾಳ್ ಸಂತೋಷ ದಿಂದ ಆತನನ್ನು ಮುದ್ದಿಟ್ಟಳು !

ಧ್ಯಾನಾಸಕ್ತರಾಗಿದ್ದ ವಿಷ್ಣುಚಿತ್ತರು ಎಚ್ಚತ್ತು ಮಗಳ ವರ್ತನೆ ಯನ್ನು ನೋಡಿ, ಮೂರ್ತಿಯನ್ನು ದೃಷ್ಟಿಸಿ ನೋಡಿದರು. ಎಂದಿನಂತೆ ಆತನು ಪುಷ್ಪಮಾಲಾಧರನಾಗಿ ರಾರಾಜಿಸುತ್ತಿದ್ದನು! ಆಗ ಅವರು "ದೇವಾ ನಿನಗೆ ಇದೇ ಇಷ್ಟವೇನೋ !! ನಾನು ವಿಷ್ಣುಚಿತ್ತ ! ಆದರೂ ನಿನ್ನ ಗುಣ ವನ್ನರಿಯದ ಮೂಢ.ಅಯ್ಯೋ ನನ್ನಂಥ ಪಾಪಿಗೆ ಆ ಹೆಸರೇಕೆ !" ಎಂದು, "ಆಂಡಾಳ್ ! ಮಗೂ !! ನನ್ನ ತಪ್ಪನ್ನು ಕ್ಷಮಿಸು. ಕಂದಾ ! ನೀನು ದೇವನರಸಿ ಎನ್ನುವುದು ನನಗೇನು ಗೊತ್ತು ! " ಎಂದು ಮಂದಾಸನದ ಬಳಿಗೆ ಹೋಗಿ, ಅಂಜಲೀಬದ್ಧಳಾಗಿದ್ದ ಮಗಳ ಕೈಹಿಡಿದು ದೈನ್ಯದಿಂದ ಹೇಳಿದರು.

ಆಂಡಾಳ್ ತಂದೆಯ ರೀತಿಯನ್ನು ನೋಡಿ ಆಶ್ಚರ್ಯದಿಂದ ಸ್ತಂಭೀ ಭೂತಳಾಗಿ, ತಂದೆಗೆ ಏನುತ್ತರವನ್ನೂ ಕೊಡದೆ ಆತನನ್ನು ದೈನ್ಯದಿಂದ ನೋಡಿ, ಎಲ್ಲರನ್ನೂ ಆಶೀರ್ವದಿಸೆಂದು ಬೇಡುವ ದೃಷ್ಟಿಯಿಂದ ದೇವನನ್ನು ನೋಡಿದಳು !

ದೇವನ ನಗುಮುಖವನ್ನು ನೋಡುತ್ತಾ ವಿಷ್ಣುಚಿತ್ತರು, ದೇವ– ಇಲ್ಲ– ಪತಿ–ಭಕ್ತಿಯನ್ನು ಕಂಡು, " ಆಂಡಾಳ್ ! ನೀನು ನಾಚ್ಚಿ ಯಾರ್!! ನೀನು ನಿನ್ನಿಷ್ಟ ಬಂದ ಹಾಗೆ ದೇವನ ಸೇವೆಯನ್ನು ಮಾಡು, ಮಗು !....ದೇವಾ ನನ್ನನ್ನು ಕ್ಷಮಿಸು !" ಎಂದು ದೇವನಿಗೆ–ಪುಷ್ಪಮಾಲಾ ಧರನಾದ ದೇವನಿಗೆ–ಸಾಷ್ಟಾಂಗನಮಸ್ಕಾರವನ್ನು ಮಾಡಿದರು !



# ಆಲಂಗಿರಿ

'ಏನಕ್ಕ, ಹೂ ಕೀಳುತ್ತಿದ್ದೀ ?'

'ನನಗೆ ಬೇಕಾದ್ದು ಹೂವಲ್ಲದೆ ಮತ್ತೇನು ?'

'ಹಾರ ಕಟ್ಟಿ ಯಾರ ಕೊರಳಿಗೆ ಹಾಕುತ್ತೀ ?'

'ಯಾರ ಕೊರಳಿಗೆ ಹಾಕಬೇಕೋ ಅವರಿಗೇ.'

'ಪಾದಷಹರ ಕೊರಳಿಗೋ ?'

'ಅವರಿಗೂ ಹೌದು.'

'ಹಾಗಾದರೆ ಮತ್ತೊಬ್ಬರಿನ್ನಾರು ?'

'ನನ್ನ ದೇವರು.'

'ಏನು ! ಆ ಕಲ್ಲು ಪ್ರತಿಮೆ !'

'ನಿನಗೆ ಕಲ್ಲು; ಅದೇ ನನಗೆ ದೇವರು'

'ಇನ್ನೂ ನಲವತ್ತೈದು ದಿನ ಇರುವ ಅಭಿಷೇಕಕ್ಕಾಗಿ ಈಗಿನಿಂದಲೂ ಹೂ ಕಟ್ಟುತ್ತೀಯಾ ?'

'ನೀನು ಹಾಸ್ಯಮಾಡಬೇಡ ಹೋಗು.'

'ಹಾಸ್ಯವೇನಕ್ಕ ಇದರಲ್ಲಿ ? ಒಂದು ತಿಂಗಳ ಹಿಂದೆ ಪಾದಷಹರು ಸೈನ್ಯ ಕಳುಹಿಸಿದ್ದಾರೆ; ಆ ವಿಗ್ರಹವನ್ನು ತಂದು, ಜುಮ್ಮಾಮಸೀದಿಯ ಮೆಟ್ಟಲಿಗೆ ಹಾಕಿಸಿ ಎಲ್ಲರೂ ಅದನ್ನು ತುಳಿಯುವಂತೆ ಮಾಡುತ್ತಾರೆ;

ನೀನೂ ಅದರ ಮೇಲೆ ನಡೆಯಬೇಕೆಂದು ಬಲಾತ್ಕರಿಸುತ್ತಾರೆ. ಆಗ ನಿನ್ನ ದೇವರನ್ನು ನೋಡಬೇಕು,–ನನ್ನ ಮಾತು ಪಾದಷಹರಲ್ಲಿ ಹೇಗೆ ನಡೆಯುತ್ತೆ ಕಾಣೆಯಾ?'

'ನಿನ್ನ ಮಾತು ನಿನ್ನ ರೂಪಿರುವವರೆಗೂ ನಡೆಯುತ್ತೆ. ಆಮೇಲೆ ನಿನ್ನ ಪಾಡು ನಾಯಿಗೂ ಬೇಡ. ಅಲ್ಲಿ ದೇವರಿಗೂ ನಿನ್ನಂಥ ಪಾಪಿಯ ಮೇಲೆ ಕೃಪೆ ಇರುವುದಿಲ್ಲ. ಇಲ್ಲಿ ಪಾದಷಹರೂ ಕೈ ಬಿಡುವರು.'

'ನೀನು ಹಾಳಾಗು!' ಎಂದು ರೋಷದಿಂದ ಹೇಳುತ್ತಾ, ಮೊದಲು ಮಾತನಾಡಿದವಳು ಕಣ್ಣೀರು ಸುರಿಸಿದಳು.

ಸ್ವಲ್ಪ ಹೊತ್ತು ಇಬ್ಬರೂ ತಲೆ ಬಗ್ಗಿಸಿಕೊಂಡು ಸುಮ್ಮನಿದ್ದರು. ಆಮೇಲೆ ಒಬ್ಬರ ಮುಖವನ್ನೊಬ್ಬರು ದುರುಗುಟ್ಟಿಕೊಂಡು ನೋಡಿದರು. ಇವರಿಬ್ಬರ ನಡುವೆ ಮುದುಕನೊಬ್ಬನು ಬಂದು ನಿಂತನು. ಅವನು ಬಿಳಿಯ ಷರಾಯಿಯನ್ನು ಹಾಕಿಕೊಂಡಿದ್ದನು. ಮೊಳಕಾಲವರೆಗೂ ಇದ್ದ ಅದೇ ತರದ ನಿಲುವಂಗಿ. ಕಾಲಿನಲ್ಲಿ ತುರ್ಕಿಯ ಚಪ್ಪಲಿ. ತಲೆಯ ಮೇಲೆ ಜರ ತಾರಿಯ ಪೇಟ. ಬಲಗೈಯಿಂದ ಗಡ್ಡವನ್ನು ಸವರುತ್ತಾ, ತನ್ನ ಹೆಂಡಿರ ಕಡೆ ತಿರುಗಿ, 'ಯಾಕೆ ಅಳುವೆ ಉದಯ?' ಎಂದನು.

ಈತನೇ ಮೊಗಲ್ ಚಕ್ರವರ್ತಿಯಾದ ಅವರಂಗಜೇಬ್. ಅವನನ್ನು ಆಲಂಗೀರ್ ಎಂದೂ ಕರೆಯುತ್ತಿದ್ದರು. ಅಳುತ್ತಿದ್ದವಳು ಅವನ ಎರಡ ನೆಯ ಹೆಂಡತಿ ಉದಯಪುರಿ. ಅವಳ ರೂಪನ್ನು ಮೋಹಿಸಿಯೇ, ಅವಳನ್ನು ಕೂಡಿದ್ದ ತನ್ನ ಅಣ್ಣ ದಾರನನ್ನೂ ಕೊಂದು, ಬಡವಳಾಗಿದ್ದರೂ ಅವಳನ್ನೇ ಅವರಂಗಜೇಬನು ವರಿಸಿದ್ದು. ಜಾತಿಯಲ್ಲಿ ಅವಳು ಕ್ರಿಸ್ತರವಳು. ಅವಳಲ್ಲಿ ಅವನಿಗೆ ವಿಶ್ವಪ್ರೇಮ. ಅವಳ ಮಾತೆಂದರೆ ಅವನಿಗೆ ವೇದವಾಕ್ಯ. ಅವನು ಅವಳ ಮನೋಭೀಷ್ಟಗಳನ್ನೆಲ್ಲಾ ಸಲ್ಲಿಸುತ್ತಿದ್ದ. ಎರಡನೆಯವಳು ಯೋಧ ಪುರದ ಮಹಾರಾಣನ ತಂಗಿ. ರಜಪೂತೆ; ವಿಷ್ಣುಭಕ್ತೆ; ಪಾದಷಹನ ಪಟ್ಟ ಮಹಿಷಿ. ಹೆಸರಿಗೆ ಮಾತ್ರ ಇವಳು ರಾಣಿ. ಎಲ್ಲಾ ಸೌಭಾಗ್ಯಗಳಲ್ಲಿಯೂ ಉದಯಳೇ ಚಕ್ರವರ್ತಿನಿ.

ಪಾದಷಹನ ಮೃದುಮಾತನ್ನು ಕೇಳಿ ಉದಯಳು ತನ್ನ ತೊಯ್ದು

ಕಣ್ಣಿನ ಕಟಾಕ್ಷವನ್ನು ಬೀರುತ್ತಾ, 'ದೊರೆಯೇ! ಅಕ್ಕ ನನ್ನನ್ನು ಅವಮಾನ ಪಡಿಸಿದಳು' ಎಂದು ಹೇಳಿದಳು.

'ಹೇಗೆ?' ಎಂದು ಸಸುನಗೆಯಿಂದ ಅವರಂಗಜೇಬನು ಅವಳನ್ನು ಕೇಳಿದನು.

'ಅಕ್ಕ ಹೂ ಕೊಯ್ಯುತಿದ್ದಳು. 'ಯಾರ ಕೊರಳಿಗೆ ಹಾಕಲು ಹಾರ? ಕಲ್ಲಿನ ಕೊರಳಿಗೋ?' ಎಂದೆ. 'ನಿನ್ನ ರೂಪಿರುವವರೆಗೂ ನಿನಗೆ ಗೌರವವಿದೆ. ಆಮೇಲೆ ದೇವ ಮತ್ತು ಪಾದಷಹರಿಂದ ಬಿಡಲ್ಪಟ್ಟ ನೀನು ಸತ್ತ ನಾಯಿಯಂತಿರುತ್ತೀ' ಎಂದಳು. ದೊರೆಯೇ! ರಾಣಿಯಾಗಿದ್ದುಕೊಂಡೂ ಹೀಗೆಲ್ಲ ಮಾತುಗಳು....'

'ಯೋಧು, ನಿನಗೆ ತಲೆಹರಟೆ ಬಹಳವಾಗಿ ಹೋಗಿದೆ. ಹದ್ದು ಮೀರಿ ಮಾತನಾಡಲು ಪ್ರಾರಂಭಿಸಿದ್ದೀ. ನಿನಗೆ ಬೇಕು....'

'ಪಾದಷಹ! ತಮ್ಮ ಸೇವಕಳು ಯಾವ ತಪ್ಪನ್ನೂ ಮಾಡಿಲ್ಲ. ಮಹಾರಾಣಿಯವರೇ ಇಲ್ಲಿಗೆ ಬಂದು ಕೆಣಕಿದರು. ಗುಲಾಮರಿಗೂ ಸಹ ಸ್ವಾತಂತ್ರ್ಯವುಂಟು; ದೇವನನ್ನು ಪೂಜಿಸುವ ಹಕ್ಕುಂಟು.'

'ಇರಬಹುದು ಆದರೆ ಅವಳನ್ನು ಯಾಕೆ ಹಾಗೆ ಬೈದೆ?'

'ಆಕೆ ನನ್ನ ದೇವನನ್ನು ಬೈದಳು. ನಾನು ಆಕೆಯ ದೇವರ ಮೇಲೆ ಏನೂ ಹೇಳಲಿಲ್ಲ. ಅವಳ ದೇವನೂ ನನ್ನ ದೇವನೇ. ಅತನೇ ವಿಶ್ವಮೂರ್ತಿ. ಆಕೆಗೆ 'ರೂಪು ಶಾಶ್ವತವಲ್ಲ; ಕೀರ್ತಿಯೊಂದೇ ಸ್ಥಿರ' ಎಂದೆ. ಅಷ್ಟೆ.'

'ನಿನ್ನದು ಬಲು ಸತ್ಯದೇವರೋ! ನಿನ್ನಿಂದಲೇ ಅದನ್ನು ತುಳಿಸುತ್ತೇನೆ ನೋಡುವೆಯಾ?'

'ಸತ್ಯವೊಂದಿದ್ದರೆ ಅದು ಎಂದಿಗೂ ಆಗದು, ಪ್ರಭುವೆ!'

'ಎಂದಿಗೂ ಆಗದೋ? ಆಗಲಿ ನೋಡೋಣ. ನಾಳೆಯ ತಿಂಗಳ ಪಾಡ್ಯಮಿ ಅಲ್ಲಿ ಪ್ರತಿಷ್ಠೆ. ಅದಾದ ಇನ್ನೊಂದು ಪಾಡ್ಯಮಿಯ ಹೊತ್ತಿಗೆ ಅದನ್ನು ಇಲ್ಲಿಗೆ ತರಿಸಿಹಾಕಿ ಭಕ್ತಳಾದ ನಿನ್ನಿಂದಲೇ ತುಳಿಸುತ್ತೇನೆ' ಎಂದು ಕಣ್ಣುಗಳನ್ನು ಕೆಂಪಗೆ ಮಾಡಿಕೊಂಡು ಪಾದಷಹ ಹೇಳಿದನು.

'ನಾನು ಅದರ ಮೇಲೆ ಅಂದು ಪಾದಷಹರ ಪಾದಗಳನ್ನು ತೊಳೆ

ಯುತ್ತೇನೆ ' ಎಂದು ಉದಯಳು ನಸುನಗೆಯಿಂದ ಕೂಡಿದ ವೈಯಾರ ದೊಡನೆ ಹೇಳಿದಳು.

ಯೋಧಳು ಏನು ಉತ್ತರವನ್ನೂ ಕೊಡಲಿಲ್ಲ. ಸುಮ್ಮನೆ ಕಣ್ಣೀರು ಸುರಿಸುತ್ತಾ ನಿಂತಳು.

ಆಗ ದಾಸಿಯೊಬ್ಬಳು ಬಂದು, ಪಾದಷಹನಿಗೆ ನಮಸ್ಕರಿಸಿ, ಕಾಗದ ವೊಂದನ್ನು ಕೊಟ್ಟಳು. ಅದನ್ನು ಅವನು ಒಡೆದು ನೋಡಿ, ' ಯೋಧು ! ನಿನ್ನ ಅಣ್ಣ ಕಾಗದ ಬರೆದಿದ್ದಾನೆ. ನಿನ್ನ ತಾಯಿಗೆ ಖಾಯಿಲೆಯಂತೆ. ನಿನ್ನನ್ನು ನೋಡಲು ಬಲು ಬಯಸುವಳಂತೆ. ತತ್‌ಕ್ಷಣ ಕಳುಹಿಸ ಹೇಳಿದ್ದಾನೆ' ಎಂದನು.

' ಭಕ್ತಳು ದೇವನ ಪೂಜೆಯನ್ನು ಮಾಡುವುದು ತಪ್ಪಿಹೋಗುತ್ತ ದಲ್ಲ ! ' ಎಂದಳು ಉದಯಳು.

' ಎರಡನೆಯ ತಿಂಗಳು ಪಾಡ್ಯಮಿಯ ದಿನ ಇಲ್ಲಿ ಇರುವುದಾದರೆ ಕಳುಹಿಸುತ್ತೇನೆ. ಇಲ್ಲವಾದರೆ ಇಲ್ಲ ' ಎಂದು ಪಾದಷಹನು ನಗುತ್ತಾ ಯೋಧಳಿಗೆ ಹೇಳಿದನು.

' ಆಕೆಯನ್ನು ಒಮ್ಮೆ ನೋಡಿ ಅಷ್ಟರೊಳಗಾಗಿಯೇ ಬಂದುಬಿಡು ತ್ತೇನೆ. ನನ್ನ ದೇವನ ಮುಖವನ್ನು ಅಂದು ನೋಡುತ್ತೇನೆ. ಅಪ್ಪಣೆ ಯಾದರೆ ಇಂದೇ ಹೊರಡುತ್ತೇನೆ. '

' ಆಗಬಹುದು. ಮರೆಯದಿರು ಪಾಡ್ಯಮಿಯನ್ನು. '

ಯೋಧಳು ಕಣ್ಣೀರು ಸುರಿಸುತ್ತಾ, ಕೈಯಲ್ಲಿ ಹೂಬುಟ್ಟಿಯನ್ನು ಹಿಡಿದುಕೊಂಡು ಹೋದಳು.

' ಆಲಂಗೀರ್ ಪಾದಷಹ ! ತಾವು ತಿಮ್ಮರಸನನ್ನು ಸೆರೆಹಿಡಿದು ಅವ ನನ್ನೂ ವಿಗ್ರಹವನ್ನೂ ತರಹೇಳಿ ಕಳುಹಿಸಿದ ಸೈನ್ಯವು ಹೋಗಿ ಒಂದು ತಿಂಗಳಾದಾಗ್ಯೂ ಇನ್ನೂ ಅದರ ಯಾವ ಸುದ್ದಿಯೂ ಬಂದೇ ಇಲ್ಲ. '

' ನಾನೂ ಅದನ್ನೇ ಯೋಚಿಸುತ್ತಿದ್ದೇನೆ, ಉದಯು. '

' ಪಾಡ್ಯಮಿ ಇನ್ನು ನಲವತ್ತೈದು ದಿನವಿದೆ. ಆ ದಿನ ನನ್ನ ಮನೋ ರಥವನ್ನು ಸಲ್ಲಿಸಿದರೆ ತಮ್ಮನ್ನು ಜನ್ಮಜನ್ಮದಲ್ಲಿಯೂ ನೆನೆಯುವೆನು '

ಎಂದು ಉದಯಳು ಹೇಳುತ್ತಾ ಪಾದಷಹನ ಕಾಲುಗಳನ್ನು ಹಿಡಿದು ಕೊಂಡಳು.

'ಆಗಲಿ ಬಿಡು, ಉದಯಾ. ನಾಳೆ ನಾನೇ ಹೊರಟು ಆ ಕಾಫರನ ತಲೆಯನ್ನೂ ವಿಗ್ರಹವನ್ನೂ ತರುತ್ತೇನೆ.'

'ನಾನೇ ಧನ್ಯಳು!' ಎಂದು ಉದಯಳು ಪಾದಷಹನನ್ನಪ್ಪಿಕೊಂಡು ಮುದ್ದಿಟ್ಟಳು.

೨

ಪಾಡ್ಯಮಿಯ ದಿನ ಬೆಳಗ್ಗೆ ಹತ್ತುಗಂಟೆಯಲ್ಲಿ ಗಿರಿಪುರಕ್ಕೆ ಹೋಗುವ ರಸ್ತೆಯಲ್ಲಿ ರಜಪೂತ ರಮಣಿಯೊಬ್ಬಳು ಹಬ್ಬದ ಉಡುಗೆಯನ್ನುಟ್ಟು, ಕೈಯಲ್ಲಿ ಬೆಳ್ಳಿಯ ತಟ್ಟೆಯೊಂದನ್ನು ಹಿಡಿದುಕೊಂಡು, ಸ್ವಲ್ಪ ದೂರದಲ್ಲಿ ಕೇಳಿಸುತ್ತಿರುವ ವಾದ್ಯಗಳ ನಾದವನ್ನು ಆಲಿಸುತ್ತಾ, ಮದುವೆ ಹೆಣ್ಣಿನಂತೆ ಹೆಜ್ಜೆ ಇಡುತ್ತಾ ಬರುತ್ತಿದ್ದಳು. ತಟ್ಟೆಯಲ್ಲಿ ನಾನಾ ತರದ ಹಣ್ಣುಗಳೂ ಮತ್ತು ಎರಡು ಬೆಳ್ಳಿಯ ಲೋಟಗಳೂ ಇದ್ದುವು. ಅವುಗಳೊಂದರಲ್ಲಿ ನೀರು; ಮತ್ತೊಂದರಲ್ಲಿ ಹಾಲು. ಮುಂದೆ ಮುಂದೆ ಹೋಗುತ್ತಾ ರಮಣಿಯು ಇದ್ದಕ್ಕಿದ್ದಂತೆಯೇ ನಿಂತು ಹಿಂದುಗಡೆ ನೋಡಿದಳು. ಆಪ ಳಿಗೆ ಕುದುರೆಯೊಂದರ ಖುರಪುಟ ಧ್ವನಿಯು ಕೇಳಿಸಿತು. 'ಏನಿರಬಹುದು!' ಎಂದುಕೊಂಡು, ತಟ್ಟೆಯನ್ನು ಕೆಳಗೆ ಬೆಳೆದಿದ್ದ ಹುಲ್ಲಿನ ಮೇಲಿಟ್ಟು, ಕುದುರೆಯನ್ನು ನೋಡುವ ಉತ್ಸುಕತೆಯಿಂದ ಆಕೆ ನಿಂತಳು. ಬಹು ದೂರದಲ್ಲಿ ಆ ದಾರಿಯಲ್ಲಿಯೇ ಬರುತ್ತಿದ್ದ ಅರಬ್ಬೀ ಕರಿಯ ಟಾಕಣವೊಂದು ಆಕೆಗೆ ಕಂಡು ಬಂದಿತು. ಅದು ನಾಗಾಲೋಟದಿಂದ ಬರುತ್ತಿತ್ತು. ಸವಾರನು ಅದರ ಮೇಲೆ ಕುಳಿತಿರಲಿಲ್ಲ. ಅವನ ಒಂದು ಕಾಲು ಮಾತ್ರ ಒಂದು ರಿಕಾಪಿಗೆ ಸಿಕ್ಕಿಕೊಂಡಿತ್ತು; ಎರಡು ಕಾಲುಗಳೂ ಮೇಲೆ; ತಲೆ ಕೆಳಗೆ. ಅವನು ಒಟ್ಟಿನಲ್ಲಿ ಮರದ ಕೊಂಬೆಗೆ ಸಿಕ್ಕಿಕೊಂಡಿದ್ದ ಬಾವುಲಿ ಯಂತಿದ್ದ; ಮುಖ ಮತ್ತು ನೆಲವನ್ನು ಸೋಕುತ್ತಿದ್ದ ಕೈಗಳಿಗೆ ಹಾದಿಯಲ್ಲಿ ಮುಳ್ಳು ತಗಲಿ ರಕ್ತ ಸುರಿಯುತ್ತಿತ್ತು. ರಮಣಿಯು ಈ ದೃಶ್ಯವನ್ನು ನೋಡಿ ದುಃಖಾಕ್ರಾಂತಳಾಗಿ ಕುದುರೆಯು ತನ್ನ ಮುಂದೆ ಬಂದೊಡ ನೆಯೇ, 'ರಾಜ!' ಎಂದಳು. ಕೋಪೋದ್ರೇಕದಿಂದಿದ್ದ ಕುದುರೆಯು

ರಮಣಿಯ ಮಂಜುಳವಾಣಿಯು ಕಿವಿಗೆ ಬಿದ್ದೊಡನೆಯೇ ಅವಳ ಬಳಿಗೆ ಬಂದು ನಿಂತಿತು.

ಅವಳು ಠಕಾಪಿಗೆ ಸಿಕ್ಕಿಕೊಂಡಿದ್ದ ಮನುಷ್ಯನನ್ನು ತನ್ನ ಕೈಗಳಿಂದ ಎಳೆ ಮಗುವಂತೆ ಎತ್ತಿಕೊಂಡು ಕೆಳಗಿದ್ದ ಹಸುರಿನ ಮೇಲೆ ಬಿಟ್ಟಳು.

ಅವನ ಬಲಗೈಯಲ್ಲಿದ್ದ ಬಿಚ್ಚುಗತ್ತಿಯು ಹಾಗೆಯೇ ಇತ್ತು. ಆಕೆ ಕುದುರೆಯನ್ನು ಪಕ್ಕದ ಮರಕ್ಕೆ ಕಟ್ಟಿಹಾಕಿ, 'ರಾಜ! ಎಂತಹ ಕೆಲಸ ಮಾಡಿದೆ!' ಎನ್ನುತ್ತಾ ಅದರ ಬೆನ್ನನ್ನು ಸವರಿದಳು. ಅದು ದಾಸನಂತೆ ತಲೆ ಬಗ್ಗಿಸಿತು.

ರಮಣಿಯು ಸವಾರನನ್ನು ಮುಟ್ಟಿ ನೋಡಿದಳು. ಅವನು ಮೂರ್ಛಿತನಾಗಿದ್ದನು. ಆಕೆ ತನ್ನ ಸೀರೆಯ ಸೆರಗನ್ನು ಹರಿದು, ತಟ್ಟೆಯಲ್ಲಿದ್ದ ಲೋಟದಲ್ಲಿನ ನೀರಿನಲ್ಲಿ ನೆನಸಿ, ಸವಾರನ ತಲೆ ಮತ್ತು ಇತರ ಭಾಗಗಳಲ್ಲಿನ ಗಾಯಗಳನ್ನೆಲ್ಲಾ ತೊಳೆದು ಅವುಗಳಿಗೆ ಕಟ್ಟುಗಳನ್ನು ಕಟ್ಟಿದಳು. ಅವನ ತಲೆಯನ್ನು ತನ್ನ ತೊಡೆಯ ಮೇಲಿಟ್ಟುಕೊಂಡು, ಸೀರೆಯ ಅಂಚಿನಿಂದ ಚಾಮರವನ್ನಿಕ್ಕುತ್ತಿದ್ದಳು. ಆಗ ಪಕ್ಕದ ಮರಗಳನ್ನು ಅಲುಗಿಸುತ್ತಿದ್ದ ಮಂದಮಾರುತವು ಇವರ ಮೇಲೆ ಬೀಸಿತು. ಕೋಗಿಲೆಯು ಮರದ ಮೇಲಿನಿಂದ 'ಕೂ' ಎಂದಿತು. ಈ ದೃಶ್ಯವನ್ನು ನೋಡಿ, ಕಣ್ಣೀರು ಸುರಿಸುತ್ತಿದ್ದ ರಮಣಿಯು ನಕ್ಕಳು. ಅವಳ ಸೊಬಗನ್ನು ಆಗ ನೋಡಬೇಕಾಗಿತ್ತು ಸವಾರನು!

ಸ್ವಲ್ಪ ಹೊತ್ತಾದ ಮೇಲೆ ಮೂರ್ಛಿತನಾಗಿದ್ದ ಸವಾರನಿಗೆ ಸರಿಯಾಗಿ ಉಸಿರಾಡಲಾರಂಭಿಸಿತು. ಅವನು ಕಣ್ಣು ತೆರೆದು ಸುತ್ತಲೂ ನೋಡಿದ; ವಸಂತನು ಪ್ರಕೃತಿಯೊಡನೆ ನರ್ತಿಸುತ್ತಿರುವುದನ್ನು ಕೆಂಗಣ್ಣುಗಳಿಂದ ಕಂಡನು. ಆದರೆ ಭೂಲೋಕದ ಜೀವಿಯಂತೆ ಈ ನೋಟದಿಂದ ಪುಳುಕಿತನಾಗಲಿಲ್ಲ. ಉಸಿರಾಡುತ್ತಿದ್ದರೂ ಅವನಿಗೆ ಇಹಲೋಕದ ಜ್ಞಾನವಿಲ್ಲವೆಂದೇ ಹೇಳಬಹುದಾಗಿತ್ತು. ರಮಣಿಯು ತಟ್ಟೆಯಲ್ಲಿದ್ದ ಹಣ್ಣುಗಳನ್ನು ಸುಲಿದು ಸವಾರನ ಬಾಯಲ್ಲಿ ಸ್ವಲ್ಪ ಸ್ವಲ್ಪವಾಗಿಟ್ಟಳು. ಕನಸಿನಲ್ಲಿ ಉಂಡಂತೆ ಅವನು ಅವನ್ನು ತಿಂದನು. ಕೊನೆಯಲ್ಲಿ ಆಕೆ ಹಾಲನ್ನು ಕುಡಿಸಿದಳು. 'ಉಸ್ಸಪ್ಪಾ!' ಎಂದು ಸವಾರನು ಕಣ್ಣುಗಳನ್ನು ತಿರುಗಿಸಿ ಹಾಗೆಯೇ

ಮುಚ್ಚಿಕೊಂಡನು. ಬಹುದೂರ ಸವಾರಿಮಾಡಿ ಆಯಾಸ ಪಟ್ಟಿದ್ದುದರಿಂದಲೂ ಮತ್ತು ಗಾಯಗಳ ನೋವು ಸ್ವಲ್ಪ ಕಡಿಮೆಯಾಗಿದ್ದುದರಿಂದಲೂ ಅವನಿಗೆ ಚನ್ನಾಗಿ ಸಿದ್ದೆ ಬಂದಿತು.

ರಮಣಿಯು ಸುಮಾರು ಎರಡು ಗಂಟೆಗಳ ಹೊತ್ತು ಸವಾರನ ಮುಖವನ್ನೀಕ್ಷಿಸುತ್ತಾ ಕುಳಿತಳು. ಕಣ್ಣೀರು ತೊಟ್ಟಿಕ್ಕುತ್ತಿತ್ತು. ಅವಳು ಏನನ್ನೋ ನೆನೆದು ನಗುವಳು; ಕ್ಷಣಕ್ಷಣಕ್ಕೂ ಅವನನ್ನು ಮುಟ್ಟಿ ನೋಡುವಳು. ಕಟ್ಟಕಡೆಯಲ್ಲಿ ಆಕೆ 'ಪ್ರಾಣಭಯವಿಲ್ಲ' ಎಂದುಕೊಂಡು, ಅವನ ತಲೆಯನ್ನು ತೊಡೆಯ ಮೇಲಿನಿಂದ ಹುಲ್ಲ ಮೇಲಿಟ್ಟು, ಹೂವಿನ ಹಾರವೊಂದನ್ನು ಮಾತ್ರ ತಟ್ಟೆಯಲ್ಲಿಟ್ಟುಕೊಂಡು, ಪಕ್ಕ ಹಣ್ಣುಗಳಲ್ಲಿ ಕೆಲವನ್ನು ಕುದುರೆಗೆ ತಿನ್ನಿಸಿ, ಉಳಿದುವನ್ನು ಸವಾರನ ಬಳಿಯಲ್ಲಿಯೇ ಬಿಟ್ಟು, ಕುದುರೆಯನ್ನು ತಡವಿ, 'ಹೋಗಿ ಬರುತ್ತೇನೆ, ರಾಜ!' ಎಂದು ಅದನ್ನು ನೋಡುತ್ತಾ, ವಾದ್ಯಘೋಷವು ಕೇಳಿ ಬರುತ್ತಿದ್ದ ಕಡೆಗೆ ಹೊರಟಳು.

೩

ರಮಣಿಯು ಹೋದ ಸ್ವಲ್ಪ ಹೊತ್ತಿನ ಮೇಲೆ ಸವಾರನು ಇದ್ದಕ್ಕಿದ್ದಂತೆಯೇ ಎದ್ದುಕುಳಿತು, 'ಪಾಪಿ, ಕಾಫರ್, ಸಾಯಿ!' ಎಂದು ಕತ್ತಿಯನ್ನು ಬೀಸಿದನು. ಅದು ಸ್ವಲ್ಪ ದೂರದಲ್ಲಿ ಸೂರ್ಯನ ಕಾಂತಿಯಿಂದ ಥಳಥಳಿಸುತ್ತಾ ಭೂಮಿಯ ಮೇಲೆ ಬಿದ್ದಿತು. ಅವನು ಸುತ್ತಲೂ ತಿರುಗಿ ನೋಡಿದನು. ಎಲ್ಲಿ ನೋಡಿದರೂ ಹಸುರಾದ ಗಿಡಮರಗಳೇ. ಹಣ್ಣುಗಳಿದ್ದ ಬಳ್ಳಿಗಳೇ. 'ಎಲ್ಲಿರುವೆನು' ಎಂದುಕೊಳ್ಳುತ್ತಾ ಬೆಪ್ಪಾಗಿ ನೋಡಿದನು. 'ರಾಜೋದ್ಯಾನವೇ? ಅಲ್ಲ. ಇಲ್ಲಿ ಕಾಡುಮರಗಳಿವೆ' ಎಂದು, ಬಟ್ಟೆಯ ಕಟ್ಟುಗಳಿಂದ ಬಿಗಿಯಲ್ಪಟ್ಟಿದ್ದ ತನ್ನ ಕೈಕಾಲುಗಳ ಕಡೆ ಅವನು ನೋಡಿದನು. ಕಟ್ಟುಗಳ ಪಕ್ಕಗಳಲ್ಲಿಯೂ ರಕ್ತಧಾರೆ. 'ಇದೇನು ಕನಸೋ! ಎಂದು ಪಕ್ಕದ ಮರವನ್ನು ನೋಡಿದನು. ತನ್ನ 'ರಾಜ' ಅಲ್ಲಿತ್ತು. 'ಯಾರೋ ಕಾಫರರು ಗಾಯಪಡಿಸಿರಬೇಕು' ಎಂದುಕೊಂಡು, ಮತ್ತೊಮ್ಮೆ ತನ್ನ ಗಾಯಗಳಿಗೆ ಕಟ್ಟಿದ್ದ ಕಟ್ಟುಗಳ ಕಡೆ ಈಕ್ಷಿಸಿದನು. 'ಕೋಟ್ಯಧೀಶ್ವರರ ಹೆಂಡಿರು ಉಡುವ ಜರತಾರಿ ಸೀರೆಯನ್ನು ಹರಿದು ನನ್ನಂಥ ಮ್ಲೇಚ್ಛನ ಗಾಯಗಳಿಗೆ ಕಟ್ಟಿರುವವರಾರು!' ಎನ್ನುತ್ತಾ ಇನ್ನೂ

ಚೆನ್ನಾಗಿ ದೃಷ್ಟಿಸಿ ನೋಡಿದನು. 'ಹಿಂದೂ ರಮಣಿಯರು ಉಡುವ ಸೀರೆಯದು!' ಹಿಂದಿನ ನೆನಪಾವುದೋ ಹೊಳೆಯಿತು. ಒಂದೆರಡು ತೊಟ್ಟು ಕಣ್ಣೀರು ಸುರಿಸಿದನು. ಹಾಗೆಯೇ ಮುಂದಿರುವ ಕತ್ತಿಯನ್ನೂ ಈಕ್ಷಿಸಿದನು. ಕಣ್ಣೀರು ವಾಹಿನಿಯಂತೆ ಹರಿಯಲಾರಂಭಿಸಿತು. 'ನಾನು ಪಾಪಿ ಎಷ್ಟೋ ಜನ ಹಿಂದುಗಳ ತಲೆಯನ್ನು ಈ ಕತ್ತಿಯಿಂದ ಕಡಿದಿದ್ದೇನೆ. ಎಷ್ಟು ಮಂದಿಯನ್ನು ಜಾತಿ ಕೆಡಿಸಿದ್ದೇನೆ. ಎಷ್ಟು ಜನರನ್ನು ಆನೆಗಳಿಂದ ತುಳಿಸಿ ಹಾವುಗಳಿಂದ ಕಚ್ಚಿಸಿದ್ದೇನೆ. ಹಾ! ಅವರ ಹೆಂಡಿರ ಕಣ್ಣೀರು ಎಷ್ಟು ಹರಿದಿರಬಹುದು! ಆ ಮಾತೆಯೊಬ್ಬಳು ನನ್ನಂಥ ಪಾಪಿಯನ್ನು ಕೊಲ್ಲದೆ ಕನಿಕರದಿಂದ ಕಂಡಳಲ್ಲಾ!' ಎಂದು ಅವನು ಪಕ್ಕಕ್ಕೆ ತಿರುಗಿದನು. ಸುಲಿದ ಹಣ್ಣಿನ ಹೋಳುಗಳೂ, ಕೆಲವು ಹಣ್ಣುಗಳೂ, ಒಂದೆರಡು ಹೂಗಳೂ ಬಿದ್ದಿದ್ದುವು. 'ಯಾರೋ ದೇವರ ದರುಶನಕ್ಕಾಗಿ ಹೋಗುತ್ತಿದ್ದ ಹಿಂದೂ ರಮಣಿ!' ಎಂದು ನಿರ್ಧರಿಸಿಕೊಂಡು, 'ಅನಾಥರ ಸೇವೆಯೇ ದೇವರ ಸೇವೆ ಎನ್ನುವರು ಹಿಂದುಗಳು. ಅವರ ತತ್ವವೇ ಶ್ರೇಷ್ಠ ಮತ್ತು ಲೋಕೋಪಕಾರಕವಾದದ್ದು.' ಎಂದುಕೊಂಡು, ಎದ್ದು ನಿಂತು, ಕೈಗಳನ್ನು ಮೆಲ್ಲಗೆ ಸ್ವಲ್ಪ ಚಾಚಿ, ದೂರದಲ್ಲಿ ಬಿದ್ದಿದ್ದ ಖಡ್ಗವನ್ನು ತೆಗೆದುಕೊಂಡು ಒರೆಯಲ್ಲಿಟ್ಟು, ಕೆಳಗೆ ಬಿದ್ದಿದ್ದ ಹಣ್ಣುಗಳನ್ನು 'ರಾಜ' ನಿಗೆ ತಿನ್ನಿಸಿ, ತನ್ನ ಗಾಯದ ಕಟ್ಟುಗಳನ್ನೆಲ್ಲಾ ಮೆಲ್ಲಗೆ ಕಿತ್ತುಹಾಕಿ, ಕುದುರೆಯ ಮೇಲೆ ಕುಳಿತು ಸವಾರನು ಹೊರಟನು.

ವಾದ್ಯಘೋಷವು ಕೇಳಿ ಬರುತ್ತಿದ್ದ ದೇವಾಲಯದ ಮುಂದೆ ಕುದುರೆ ನುಗ್ಗಿತು. ಸವಾರನು ತನ್ನ ಕೈಯಲ್ಲಿ ಕತ್ತಿಯನ್ನು ಹಿಡಿದುಕೊಂಡು ಕುದುರೆಯನ್ನು ಆರಾಧನೆಯಾಗುತ್ತಿದ್ದ ಕಡೆಗೆ ತಿರುಗಿಸಿದನು. ಆಗ ತಾನೆ ಅರ್ಚಕನು ಮಂಗಳಾರತಿ ಮಾಡುತ್ತಿದ್ದನು. ನೆರೆದಿದ್ದ ಭಕ್ತರೆಲ್ಲಾ ಕೈಮುಗಿದು ನಿಂತಿದ್ದರು. ಆ ಹೊತ್ತಿನಲ್ಲೇ ಕೈಯಲ್ಲಿ ಕತ್ತಿಯನ್ನು ಹಿಡಿದು ಬಂದ ಸವಾರನನ್ನು ನೋಡಿ ಎಲ್ಲರೂ ಬೆಪ್ಪಾದರು. ಸವಾರನು ಕುದುರೆಯಿಂದ ಚಂಗನೆ ನೆಗೆದು, 'ತಿಮ್ಮರಸ!' ಎಂದನು.

'ಪಾದಷಹ!' ಎಂದು ತಿಮ್ಮರಸನು ಬಂದು ಮೊಳಕಾಲೂರಿ ಕೈಮುಗಿದನು.

‘ಆ ಪಾಪಿ ತಿಮ್ಮರಸನೆಲ್ಲಿ ?’ ಎಂದು ಮತ್ತೊಮ್ಮೆ ಪಾದಷಹನು ಚೀರಿದನು.

‘ಆಲಂಗೀರ್ ಮಹಾಪ್ರಭು ! ತಮ್ಮ ಗುಲಾಮನು ಇಲ್ಲಿಯೇ ಇದ್ದಾನೆ’ ಎಂದು ತಿಮ್ಮರಸನು ಶಾಂತನಾಗಿ ಹೇಳಿದನು.

‘ರಹೀಂ !’ ಎಂದು ಪಾದಷಹನು ಮತ್ತೊಬ್ಬನ ಹೆಸರನ್ನು ಕೂಗಿದನು.

‘ಸೇವಕನು ತಮ್ಮ ಚರಣತಲದಲ್ಲಿದ್ದಾನೆ’ ಎಂದು ಸೈನ್ಯಾಧ್ಯಕ್ಷ ರಹೀಮನು ಮೊಳಕಾಲೂರಿ ನಮಸ್ಕರಿಸುತ್ತಾ ಹೇಳಿದನು.

‘ಆ ಕಾಫರ ತಿಮ್ಮರಸನನ್ನು ಹಿಡಿದುಕೊಂಡು ಬಾ’

‘ಮುಂದೆಯೇ ನಿಂತಿದ್ದಾನೆ, ಮಹಾಪ್ರಭು !’

‘ಏನು ! ಇವನು ನನ್ನ ಮಗ ಅಕ್ಬರನಲ್ಲವೇ ? ಅವನನ್ನು ನನ್ನಿಂದಲೇ ಕೊಲ್ಲಿಸಬೇಕೆಂದಿದ್ದೀಯಾ, ಪಾಪಿ ! ನೀನೂ ಒಬ್ಬ ಕಾಫರ ! ಎಂದು ಪಾದಷಹನು ಕತ್ತಿಯನ್ನು ಮೇಲಕ್ಕೆತ್ತಿದನು. ಅದು ಜಾರಿ ಕೆಳಗೆ ಬಿತ್ತು ! ಮಂಗಳಾರತಿಯಿಂದ ಬೆಳಗುತ್ತಿದ್ದ ದೇವರ ಕಡೆ ನೋಡಿ, ‘ಅಲ್ಲಾ !’ ಎನ್ನುತ್ತಾ ಪಾದಷಹನು ಕೈಮುಗಿದನು.

ಇದನ್ನು ನೋಡಿ ನಿಂತಿದ್ದ ತಿಮ್ಮರಸನಿಗೆ ಆಶ್ಚರ್ಯವಾಯಿತು. ಅವನು ಬೆಪ್ಪಾಗಿ ಆಲಂಗೀರನನ್ನೇ ನೋಡಿದನು. ‘ತಿಮ್ಮರಸ !’ ಎಂದು ಮತ್ತೊಮ್ಮೆ ಸೌಮ್ಯದಿಂದ ಪಾದಷಹನು ಕೂಗಿದನು.

ತಿಮ್ಮರಸನು ಮುಗಿದಿದ್ದ ಕೈಯಿಂದ ಕೂಡಿಯೇ ‘ಮಹಾಪ್ರಭು’ ಎಂದನು.

ಆಗ ಪಾದಷಹನ ಕಣ್ಣಿಗೆ ತಿಮ್ಮರಸನು ತಿಮ್ಮರಸನಂತೆಯೇ ಕಾಣಿಸಲು, ‘ನನ್ನ ಮಗ ಅಕ್ಬರ್ ಎಲ್ಲಿ ?’ ಎಂದು ಪಾದಷಹನು ಕೇಳಿದನು.

‘ಇಲ್ಲಿಗೆ ಅವರು ಬಂದಿಲ್ಲ ಖಾವಂದ್’

ಸ್ವಲ್ಪಕಾಲ ಆಲಂಗೀರನು ತಲೆಬಾಗಿ ಯೋಚಿಸಿದನು. ಕತ್ತೆತ್ತಿ ಮತ್ತೊಮ್ಮೆ ದೇವನ ಕಡೆ ನೋಡಿದನು. ದಿವ್ಯ ವೆಂಕಟರಮಣ ಸ್ವಾಮಿ! ಕಣ್ಣುಗಳನ್ನು ಕೆಂಪಗೆ ಮಾಡಿಕೊಂಡು ಇನ್ನೂ ನೋಡಿದನು. ಅಲ್ಲಾ ಅಭಯ ಹಸ್ತದಿಂದ ಎದುರಿಗೆ ನಿಂತಂತಾಯಿತು. ತಪ್ಪಾಯಿತೆಂದು ಕೈ

ಮುಗಿಯುತ್ತಾ ಹಾಗೆಯೇ ಇದ್ದನು. ಶಿಲುಬೆಯ ಮೇಲಿನ ಕ್ರಿಸ್ತನ ದೇವಮೂರ್ತಿ ಕಂಡಿತು.

'ತಿಮ್ಮರಸ!'

'ಏನು ದೊರೆಯೇ!'

ಪಾದಷಹನು ನೋಡುತ್ತಿದ್ದಂತೆಯೇ ಸ್ವಲ್ಪ ಹೊತ್ತಾದ ಮೇಲೆ ಹಿಂದೂ ಪ್ರತಿಮೆಯೇ ಕಂಡಿತು. ಪಾದಷಹನು 'ತಿಮ್ಮರಸ, ನೀನು ಮಹಾನುಭಾವ! ಆದುದರಿಂದಲೇ ನೀನು ಪಾಪಿಯಾದ ನನ್ನ ಕಣ್ಣಿಗೆ ಮೊದಲು ಬೀಳಲಿಲ್ಲ' ಎಂದು ಮುಂದೆ ನಿಂತಿರುವ ತಿಮ್ಮರಸನ ಭುಜದ ಮೇಲೆ ಕೈಯಿಟ್ಟು ಹೇಳಿದನು.

'ಪಾದಷಹ! ನನ್ನನ್ನು ಹಾಗೆ ಸ್ತುತಿಸಬೇಡಿ. ನಾನೊಬ್ಬ ಪಾಮರ, ತಮ್ಮ ಮತ್ತು ದೇವನ ಗುಲಾಮ.'

'ನನ್ನ ಗುಲಾಮನೆನ್ನದಿರು, ತಿಮ್ಮರಸ! ಎಲ್ಲಾ ದೇವರೂ ಒಬ್ಬನೇ ಎಂಬ ಜ್ಞಾನವನ್ನು ದೃಷ್ಟಾಂತದೊಡನೆ ನನಗೆ ತೋರಿಸಿದ ಮಹಮದ್ ನೀನು. ನಿನ್ನಿಂದ ದೇವ ದೇವನನ್ನು ಕಂಡೆ. ಇಂಥ ಪಾಪಿಗೆ– ಎಷ್ಟೋ ಜನರನ್ನು ಕೊಂದು ಅವರ ರಮಣಿಯರ ಕಣ್ಣೀರ ವಾಹಿನಿಯನ್ನು ಹರಿಸಿದ ಪಾತಕಿಗೆ– ದೇವೇಶನ ದರುಶನವನ್ನು ಕೊಡಿಸಿದೆ.'

'ದೇವರೇ ತಮಗೆ ಹೀಗೆ ಜ್ಞಾನೋದಯವನ್ನುಂಟುಮಾಡಿದ, ಖಾವಂದ್'

'ಅದಿರಲಿ ತಿಮ್ಮರಸ. ನಾನು ವಿಗ್ರಹ ದ್ವೇಷಿ ಎಂದು ತಿಳಿದಿದ್ದ ನೀನು, ನನಗೆ ಬರಬೇಕಾಗಿದ್ದ ತೆರಿಗೆಯಿಂದ ಹಿಂದೂ ದೇವಾಲಯವನ್ನು ಯಾವ ಧೈರ್ಯದಿಂದ ಕಟ್ಟಿಸಲು ಮನಸ್ಸು ಮಾಡಿದೆ?'

'ದೇವನ ಆಜ್ಞೆಯಂತೆ.'

'ಹೇಗೆ ಹೇಳು!'

'ಪಾದಷಹ! ಆ ದಿನ ಸೈನ್ಯಸಮೇತನಾಗಿ ಬಂದು, ಈ ಪ್ರಾಂತದಲ್ಲೆಲ್ಲಾ ತೆರಿಗೆಯನ್ನು ವಸೂಲುಮಾಡಿ, ಈ ಕಾಡಿಗೆ ಬರುವ ವೇಳೆಗೆ ರಾತ್ರಿಯಾದುದರಿಂದ ಈ ದಿಣ್ಣೆಯ ಮೇಲೆಯೇ ಮಲಗಿದೆವು. ಹೊದ್ದುಕೊಂಡಿದ್ದರೂ ಬಲು ಛಳಿಯಿಂದ ನಡುಗಿದೆ. 'ದೇವ, ಛಳಿಯನ್ನು ಏಕೆ

ಹೀಗೆ ಕೊಡುತ್ತಿದ್ದೀ?' ಎಂದುಕೊಂಡೆ. ನನ್ನ ಮುಂದೆ ಪುಂಡ್ರಧಾರಿಯಾದ, ಚತುರ್ಭುಜನಾಗ, ನನ್ನ ಮನೆ ದೇವರಾದ, ಈ ಸ್ವಾಮಿಯು ನಿಂತಂತಾಯಿತು. 'ನನ್ನನ್ನು ನೋಡು! ಬಟ್ಟೆಯಿಲ್ಲ; ಹೊಟ್ಟೆಗಿಲ್ಲ. ಹಿಂದೆ ವಸಿಷ್ಠರು ದೇವಲೋಕದ ಚಿಂತಾಮಣಿಯಿಂದ ನನಗೆ ತಿಂಡಿ ತೀರ್ಥಗಳನ್ನು ತರಿಸಿಕೊಡುತ್ತಿದ್ದರು. ಆ ಕಾಲವೂ ಕಳೆಯಿತು. ಆ ನೆನಪಿಗಾಗಿಯೇ ಅವರಿದ್ದ ಊರಿಗೆ ಚಿಂತಾಮಣಿ ಎಂದು ಹೆಸರಿಟ್ಟಿದ್ದಾರೆ ನೋಡು. ನೀನಂತೂ ಹಣ ವಸೂಲು ಮಾಡಿದ್ದೀ ಅದು ಹಿಂದೂಮುಸಲ್ಮಾನರಿಬ್ಬರ ಹಣವೂ ಹೌದು. ನನಗಾಗಿ ಇಲ್ಲಿ ಒಂದು ನೆಲೆಯನ್ನು ಕಟ್ಟಿಸು. ಅದಕ್ಕೆ ನಿನ್ನ ಒಡೆಯನ ಹೆಸರನ್ನೇ ಇಟ್ಟು, ಆತನನ್ನು ನೋಡಲು ಬರಹೇಳು' ಎಂದು ಹೇಳಿದರು.'

'ಆಮೇಲೆ?'

'ಸ್ವಾಮಿ! ನಾನೊಬ್ಬನೇ ಈ ಸೈನ್ಯದಲ್ಲೆಲ್ಲಾ ಹಿಂದುವು. ತಮ್ಮ ಕೃಪೆಯಿಂದ ಮುಸಲ್ಮಾನ ಸೈನ್ಯಾಧ್ಯಕ್ಷನಾಗಿದ್ದೇನೆ. ನಿಮ್ಮ ಮಾತಿನಂತೆ ನಡೆಸಿದರೆ ಮುಸಲ್ಮಾನರಾಗಿರುವ ಸೈನಿಕರೆಲ್ಲಾ ನನ್ನನ್ನು ಬಂದಿಯಾಗಿ ಪಾದಷಹರ ಬಳಿಗೆ ಎಳೆದೊಯ್ಯುವರು. ನನಗೇನೋ ನಿಮ್ಮ ಮೇಲೆ ಪ್ರೀತಿಪೂರಿತವಾದ ಭಕ್ತಿಯಿದೆ. ಆದರೇನು ಮಾಡಲಿ? ನಾನೊಬ್ಬ ಬಡ ಹಿಂದು' ಎಂದೆ.'

'ಆಗ ದೇವ ಏನು ಹೇಳಿದ?'

'ಸೈನಿಕರಿಗೂ ಹೇಳುತ್ತೇನೆ. ನೀನು ಮಾಡುವ ಕಾರ್ಯಗಳಿಗೆಲ್ಲಾ ಅವರು ಸಹಕಾರಿಗಳಾದರೆ ಅವರಿಗೆ ಉತ್ತಮವಾಗುವುದೆನ್ನುತ್ತೇನೆ. ನೀನು ಮಾಡುವ ಯಾವ ಕೆಲಸಗಳಿಗೂ ಅವರು ಅಡ್ಡಿಬಾರರು' ಎಂದು ಹೇಳಿದಂತಾಯಿತು. 'ಪಾದಷಹರು ಮತ್ತೊಂದು ಸೈನ್ಯ ಕಳುಹಿಸಿದರೋ?' ಎಂದು ಕೇಳಿದೆ. 'ಅದೂ ಈ ಸೈನ್ಯದವರ ಮನಸ್ಸನ್ನೇ ಹೊಂದುವುದು' ಎಂದು ಉತ್ತರ ಬಂದಿತು. 'ಪಾದಷಹರೇ ಬಂದರೋ?' ಎಂದು ಬೆಪ್ಪಾಗಿ ಕೇಳಿದೆ. 'ಅವರ ಮನಸ್ಸನ್ನೂ ತಿರುಗಿಸುತ್ತೇನೆ' ಎಂದು ನಗುತ್ತಾ ಹೇಳಿ ಅದೃಶ್ಯರಾದರು. ಬೆಳಗ್ಗೆ ನಾನು ಎದ್ದೊಡನೆಯೇ ಸೈನಿಕರೆಲ್ಲರೂ ತಮ್ಮ ಕನಸನ್ನು ತಿಳುಹಿಸಿದರು. ನನ್ನ ಕನಸನ್ನೂ ಅವರಿಗೆ

ಹೇಳಿದೆ. ಎಲ್ಲರೂ ನಾನು ಮಲಗಿದ್ದ ನೆಲವನ್ನು ಅಗೆದರು. ಎರಡು ತಳುದ್ದದ ಕೆಳಗೆ ಈ ಸೌಮ್ಯ ಮೂರ್ತಿಯು ದೊರೆಯಿತು. ದೇವಾಲಯ ವನ್ನು ಕಟ್ಟಿಸಿ, ದೇವರ ಆಜ್ಞೆಯಂತೆ ತಮ್ಮ ಹೆಸರನ್ನೇ ಈ ಊರಿಗಿಟ್ಟು ಪ್ರತಿಷ್ಠೆಯ ದಿನವನ್ನು ಲಗ್ನಪತ್ರಿಕೆಯ ಮೂಲಕ ತಿಳುಹಿಸಿದೆ. ತಾವು ಕಳುಹಿಸಿದ ಸೈನ್ಯವೂ ನಮಗೆ ಬಹಳ ಸಹಾಯಮಾಡಿತು.'

'ನೀನು ಪುಣ್ಯವಂತ ತಿಮ್ಮರಸ! ದೇವನೊಡನೆ ಮಾತನಾಡಿದೆ. ನಾನು ಪುಣ್ಯಶಾಲಿಯೆಂದೇ ಹೇಳಬೇಕು. ಎಷ್ಟೋ ಪಾಪಮಾಡಿದ್ದರೂ ದೇವನನ್ನು ನೋಡಿದೆ. ಅದೇನೋ ಕರ್ನಾಟಕದ ಎಲ್ಲೆಗೆ ಬರುತ್ತಾ ಬರುತ್ತಾ ನನ್ನ ಕಠಿಣ ಹೃದಯವು ಕರಗುತ್ತಾ ಬಂದಿತು ಇದರ ಪ್ರಕೃತಿ ಸೌಂದರ್ಯ ಹಾಗಿದೆ. ಆದುದರಿಂದಲೇ ದೇವನ ವಾಸಗೃಹವಾಗಿದೆ. ನನ್ನ ಕಡೆಗಾಲದಲ್ಲಿ ಇಲ್ಲಿಯೇ ಇದ್ದು ಪ್ರಾಣಬಿಡಬೇಕೆಂದಿದ್ದೇನೆ. ಇಲ್ಲಿಗೆ ಸ್ವಲ್ಪ ದೂರದಲ್ಲಿ, ಆ ತೋಪಿನಲ್ಲಿ, ಬಹುಶಃ ಕುದುರೆಯಿಂದ ಬಿದ್ದು ಮೂರ್ಛಿತನಾಗಿದ್ದೆ. ಬಹಳ ಹೊತ್ತಾದಮೇಲೆ ಎದ್ದು ನೋಡುವಲ್ಲಿ ನನ್ನ ಗಾಯಗಳೆಲ್ಲಾ ಹಿಂದೂ ರಮಣಿಯೊಬ್ಬಳ ಜರತಾರ ಸೀರೆಯ ಸೆರಗಿನ ಕಟ್ಟುಗಳಿಂದ ಕಟ್ಟಲ್ಪಟ್ಟಿದ್ದದ್ದು ಕಂಡಿತು. ಮಹಾತಾಯಿ ಹಣ್ಣು ಹಾಲಿ ನಿಂದ ಉಪಚರಿಸಿದಂತೆ ಕನಸು. ಪಕ್ಕದಲ್ಲಿ ಹಣ್ಣಿನ ಪೋಳುಗಳು ಬಿದ್ದಿ ದ್ದುವು. ಹಿಂದುಗಳು ಬಲು ದಯಾಶಾಲಿಗಳು. ಪಾಪಿಗಳನ್ನೂ—ಕೊಲೆ ಪಾತಕಿಗಳನ್ನೂ ಸಹ—ಕ್ಷಮಿಸುವರು. ಈ ಗುಣವನ್ನು ಕಂಡೇ ಅಲ್ಲವೆ ನಮ್ಮ ಮುತ್ತಜ್ಜ ಅಕ್ಬರ್ ಸಾರ್ವಭೌಮನು ನಿಮ್ಮೊಡನೆ ಸಂಬಂಧಗಳನ್ನು ಬೆಳೆಸಿದುದು! ನನ್ನ ಪಟ್ಟ ಮಹಿಷಿಯೂ ಹಿಂದೂ ರಮಣಿಯೇ. ದೈವಭಕ್ತೆ. 'ಎಲ್ಲರ ದೇವರೂ ಒಬ್ಬನೇ ಎಂದು ಹೇಳುತ್ತಿದ್ದಳು. ಆಗ ನನಗೆ ಅವಳ ಮಾತು ರುಚಿಸಲಿಲ್ಲ. ಈಗ ಆಕೆಯ ಪುಣ್ಯವೇ ನನಗೆ ದೇವನ ದರುಶನ ವನ್ನು ಕೊಡಿಸಿದುದು. ಈ ಸ್ಥಳದಲ್ಲಿಯೇ ನಾನು ಎಲ್ಲಾ ದೇವರೂ ಒಬ್ಬನೇ ಎಂಬ ಜ್ಞಾನಪಡೆದದ್ದು' ಎಂದು ಹೇಳುತ್ತಾ ಪಾದಷಹ ಒಂದೆ ರಡು ತೊಟ್ಟು ಕಣ್ಣೀರು ಸುರಿಸಿದನು.

'ಪಾದಷಹ! ಸುಮ್ಮನೆ ದುಃಖಿಸಬೇಡಿ. ಪಶ್ಚಾತ್ತಾಪವೇ ಪಾಪ ಗಳನ್ನೆಲ್ಲಾ ತೊಡೆಯುವುದು.'

' ಏನು ತೊಡೆಯುವುದೋ ! ಅಂತು ಮುಂದೆ ಎಲ್ಲರೂ ಈ ಪಾಪಿಯ ಹೆಸರನ್ನು ಕೇಳಿದೊಡನೆಯೇ ಬಯ್ಯುವರು. ಈ ಹೆಸರು ಕಿವಿಗೆ ಬಿದ್ದೊಡನೆಯೇ ತಮ್ಮ ಹಳೆಯ ನೆನಪುಗಳೆಲ್ಲಾ ಕಣ್ಣಮುಂದೆ ನಿಂತಂತಾಗಲು ನನ್ನನ್ನು ಹಳಿಯುವರು. ನನ್ನ ಚಿತ್ರವನ್ನು ನೋಡಿ, ಹಿಂದೂ ರಮಣಿಯರು ಕಣ್ಣೀರು ಸುರಿಸುತ್ತಾ ನೆಟ್ಟಿಗೆ ಮುರಿಯುವರು. ಅದುದೆಲ್ಲಾ ಆಗಲಿ. ಇನ್ನುಮೇಲೆಯಾದರೂ ಹಿಂದುಗಳ ಸೋದರನಂತಿರುತ್ತೇನೆ. ನಾನು ನಿಮಗೇನನ್ನು ಮಾಡಬಲ್ಲೆ, ತಿಮ್ಮರಸ ! ಏನೇನು ಬೇಕೋ ಕೇಳು, ಎಲ್ಲವನ್ನೂ ಕೊಡುತ್ತೇನೆ. '

' ದೊರೆಯೇ ! ಈ ದೇವಾಲಯದ ಬಳಿ ಇರುವ ಜಮೀನನ್ನೆಲ್ಲಾ ಇಲ್ಲಿನ ಪೂಜೆಗಾಗಿ ಕೊಡಬೇಕು. ಅದೊಂದೇ ನಮ್ಮ ಪ್ರಾರ್ಥನೆ. '

' ಏನು ಬೇಕೋ ಬರೆ. ನಾನು ರುಜು ಹಾಕುತ್ತೇನೆ. '

ತಿಮ್ಮರಸನು ಒಂದು ತಾಮ್ರದ ತಗಡಿನ ಮೇಲೆ ಬರೆದನು. ಪಾದಷಹನು ಅದಕ್ಕೆ ರುಜು ಹಾಕಿ ' ಮತ್ತೊಮ್ಮೆ ಮಂಗಳಾರತಿಯಾಗಲಿ. ದೇವನನ್ನು ಚನ್ನಾಗಿ ನೋಡಿ ಮನಸ್ಸು ತೃಪ್ತಿಮಾಡಿಕೊಳ್ಳುತ್ತೇನೆ ' ಎಂದನು.

ಅರ್ಚಕನು ದೇವನಿಗೆ ಮಂಗಳಾರತಿ ಮಾಡಿದನು. ಪಾದಷಹನೂ ತಲೆಯನ್ನು ಬಗ್ಗಿಸುತ್ತಾ ಕೈ ಮುಗಿದು ನಿಂತನು; ದೇವನ ಕಡೆ ದೃಷ್ಟಿಸಿ ನೋಡಿದನು. ಹಿಂದೂ ರಮಣಿಯೊಬ್ಬಳು ಆನಂದಾಶ್ರುಗಳನ್ನು ಸುರಿಸುತ್ತಾ ದೇವನಿಗೆರಗುತಿದ್ದುದನ್ನು ಅವನು ಕಂಡನು. ಆಕೆ ಅಮೌಲ್ಯವಾದ ಸೀರೆಯೊಂದನ್ನು ಉಟ್ಟಿದ್ದಳು. ಅದರ ಸೆರಗು ಹರಿದಿದ್ದಿತು. ಪಾದಷಹನು ಆಕೆಯನ್ನು ನೋಡಿದೊಡನೆಯೇ ನಾಚುತ್ತಾ ತಿಮ್ಮರಸನ ಕಡೆ ತಿರುಗಿ, ' ನಾನಿನ್ನು ಹೊರಡುತ್ತೇನೆ ತಿಮ್ಮರಸ, ನಾನು ಈ ದಿನ ರೋಜಕ್ಕೆ ಹೋಗಬೇಕು. ದೆಹಲಿಯಿಂದ ಬರುವಲ್ಲಿ ಅಲ್ಲಿ ನಿಲ್ಲಲಾಗಲಿಲ್ಲ. ನೀನು ಇಲ್ಲಿಯೇ ಇದ್ದುಕೊಂಡು, ದೇವನ ಪೂಜೆಯನ್ನು ಸರಿಯಾಗಿ ನಡೆಯಿಸು ' ಎಂದನು.

ತಿಮ್ಮರಸ ಮೊದಲಾದವರೆಲ್ಲರೂ ' ಜೈ ! ಆಲಂಗೀರ್ !! ' ಎಂದು ಸಂತೋಷ ಧ್ವನಿಮಾಡಿದರು.

'ತಿಮ್ಮರಸ! ನಾನಿನ್ನು ಹೊರಡುತ್ತೇನೆ' ಎಂದು ಪಾದಷಹನು ಕುದುರೆಯನ್ನು ಹತ್ತಿದನು. ಅರ್ಚಕನು ಪ್ರಸಾದವನ್ನು ತಂದು ಆಲಂಗೀರನ ಕೈಗೆ ಕೊಟ್ಟನು. ಕುದುರೆಯು ಹೊರಟಿತು.

೪

ದೌಲತಾಬಾದಿನ ಬಳಿ ಇರುವ ರೋಜವೆಂಬ ಗ್ರಾಮದಲ್ಲಿದ್ದ ತನ್ನ ಗುರುವಿನ ಗೋರಿಯನ್ನು ಪೂಜಿಸಲು ಆಲಂಗೀರನು ಆಗಾಗ ಬರುತ್ತಿದ್ದನು. ರೋಜ ದಕ್ಷಿಣ ದೇಶದಲ್ಲೆಲ್ಲಾ ಸುಂದರವಾದ ಪ್ರದೇಶ. ಅದರ ಪ್ರಕೃತಿ ಸೌಂದರ್ಯವೇ ಆಲಂಗೀರನ ಮನಸ್ಸನ್ನು ಸೆಳೆಯುತ್ತಿದ್ದಿರಬಹುದು. ಅವನು ಸಂಗೀತವನ್ನು ಇಚ್ಛಿಸುವವನಲ್ಲದಿದ್ದರೂ ಪ್ರಕೃತಿ ಪ್ರಿಯನಾಗಿದ್ದನು; ರೋಜದಲ್ಲಿ ಒಂದು ಅರಮನೆಯನ್ನು ಕಟ್ಟಿಸಿ ಅದರ ಸುತ್ತಲೂ ದಕ್ಷಿಣದೇಶದಲ್ಲಿನ ಗಿಡಬಳ್ಳಿಗಳನ್ನೆಲ್ಲಾ ಒಳಗೊಂಡಿದ್ದ ಉದ್ಯಾನ ವನವನ್ನೂ ಕೊಳಗಳು ಮತ್ತು ಲತಾಗೃಹಗಳನ್ನೂ ಮಾಡಿಸಿದ್ದನು.

ಆಲಂಗೀರನು ಶನಿವಾರ ಆಲಂಗಿರಿಗೆ ಹೋಗಿ ದೇವನನ್ನು ನೋಡಿಕೊಂಡು ರೋಜಕ್ಕೆ ಹಿಂತಿರುಗಿದನು. ಶುಕ್ರವಾರ ಗುರುವಿನ ಗೋರಿಯ ಬಳಿಗೆ ಹೋಗಿ ಪೂಜಿಸಿದನು. ಮನೆಗೆ ಬಂದವನು ಹಾಗೆಯೇ ಖಾಯಿಲೆ ಬಿದ್ದನು. ಕ್ರಮೇಣ ಜ್ವರ ವಿಷಮಿಸಿತು.

ಮೂರನೆಯ ದಿನ ಸಂಜೆಯಲ್ಲಿ ಆಲಂಗೀರನ ತಲೆಯನ್ನು ತೊಡೆಯ ಮೇಲಿಟ್ಟುಕೊಂಡು ಉದಯುಳೂ, ಕಾಲುಗಳನ್ನು ಹಿಸುಕುತ್ತಾ ಯೋಧಳೂ ಇದ್ದರು. 'ಯೋಧು, ನೀನು ತಲೆಯ ಹತ್ತಿರಕ್ಕೆ ಬಾ. ಉದಯು ನೀನು ಕಾಲಬಳಿಗೆ ಹೋಗು' ಎಂದು ಪಾದಷಹನು ಯೋಧಳ ಮೇಲೆ ದೈನ್ಯ ಕಟಾಕ್ಷವನ್ನು ಬೀರುತ್ತಾ ಹೇಳಿದನು. ಇಬ್ಬರೂ ಅವನ ಅಪ್ಪಣೆಯಂತೆಯೇ ನಡೆದರು. ಯೋಧಳು ಪಾದಷಹನ ತಲೆಯನ್ನು ತೊಡೆಯ ಮೇಲಿಟ್ಟುಕೊಂಡು, ಕೈಯಿಂದ ಮುಟ್ಟಿನೋಡುತ್ತಾ ಕುಳಿತಳು. ಉದಯುಳು ಕಾಲಬಳಿ ಕುಳಿತು ಕಣ್ಣೀರು ಸುರಿಸತೊಡಗಿದಳು.

'ಯಾಕೆ ಅಳುವೆ, ಉದಯು!' ಎಂದು ಪಾದಷನು ಕೇಳಿದನು.

'ಕಡೆಗಾಲದಲ್ಲಿ ನಾನು ಬೇಡವಾದೆ.'

‘ಇಲ್ಲ; ನೀನೂ ಬೇಕು. ಎಲ್ಲರೂ ಬೇಕು. ಆದರೆ ಯೋಧಳು ಸರಿಯಾದ ಗೌರವಕ್ಕೆ ಅರ್ಹಳು. ನಾನು ಬದುಕಿರುವತನಕ ನೀನು ಎರಡನೆಯ ಅರಸಿಯಾಗಿದ್ದರೂ ಚಕ್ರವರ್ತಿನಿಯಂತೆ ಮೆರೆವೆ. ಸಾಯುವಲ್ಲಿಯಾದರೂ ನಿಜವಾದ ಚಕ್ರವರ್ತಿನಿಯನ್ನು ‘ಚಕ್ರವರ್ತಿನಿ’ ಎನ್ನುತ್ತೇನೆ.’

‘ದೊರೆಯೇ! ಅಂದು ನೀವು ಅಲಂಗಿರಿಗೆ ಹೋದಾಗಿನಿಂದ ನಿಮ್ಮ ಮನಸ್ಸೇ ಒಡಲಾಯಿಸಿ ಹೋಗಿದೆ.’

‘ಹೇಗೆ?’ ಎಂದು ಆಲಂಗೀರನು ಕೇಳಿ, ‘ದಾಹ....’ ಎನ್ನುತ್ತಾ ನಾಲಗೆಯನ್ನು ನೀಡಿದನು. ಉದಯಳು ಸ್ವಲ್ಪ ಹಾಲನ್ನು ಕುಡಿಸಿ, ‘ಅಲಂಗಿರಿಯ ವಿಗ್ರಹವನ್ನು ತಂದುಕೊಡುವೆನೆಂದು ಹೇಳಿದ್ದಿರಿ. ಆದರೆ ಕೊಡಲಿಲ್ಲ. ಈ ಸಮಾಚಾರವನ್ನು ಯಾವಾಗ ಎತ್ತಿದರೂ ಉತ್ತರ ಕೊಡುತ್ತಲೇ ಇರಲಿಲ್ಲ. ಅಕ್ಕ ಕೂಡ ನನ್ನ ಬಳಿ ಆ ಪ್ರಸ್ತಾಪವನ್ನು ಯಾವಾಗಲೂ ಎತ್ತಲಿಲ್ಲ’ ಎಂದಳು.

‘ಉದಯಾ! ಯೋಧಳ ದೇವ ವಿಶ್ವಮೂರ್ತಿ. ನಮ್ಮ ಎಲ್ಲರ ದೇವನೂ ಅವನೇ. ನನಗೆ ಜ್ಞಾನೋದಯವನ್ನುಂಟುಮಾಡಿ, ಸಾಯುವ ಮುಪ್ಪಿನಲ್ಲಿಯಾದರೂ ಇಷ್ಟುಮಟ್ಟಿಗೆ ಪರಮಾತ್ಮನ ನೈಜಸ್ಥಿತಿ ತಿಳಿಯುವಂತೆ ಮಾಡಿದ.’ ಎಂದು ಅಲಂಗಿರಿಯಲ್ಲಿ ನಡೆದ ವೃತ್ತಾಂತವನ್ನೆಲ್ಲಾ ಸಂಕ್ಷೇಪವಾಗಿ ಹೇಳಿ, ‘ನೀನೇ ಆ ದಿನ ನನಗೆ ಜೀವದಾನಮಾಡಿದ ರಮಣಿಯಲ್ಲವೇ ಯೋಧು?’ ಎಂದು ಆಲಂಗೀರನು ಯೋಧಪುರಿ ಬೇಗಂಳನ್ನು ಕೇಳಿದನು.

‘ರಮಣಿಯಲ್ಲ ದೇವ; ತಮ್ಮ ದಾಸಿ—ನಾನೇ.’

‘ದಾಸಿಯಲ್ಲ; ನನ್ನನ್ನುದ್ಧರಿಸಿದ ದೇವಿ. ಬರಿಯ ರೂಪಿನಲ್ಲೇನಿದೆ ಯೋಧು! ಕಡೆಗೆ ನಿಲ್ಲುವುದು ಒಳ್ಳೆಯ ಗುಣವೊಂದೇ. ಅವೆಲ್ಲಾ ಸರಿ, ದೇವನಿಗಾಗಿ ತೆಗೆದುಕೊಂಡು ಹೋಗುತ್ತಿದ್ದ ಹಣ್ಣುಗಳನ್ನು ನನಗೆ ಯಾಕೆ ಕೊಟ್ಟೆ?’ ಎಂದು ಹೇಳುತ್ತಾ ಆಲಂಗೀರನು ‘ಕಾಲುನೋವು ಸ್ವಲ್ಪ ಗಟ್ಟಿಯಾಗಿ ಹಿಸುಕು, ಉದಯಾ’ ಎಂದನು. ಉದಯಳು ಗಟ್ಟಿಯಾಗಿ ಪಾದಗಳನ್ನು ಒತ್ತಲು ಪ್ರಾರಂಭಿಸಿದಳು.

'ಪತಿಯೇ ಪ್ರಥಮ ದೇವ' ಎಂದು ನಮ್ಮ ಶಾಸ್ತ್ರವು ಸಾರುತ್ತಿದೆ.' ಎಂದು ಯೋಧಳು ನಿದಾನವಾಗಿ ಹೇಳಿದಳು.

'ಹೌದು, ಪ್ರಿಯೆ! ಎಲ್ಲರ ಶಾಸ್ತ್ರಗಳೂ ಒಂದೇ. ಆದರೆ ನಮ್ಮಂಥ ಪಾಪಿಗಳು ಅವುಗಳ ವಾಕ್ಯಗಳಿಗೆ ವಿಪರೀತಾರ್ಥಗಳನ್ನು ಕಲ್ಪಿಸಿಕೊಂಡು, ಶಾಸ್ತ್ರದ ಹೆಸರು ಹೇಳಿ ಪಾಪದ ದಾರಿಗೆ ಹೋಗುತ್ತೇವೆ.'

'ದೊರೆಯೇ! ಹೋಗಲಿ. ಆ ಕಾಲವನ್ನು ಮರೆಯಿರಿ.'

'ಯೋಧು, ಅಣ್ಣನ ಊರಿಗೆ ಹೋಗುತ್ತೇನೆಂದವಳು ಆಲಂಗಿರಿಗೆ ಹೇಗೆ ಬಂದೆ?'

'ಅಣ್ಣನಿಗೆ ಅಲ್ಲಿನ ಸಮಾಚಾರಗಳನ್ನೆಲ್ಲಾ ಮೊದಲೇ ತಿಳುಹಿಸಿದ್ದೆ. ಆತನೇ ನನ್ನನ್ನು ಅಲ್ಲಿಗೆ ಕರೆದುಕೊಂಡು ಹೋದದ್ದು. ಆತನು ಮೊದಲು ದೇವಾಲಯಕ್ಕೆ ಹೋದ. ನನ್ನನ್ನು ಹಣ್ಣುಕಾಯಿ ತರಹೇಳಿದ್ದ. ನಾನೊಬ್ಬಳೇ ಗುಪ್ತಳಾಗಿ, ಹಣ್ಣುಕಾಯಿಗಳ ತಟ್ಟೆಯೊಡನೆ ರಸ್ತೆಯಲ್ಲಿ ಬರುತ್ತಿದ್ದೆ. ದುರವಸ್ಥೆಯಲ್ಲಿದ್ದ ತಮ್ಮನ್ನು ಕುದುರೆಯ ಮೇಲೆ ಕಂಡೆ. ದೇವರ ದಯೆಯಿಂದ ಅಂದು ತಾವು ನನ್ನ ರಾಜನ ಮೇಲಿದ್ದಿರಿ. ನನ್ನನ್ನು ನೋಡಿದೊಡನೆಯೇ ಆದು ನಿಂತಿತು. ಆಗ ತಮಗೆ ಸೇವೆ ಮಾಡಿದ್ದೆ.'

'ನಿನಗೇನೋ ದೇವನನ್ನು ನೋಡಲು ಆಸೆ ಇತ್ತು, ಹೋದೆ. ನಿನ್ನ ಅಣ್ಣನೇಕೆ ಅಲ್ಲಿಗೆ ಸೈನ್ಯಸಮೇತನಾಗಿ ಬಂದಿದ್ದ?' ಎಂದು ಹೇಳುತ್ತಾ ಪಾದಷಹನು ಕೈಗಳನ್ನು ಯೋಧಳ ಕಡೆ ಚಾಚಿದನು.

ಯೋಧಳು ಗಂಡನ ಕೈಗಳನ್ನು ಹಿಸುಕುತ್ತಾ, 'ಎನ್ನರಸಾ! ನೀವು ಖಂಡಿತವಾಗಿಯೂ ಅಲ್ಲಿಗೆ ಹೋಗುತ್ತೀರೆಂದುಕೊಂಡೆ. ಹೋದೊಡನೆಯೇ ವಿಗ್ರಹ ಕೀಳಿಸುವಿರಿ; ದೇವರೆಂದರೆ ಹಿಂದುಗಳು ತಮ್ಮ ಪ್ರಾಣವನ್ನೂ ಸಹ ಕೊಡಲು ಸಿದ್ಧವಾಗಿರುತ್ತಾರೆ. ಆದ್ದರಿಂದ ಅವರು ಮೇಲೆ ಬಿದ್ದು ತಮಗೆ ಅಪಾಯ ಸಂಭವಿಸದಂತೆಯೂ, ಪ್ರತಿಷ್ಠೆ ನಡೆಯುವಂತೆಯೂ, ಮಾಡಬೇಕೆಂದೇ ಅಣ್ಣನು ಸೈನ್ಯದೊಡನೆ ಬಂದುದು. ಇದು ನನ್ನ ಆಲೋಚನೆಯೇ, ದೊರೆಯೇ! ಈ ತಪ್ಪಿಗಾಗಿ ತಮ್ಮ ಕ್ಷಮೆ ಬೇಡುತ್ತೇನೆ' ಎಂದು ಹೇಳಿದಳು.

'ತಪ್ಪೇನೂ ಇಲ್ಲ ಯೋಧು. ನೀನು ಸರಿಯಾದ ಚಕ್ರವರ್ತಿನಿ. ಅನೇಕವೇಳೆ ನಿನ್ನ ಆಲೋಚನೆ ಕೇಳದಿದ್ದರೂ, ನೀನೇ ನನಗೆ ಹೇಳದಂತೆ ಕಾರ್ಯಗಳನ್ನು ನಡೆಸಿ ಒಳ್ಳೆಯದನ್ನು ಮಾಡಿದ್ದೀ! ಅಯ್ಯೋ! ಹುಳುಗಳು ಕೈಕಾಲನ್ನು ಕಚ್ಚುವಂತೆ ಆಗುತ್ತೆ. ಗಟ್ಟಿಯಾಗಿ ಹಿಸುಕು.'

ಈ ಸಂಭಾಷಣೆಯನ್ನು ಕೇಳುತ್ತಿದ್ದ ಉದಯಳು ಯೋಧಳನ್ನು ಆಶ್ಚರ್ಯದಿಂದ ನೋಡುತ್ತಾ, ಕಣ್ಣೀರು ಸುರಿಸುತ್ತಾ, 'ಪಾದಷಹ! ಅಕ್ಕನೇ ತಮ್ಮ ಕಷ್ಟಗಳಲ್ಲಿ ಭಾಗಿಯಾದ ಧರ್ಮಪತ್ನಿ; ನಾನು ಕ್ಷಣಮಾತ್ರ ಸುಖವನ್ನಿತ್ತ ತಮ್ಮ ಬಂಗಾರದವಳು' ಎಂದಳು.

'ಉದಯು! ಹಾಗೆ ಅನ್ನಬೇಡ. ನೀವಿಬ್ಬರೂ ನನಗೆ ಒಂದೇ. ಬಾ ಯೋಧಳ ಬಳಿಗೆ....ಬಾಯಿ....ಒಣಗು....ತ್ತಿದೆ....'

'ಉದಯಳು ಲೋಟದಲ್ಲಿದ್ದ ಹಾಲನ್ನು ಕುಡಿಸಿ, ಯೋಧಳ ಬಳಿ ಕುಳಿತಳು. ಆಲಂಗೀರನು ಉದಯಳ ಕೈಯನ್ನು ಯೋಧಳ ಕೈಲಿಟ್ಟು 'ಅಕ್ಕ....ತಂಗಿಯ....ರಂತೆ....ಇರಿ' ಎಂದನು. ಇಬ್ಬರ ಮುಖವನ್ನೂ ಇಬ್ಬರು ನೋಡಿದರು. ಮೂವರ ಕಣ್ಣಿನಲ್ಲಿಯೂ ಕಣ್ಣೀರೇ!

'ಆಗಲಿ' ಎಂದಳು ಉದಯಳು.

' ನಿನ್ನ....ದೇವರು....ಹೆಚ್ಚೆನ್ನ....ದಿರು. ಎಲ್ಲರದೂ....ಒಂದೇ. ಮೂವರೂ....ಆಲಂಗಿರಿ....ಯಲ್ಲಿ....ಕಾಣಿಸಿ....ದೆವು. ಎಳೆತನ....ದಲ್ಲಿಯೆ.... ಈ....ತತ್ವ....ಕ್ಕಾಗಿಯೇ....ಹಿಂದು.... ಪಟ್ಟದರಸಿ.... ನೀನು.... ರಾಣಿ.... ಮಾಡಿದ....ಆದರೆ....ಮೂಢ....ಆ ತತ್ವ....ಅರಿಯ....ಲಿಲ್ಲ.'

ಯೋಧಳು ಪಾದಷಹನ ಮುಖವನ್ನು ನೋಡುತ್ತಾ ದಿಕ್ಕೇ ತೋಚದೆ ಬೆಪ್ಪಾದಳು. ಉದಯಳು ಅಳುತ್ತಾ, ಸುಮ್ಮನೆ ಅವನನ್ನೇ ನೋಡುತ್ತಾ, ಅವನು ನಾಲಿಗೆಯನ್ನು ಚಾಚುತ್ತಲೇ ಹಾಲು ಹಾಕುತ್ತಿದ್ದಳು.

'ಯೋಧು.... ನನ್ನ... ಹಿಂದು.... ದ್ವೇಷಿ.... ಎಂದು.... ಎಲ್ಲಾ.... ಬಯ್ಯು....ವರು. ಚರಿತ್ರೆ....ಎಲ್ಲಾ....ರಕ್ತಾಕ್ಷರ. ನಿಮಗೆ....ಒಳ್ಳೆಯ....ದೇನೂ....ಮಾಡಿಲ್ಲವೇ? ಬಹುಶಃ ಸಹಾಯ....ತೋರದರೆ....ಗಿಂತ.... ಕಮ್ಮಿ. ಆಗಲಿ....ನನ್ನ....ಜೀವನದ....ನೈಜ....ಹಿಂದೂ....ಪ್ರೇಮ....

ತೋರಿಸಲು....ನೀನೊಬ್ಬಳು. ದಂತದ....ಸಿಂಹಾಸನ....ಮತ್ತು....'ರಾಜಾ ಜಗದೇವ್' ಬಿರುದು....ಪಡೆದ....ಮೈಸೂರು ಅರಸ....ನನ್ನ....ಮಿತ್ರ....ಚಿಕ್ಕದೇವ....ರಾಯ...ನೊಬ್ಬ....ಆ....ಮೇಲೆ....' ಎನ್ನುತಿದ್ದ ಹಾಗೆಯೇ ಆಲಂಗೀರನ ಕಣ್ಣುಗಳು ತಿರುಗಲಾರಂಭಿಸಿದುವು. ಗಂಟಲು ಒಣಗಿತು. ಅವನು ನಾಲಗೆಯನ್ನು ಮುಂದಕ್ಕೆ ಚಾಚಿದನು. ಅವನಿಗೆ ಮಾತನಾಡಲೇ ಆಗಲಿಲ್ಲ. ಯೋಧಳು ಇನ್ನೊಂದೆರಡು ಗುಟುಕು ಹಾಲು ಕುಡಿಸಿದಳು. ಆಲಂಗೀರನು ಎರಡು ಕೈಗಳನ್ನೂ ಜೋಡಿಸಿ, ಅಂತರಿಕ್ಷವನ್ನು ನೋಡುತ್ತಾ '....ಅಲ್ಲಾ....' ಎಂದು ಹೇಳಿ, ' '....ಆ . ಲಂ....ಗಿ....ರ....ಯೊಂ....' ಎಂದು ಕಣ್ಣು ಮುಚ್ಚಿಕೊಂಡನು. ಯೋಧಳು ಮತ್ತು ಉದಯಳು 'ಅಯ್ಯೋ! ಪಾದಷಹ!! ' ಎಂದು ರೋದಿಸಲು ಮೊದಲು ಮಾಡಿದರು.

[ಕೋಲಾರದ ಡಿಸ್ಟ್ರಿಕ್ಟ ಚಿಂತಾಮಣಿಯ ಬಳಿ ಇರುವ ಆಲಂಗಿರಿಯಲ್ಲಿ ವೆಂಕಟರಮಣ ಸ್ವಾಮಿಯ ದೇವಾಲಯವಿದೆ. ಅದನ್ನು ಎರಡನೆಯ ತಿರುಪತಿ ಎನ್ನುವರು. ತಿರುಪತಿಗೆ ಹೋಗಲಾರದ ಬಡವರನೇಕರು ದೇವನಿಗೆ ಕಾಣಿಕೆಯನ್ನು ಅಲ್ಲಿಯೇ ಅರ್ಪಿಸುವರು. ತಿಮ್ಮರಸನು ಆ ದೇವಾಲಯವನ್ನು ಕಟ್ಟಿಸಿದನೆಂದೂ ಆಲಂಗೀರನು ಪ್ರತಿಮೆ ಮಾಡಿಸಿದನೆಂದೂ, ಪಾದಷಹನ ರುಜುವಿರುವ ತಾಮ್ರದ ಶಾಸನವೊಂದು ದೇವಾಲಯದಲ್ಲೆಲ್ಲೋ ಹೂಳಲ್ಪಟ್ಟಿದೆ ಎಂದೂ, ಅಲ್ಲಿನ ಜನರೆಲ್ಲಾ ಹೇಳುವರು. ಈ ಕಥೆಯು ಆ ಐತಿಹ್ಯವನ್ನು ಅವಲಂಬಿಸಿ ಬರೆದದ್ದಾಗಿದೆ.]

---

# ಗುಲಾಬಿ ಹೂ

**A thing of beauty is a joy for ever.**

*Jhon Keats*

೧

‘ ಈ ಗುಲಾಬಿಹೂ ಎಷ್ಟು ಸೊಗಸಾಗಿದೆ, ಕೃಪಾ ! ’

‘ ಇದೇನೋ ಸೊಗಸಾಗಿದೆ; ಆದರೆ ಆ ಬಕುಳವುರದ ಬಳಿ ಇರುವ ಗಿಡದಲ್ಲಿ ಇನ್ನೂ ಸೊಗಸಾದ ಹೂ ಬಿಡುವಂತಿದೆ. ಆ ಗಿಡದ ಎಲೆಗಳನ್ನು ನೋಡಿ ! ಎಷ್ಟು ಅಗಲವಾಗಿವೆ. ಎರಡುದಿನದ ಹಿಂದೆ ಬಿಟ್ಟ ಮೊಗ್ಗುಗಳೇ ಈ ಗಿಡದ ಅರಳುವ ಮೊಗ್ಗುಗಳ ಗಾತ್ರವಾಗಿವೆ. ಮುಳ್ಳುಸಹ ದೊಡ್ಡದೇ! ’

‘ ಹೌದು; ಎಲ್ಲಿ ಬಹಳ ಸೊಗಸಿದ್ದರೆ ಅಲ್ಲಿ ದೊಡ್ಡ ಮುಳ್ಳುಗಳೂ ಇರುತ್ತವೆ ! ನೀನು ಹೇಳುವುದು ಆ ಅಶೋಕದ ಬಳಿ ಇರುವ ಗಿಡವೇ ? ’

‘ ಹೂ, ಅಶೋಕ ! ಆ ಮರದ ಹೆಸರನ್ನು ಮಾತ್ರ ನನ್ನ ಹತ್ತಿರ ಹೇಳಬೇಡಿ. ’

‘ ಏಕೆ, ಕೃಪಾ ! ಅದರ ಹೂಗಳು ಚೆನ್ನಾಗಿಲ್ಲವೇ ? ಗೊಂಚಲು ಗೊಂಚಲಾಗಿ ನೋಡಲು ಎಷ್ಟು ರಮ್ಯವಾಗಿವೆ. ಅದರ ತಳಿರೋ ಮಾವಿನ ತಳಿರಿನ ತಲೆಯ ಮೇಲೆ ಹೊಡೆಯುವಂತಿದೆ ! ’

‘ ಆದರೆ ಅದು ಭಾರತದಲ್ಲಿ ಪವಿತ್ರತೆ ಪಡೆದಿಲ್ಲ

' ಏಕೆ ? '

' ಭಾರತದ ಆದರ್ಶ ರಮಣಿ ತನ್ನ ಕಷ್ಟಕಾಲವನ್ನು ಕಳೆದದ್ದು ಆ ಮರದ ಕೆಳಗೆ. ಅದಕ್ಕೆ ಆ ಹೂವನ್ನು ಯಾರೂ ಮುಡಿಯುವದಿಲ್ಲ. ಮುಡಿದವರ ಬೆನ್ನ ಹಿಂದೆಯೇ ಕಷ್ಟದೇವತೆ ಕಾದಿದ್ದಾಳೆ ' ಎಂದು ಕೃಪಾದೇವಿ ಹೇಳಿದಳು. ಆನಂದನು ನಸುನಗುತ್ತಾ ' ಅಲ್ಲಾ! ನೀನು ಕ್ರಿಸ್ತಳಾಗಿಯೂ ಈ ಹಿಂದೂ ದೇವತೆಗಳನ್ನು ನಂಬುತ್ತೀಯಾ ? ' ಎಂದನು.

' ಅವಳನ್ನು ದೇವತೆ ಎಂದು ಕ್ರಿಸ್ತರು ಹೇಳದೆ ಹೋದರೂ ಆದರ್ಶ ಹಿಂದೂ ರಮಣಿ ಎಂದಾದರೂ ಒಪ್ಪಬಹುದಲ್ಲ. ಪ್ರತಿದೇಶದ ಆದರ್ಶ ವ್ಯಕ್ತಿಗಳೂ ಪೂಜಾರ್ಹರು. ನಾನು ಕ್ರಿಸ್ತಳಾದ ಮಾತ್ರಕ್ಕೇನು; ಹುಟ್ಟಿದುದು ಭಾರತದಲ್ಲಿ ಅಲ್ಲವೇ ? ನಮ್ಮ ವಂಶೀಯರು ಹಿಂದುಗಳಲ್ಲವೇ ? ಹಾಗಲ್ಲದಿದ್ದರೆ ಕೈಗಳಲ್ಲಿ ಈ ಬಳೆಗಳೇಕೆ ಬರುತ್ತಿದ್ದುವು; ಹಣೆಯಲ್ಲಿ ಕುಂಕುಮವೇಕೆ ? ' ಎಂದು ತನ್ನಿನಿಯನ ಕಡೆ ನೋಡುತ್ತಾ ಕೃಪಾದೇವಿಯು ಹೇಳಿದಳು.

ಆನಂದ ಕಾಲೇಜಿನಲ್ಲಿ ಅಸಿಸ್ಟೆಂಟ್ ಪ್ರೊಫೆಸರಾದರೂ ಇಲ್ಲಿ ಡಿಗ್ರಿ ಇರದ ಹದಿನೆಂಟು ವರ್ಷದ ಮುಗ್ಧೆ ಕೃಪಳ ಮಾತಿಗೆ ಸೋತನು ! ಅವನು ಮನಸ್ಸಿನಲ್ಲಿಯೇ ' ಹೌದು, ಹಿಂದೂ ರಕ್ತ ನಮ್ಮ ನಾಳಗಳಲ್ಲಿ ಹರಿಯುತ್ತಿದೆ ' ಎಂದುಕೊಂಡು, ಮಾತು ಮರೆಸಲಿಕ್ಕಾಗಿ ' ಆ ಗುಲಾಬಿ ಗಿಡವನ್ನು ನೋಡೋಣವೇ ಕೃಪಾ ? ' ಎಂದನು. ಗಂಡನಾಡಿದ ಮಾತಿನ ವಸ್ತು ಬದಲಾವಣೆಯನ್ನು ಕೇಳಿ, ಕೃಪಾ ಮುಸಿ ಮುಸಿ ನಗುತ್ತಾ ಗಂಡನನ್ನು ಓರೆಗಣ್ಣಿನಿಂದ ನೋಡಿ, ' ನಾನು ಅದನ್ನು ನೋಡದೆ ಮನೆಗೆ ಹೋದ ದಿನವೇ ಇಲ್ಲ. ಎಷ್ಟೋಸಲ ಅದರ ಪಾತಿ ಒಣಗಿಹೋಗಿದ್ದರೆ ನಾನೇ ನೀರೆರೆದಿದ್ದೇನೆ. ಬನ್ನಿ ಹೋಗೋಣ ಅಲ್ಲಿಗೆ ' ಎಂದಳು.

ಇಬ್ಬರೂ ಅಶೋಕ ಮತ್ತು ಬಕುಳ ವೃಕ್ಷಗಳ ನಡುವೆ ಹಾಕಿದ್ದ ಗುಲಾಬಿಗಿಡದ ಬಳಿ ಬಂದರು. ಅದು ಆಸ್ಟ್ರೇಲಿಯಾದ ಗುಲಾಬಿ. ಆನಂದನ ಪ್ರಾಣದಂತಿದ್ದ ಗಿಡ. ಅವನಿಗೆ ಹೂಗಳೆಂದರೆ ಪ್ರಾಣ. ಆತ ಲಂಡನ್ನಿನಲ್ಲಿ ಎಂ. ಎಸ್‌ಸಿ.ಗೆ ಬರೆದ ಥೀಸಿಸ್ ಕೂಡ ' ಹೂಗಳು ಮತ್ತು ಅವುಗಳ

ವರ್ಣವಿನ್ಯಾಸ ' ಎನ್ನುವ ವಸ್ತುವೇ ! ಮುಂದೆ ಹೂವಿನಿಂದಲೇ ಡಾಕ್ಟರ್ ಪದವಿಯನ್ನೂ ಪಡೆಯಬೇಕೆಂಬ ಆಸೆ ಅವನಿಗೆ. ಇನ್ನೂ ಎರಡು ವರ್ಷವಿದ್ದು ಡಾಕ್ಟರಾಗಿಯೇ ಬರಬೇಕೆಂದಿದ್ದನು. ಆದರೆ ಬಿಟ್ರೂತಲ್ (ಹಿಂದುಗಳಲ್ಲಿ ಮದುವೆಯ ನಿಶ್ಚಿತಾರ್ಥಕ್ಕೆ ಕ್ರಿಸ್ತರಲ್ಲಿ ಬಿಟ್ರೂತಲ್ ಎಂದು ಹೆಸರು) ಆಗಿ ತನಗಾಗಿ ಕಾತರಿಸುತ್ತಿದ್ದ ಚಲುವಿನ ನಲ್ಲೆಯ ಪ್ರೇಮ ಎಂ. ಎಸ್‌ಸಿ. ಆದೊಡನೆ ಆತನನ್ನು ಭಾರತಕ್ಕೆ ಸೆಳೆಯಿತು. ಅವನು ' ಇನ್ನೆಂದಾದರೂ ಹೋಗಿ ಡಾಕ್ಟರಾದರೆ ಸರಿ ' ಎಂದುಕೊಂಡನು. ಆತ ಐಶ್ವರ್ಯವಂತರ ಮನೆತನದಲ್ಲಿ ಹುಟ್ಟಿದವ; ಅವನಿಗೆ ತಂದೆ ತಾಯಿಗಳೆಲ್ಲಾ ತೀರಿ ಹೋಗಿದ್ದರು; ಇದ್ದವಳು ಒಬ್ಬ ತಂಗಿ. ಅವಳಿಗೂ ಮದುವೆಯಾಗಿತ್ತು. ಆಕೆ ಗಂಡನೊಡನೆ ಪೂನಾದಲ್ಲಿದ್ದಳು. ಆನಂದ ತನ್ನ ದೂರದ ಬಂಧುವೂ ಮೈಸೂರಿನಲ್ಲಿ ಸುಪ್ರಸಿದ್ಧ ಚೌಬೀನೆ ವ್ಯಾಪಾರಿಗಳೂ ಆದ ಅವ್ಯೂತರಾಯರ ಮಗಳು ಕೃಪಾದೇವಿಯಲ್ಲಿ ಪ್ರೇಮ ಬೆಳೆಸಿದನು. ತನ್ನ ಇಷ್ಟದಂತೆಯೇ ಕೃಪ ಮತ್ತು ಅವಳ ತಂದೆ ತಾಯಿಗಳು ತಾನು ಲಂಡನ್ನಿನಲ್ಲಿ ಎರಡು ವರ್ಷ ಓದಿ ಬಂದ ಮೇಲೆಯೇ ಕೃಪಳನ್ನು ಮದುವೆಯಾಗಲು ಒಪ್ಪಲು, ಎರಡು ವರ್ಷವಾದ ಮೇಲೆಯೇ ಸೀಮೆಯಿಂದ ಬಂದು, ಕಳೆದ ಕ್ರಿಸ್‌ಮಸ್‌ನಲ್ಲಿ ಕೃಪಳನ್ನು ಮದುವೆಯಾಗಿ ಬೆಂಗಳೂರಿನಲ್ಲಿ ನೆಲೆಸಿದನು.

ಆನಂದ ವಿಶ್ವೇಶ್ವರಪುರದ ಕೊನೆಯಲ್ಲಿ ಅಚ್ಚುಕಟ್ಟಾದ ಮನೆಯೊಂದನ್ನು ಬಾಡಿಗೆಗೆ ತೆಗೆದುಕೊಂಡಿದ್ದನು. ಆ ಮನೆಯ ಮಾಲೀಕರು ಪಕ್ಕದ ಮನೆಯಲ್ಲಿಯೇ ವಾಸಿಸುತ್ತಿದ್ದರು. ಈ ಎರಡು ಮನೆಗಳ ಹಿಂದೆ ಇದ್ದ ವಿಶಾಲವಾದ ಬಯಲೇ ಒಂದು ಉದ್ಯಾನವನದಂತಿದ್ದ ತೋಟ. ಅದರಲ್ಲಿ ಒಂದು ದೊಡ್ಡ ಕಲ್ಲುಕಟ್ಟಡದ ಬಾವಿ; ಅದಕ್ಕೆ ಎಲೆಕ್ಟ್ರಿಕ್ ಪಂಪು. ಮನೆಗಳ ಮಾಲೀಕರಾದ ರಾಮರಾಯರು ಪ್ರಕೃತಿಪ್ರೇಮಿ. ಅವರು ತಮ್ಮ ಹಣವನ್ನೆಲ್ಲಾ ಆ ತೋಟದ ಮೇಲೆ ಚೆಲ್ಲಿದ್ದರು. ನಿತ್ಯ ತೋಟಕ್ಕೆ ಬೆಳಗ್ಗೆ ಸಂಜೆ ಬಂದು, ಅಲ್ಲಿರುವ ಹೂಗಳ ಸೊಬಗನ್ನು ನೋಡುವುದು ಅವರ ಕೆಲಸವಾಗಿತ್ತು. ಅವರ ಮನೆಯವರಿಗೂ ಸಹ ಗಿಡಗಳಲ್ಲಿ ಒಂದು ಹೂ ಕೀಳಲೂ ಅಪ್ಪಣೆ ಇರಲಿಲ್ಲ !

ಹೀಗಿದ್ದ ರಾಯರಿಗೆ ಸರಿಯಾಗಿ ಆನಂದನ ಸ್ನೇಹವಾದದ್ದು ಇನ್ನೂ

ಮೇಲಾಯಿತು. ಮೊದಲೇ ಸಸ್ಯಶಾಸ್ತ್ರಪ್ರವೀಣ ಆನಂದ. ಇವನ ವಶಕ್ಕೆ ತೋಟದ ಸಾಮಿತ್ವವನ್ನೆಲ್ಲಾ ರಾಯರು ಬಿಟ್ಟರು. ಆನಂದನ ಮಾತಿ ನಂತೆಯೇ ಆಸ್ಟ್ರೇಲಿಯಾದಿಂದ ಒಂದು ಕೆಂಪು ಮತ್ತು ಒಂದು ಬಿಳಿಯ ಗುಲಾಬಿ ಗಿಡಗಳನ್ನು ತರಿಸಿದ್ದರು. ಆನಂದ ಅವೆರಡನ್ನೂ ಅಂಟುಹಾಕಿ ಕಸಿಮಾಡಿ ಹೂ ಹೇಗೆ ಬಿಡುವುದೋ ಎಂದು ನೋಡಲು ಕುತೂಹಲನಾಗಿ ದ್ದನು. ತನ್ನ ಬುದ್ಧಿಶಕ್ತಿಯನ್ನೆಲ್ಲಾ ಆ ಗಿಡದ ಮೇಲೆ ಚೆಲ್ಲಿದ್ದನು. ದೇವರೂ ಆತನ ಶ್ರಮಕ್ಕೆ ಮೆಚ್ಚಿ ಗಿಡವನ್ನು ಸೊಗಸಾಗಿ ಬೆಳೆಸಿದ್ದರು. ಏನ್ನಾದರೂ ದೇವನೇ ಪ್ರಕೃತಿ !

ಆನಂದ ಕೃಪ ಇಬ್ಬರೂ ಆ ಗುಲಾಬಿಯ ಗಿಡದ ಬಳಿ ಬಂದರು. ಕೃಪ ಆ ಗುಲಾಬಿಯ ಗಿಡದ ಕಡೆಯೇ ನೋಡುತ್ತಾ, ಸಂತೋಷದಿಂದ ಗಂಡನ ಕಡೆ ತಿರುಗಿ ನೋಡಿ, ' ಬಹಳ ಚೆನ್ನಾಗಿದೆ ಗಿಡ; ಇದರ ಹೂ ನೋಡಬೇಕು ಹೇಗಿರುತ್ತೋ ? ' ಎಂದಳು.

' ಅದೂ ಚೆನ್ನಾಗಿಯೇ ಇರುತ್ತೆ '

' ನಿಮಗೆ ಹೇಗೆ ಗೊತ್ತು ? '

' ಈ ಗಿಡದ ವಿಷಯದಲ್ಲಿ ನನ್ನ ಹೃದಯ ಚೆನ್ನಾಗಿದೆ ಆದುದರಿಂದ ಈ ಗಿಡವೂ ಚೆನ್ನಾಗಿಯೇ ಇರಬೇಕು ' ಎಂದು ನಸುನಗುತ್ತಾ ಆನಂದ ಹೇಳಿದನು. ಕೃಪ ಅವನ ಮಾತು ಕೇಳಿ, ತಾನು ಹಿಡಿದಿದ್ದ ಅವನ ಕೈಯನ್ನು ಹಿಸುಕಿ, ' ಈ ಬಕುಳವೂ ಚೆನ್ನಾಗಿದೆ. ಇದರ ಹೂ ಹಾರಕಟ್ಟಲು ಬಹಳ ಸೊಗಸು. ಬಾಡಿದರೂ ಈ ಹೂವಿನಲ್ಲಿ ಸವಿಯಿದೆ; ಸೊಗಸಿದೆ ' ಎಂದಳು.

' ಅದೇ ಅಲ್ಲವೆ ನೀನು ಮನೆಯಲ್ಲಿ ಏಸುವಿನ ಪಠಕ್ಕೆ ಹಾಕಿರುವ ಹಾರ '

' ಹೂ '

' ಆ ಅಶೋಕವನ್ನು ನೋಡಿದೆಯಾ. ಅದರ ತಳಿರುಗಳ ಮೇಲೇಕೆ ರಾಣಿಯವರ ಕಣ್ಣು ಹೋಗಲಿಲ್ಲ! ಅದರ ಹೂಗಳನ್ನು ನೋಡು. ಗೊಂಚಲು ಗೊಂಚಲಾಗಿ ಮಾಸಲುಕೆಂಪು ಬಣ್ಣದಿಂದ ರಂಜಿಸುತ್ತಿವೆ. ಮುಳುಗುತ್ತಿ ರುವ ಸೂರ್ಯನ ಕಿರಣಗಳು ಬಿದ್ದು ಆ ತಳಿರುಗಳು ಮತ್ತು ಹೂಗಳು

ಎಷ್ಟು ಸೊಗಸಾಗಿ ಮೆರೆಯುತ್ತಿವೆ. ತಂಗಾಳಿ ತೂಗುಯ್ಯಾಲೆಯಂತೆ ಆ ತಳಿರುಗಳನ್ನು ತೂಗುತ್ತಿವೆ.'

'ಸಾಕು, ಸಾಕು,' ನಿಮ್ಮ ವರ್ಣನೆ! ನಾನು ಒಡತಿಯಾಗಿದ್ದರೆ ಈ ಮರವನ್ನು ಹೊಡೆಸಿ ಹಾಕುತ್ತಿದ್ದೆ.'

'ಹಾಗಾದರೆ ಪ್ರಪಂಚದಲ್ಲಿ ಕಷ್ಟವೇ ಇರಕೂಡದಷ್ಟೇ? ಕಷ್ಟದಲ್ಲಿಯೂ ಸಹ ಸುಖವಿದೆ, ಕೃಪಾ! ಕಷ್ಟಜೀವನದಲ್ಲಿಯೂ ಸೌಂದರ್ಯವಿದೆ.'

'ಅ..ದೇ..ನೋ..ನಿಜ' ಎಂದು ಕೃಪಾ ಆ ಗುಲಾಬಿಯ ಮೊಗ್ಗನ್ನು ಮುಟ್ಟುತ್ತಾ ಯಾವದೋ ಮನಸ್ಸಿನಿಂದ ಹೇಳಿ, 'ಇನ್ನು ಎಷ್ಟು ದಿನಕ್ಕೆ ಇದು ಅರಳುವದೋ ನೋಡಬೇಕು. ಗಿಡದಲ್ಲಿ ನೋಡಿ ನಾಲ್ಕೇ ನಾಲ್ಕು ಕವಲುಗಳು' ಎಂದಳು.

'ಒಂದು ಕವಲಿನಲ್ಲಿ ಕೆಂಪು ಹೂ; ಒಂದರಲ್ಲಿ ಬಿಳಿಯ ಹೂ. ನಡುವಿನ ಎರಡು ಕವಲುಗಳಲ್ಲಿಯೂ ಕೆಂಪು ಬಿಳುಪು ಮಿಶ್ರವಾದ ಹೂಗಳು ಬಿಡುತ್ತವೆ' ಎಂದು ಆನಂದ ಹೇಳಿದನು.

'ನೀವು ಬ್ರಹ್ಮರೇನೋ!'

'ನೋಡುತ್ತಿರು'

'ಆಗಲಿ ಬದುಕಿದ್ದರೆ ನೋಡಿಯೇ ನೋಡುತ್ತೇನೆ' ಎಂದು ಕೃಪಾದೇವಿ ಹೇಳಿದಳು. ಆನಂದ ಅವಳ ಕತ್ತಿನ ಮೇಲೆ ಕೈಹಾಕಿಕೊಂಡು ತೋಟದ ಮುಂದಿದ್ದ ತನ್ನ ಮನೆಗೆ ಹೊರಟನು.

೨

ಮಹಾಲಯ ಅಮಾವಾಸ್ಯೆಯ ದಿನ ಬೆಳಗ್ಗೆ ಸುಮಾರು ಹತ್ತುಗಂಟೆ ಇರಬಹುದು! ಆನಂದ ತನ್ನ ಕೊಟಡಿಯಲ್ಲಿನ ಕುರ್ಚಿಯ ಮೇಲೆ ಕುಳಿತು, ಆಗತಾನೆ ಪೋಸ್ಟಿನಿಂದ ಬಂದಿದ್ದ ಕಾಗದವನ್ನು ಓದುತ್ತಿದ್ದನು. ಆಗ ಕೃಪ ಮೆಲ್ಲನೆ ಹೆಜ್ಜೆ ಇಡುತ್ತಾ ಆನಂದನ ಕೊಟಡಿಗೆ ಬಂದಳು; ಅವನ ಪಕ್ಕದಲ್ಲಿ ನಿಂತಳು. ಆನಂದ ಪತ್ರಾವಲೋಕನವನ್ನು ಮಾಡಿದೊಡನೆಯೇ ತಲೆಯನ್ನು ಮೇಲಕ್ಕೆತ್ತಿ ಮುಂದಿದ್ದ ಇನಿಯಳ ಕಡೆ ನೋಡಿದನು.

'ಏನು, ತಂದೆಯವರು ಕಾಗದ ಬರೆದಿದ್ದಾರೆಯೋ ?' ಎಂದು ಆಕೆ ಕೇಳಿದಳು.

'ಹೂ!'

'ಏನೆಂದು ಬರೆದಿದ್ದಾರೆ ?'

'ನಾಳೆ ನಿನ್ನ ತಮ್ಮನ ಹುಟ್ಟಿದ ಹಬ್ಬನಂತೆ; ಇದೂ ಅಲ್ಲದೆ ನವರಾತ್ರಿಯ ಆರಂಭದ ದಿನ. ಆದುದರಿಂದ ನಾಳೆಯೇ ನಾವಿಬ್ಬರೂ ಖಂಡಿತ ಬರಬೇಕಂತೆ.'

'ಆಗಲಿ ಬನ್ನಿ ಹೋಗೋಣ.'

ಈ ದಿನ ಇನ್ನೂ ಇಪ್ಪತ್ತೆರಡನೆ ತಾರೀಖು ಸೋಮವಾರ. ಶುಕ್ರವಾರದಿಂದ ಕಾಲೇಜಿಗೆ ರಜಾ. ಈ ದಿನವೇನೋ ಮಹಾಲಯ ಅಮಾವಾಸ್ಯೆ ರಜಾ ಆಯ್ತು. ನಾಳೆ ಪಾಡ್ಯಮಿ ಅದೂ ರಜಾ. ಆದರೂ ಇನ್ನೂ ಎರಡು ದಿನ ಕಾಲೇಜಿದೆಯಲ್ಲಾ.'

'ಎರಡು ದಿನ ರಜಾಕ್ಕೆ ಬರೆಯಿರಿ.'

'ಅದೇನೊ ಮಾಡಬಹುದು. ಆದರೆ ಈ ತೋಟವನ್ನು ನೋಡಿಕೊಳ್ಳುವರಾರು, ಕೃಪಾ ? ರಾಮರಾಯರು ನಿನ್ನೆ ತಾನೆ ಸಂಸಾರವನ್ನು ಮಾವನ ಮನೆಯಲ್ಲಿ ಬಿಟ್ಟು ಬರಲು ಹೋಗಿರುವರು. ಅವರೂ ನಾಳಿದ್ದು ಬರುತ್ತಾರೆ.'

'ಹಾಗಾದರೆ ತಂದೆಯವರಿಗೆ ಬರೆದುಬಿಡಿ, ಖಂಡಿತವಾಗಿಯೂ ಶುಕ್ರವಾರದ ದಿನ ಬರುತ್ತೇವೆಂದು.'

'ಅದಾಗುವುದಿಲ್ಲ; ಅವರು ನೊಂದುಕೊಳ್ಳುತ್ತಾರೆ, ಕೃಪ.'

'ನಿಮ್ಮನ್ನು ಬಿಟ್ಟು ನಾನು ಹೋಗುವುದಿಲ್ಲ.'

ಆನಂದನು ತನ್ನಿನಿಯಳ ಪ್ರೇಮದ ಮಾತಿಗೆ ಮೆಚ್ಚಿ ಒಂದು ಮುತ್ತುಕೊಟ್ಟು, 'ಹಾಗಲ್ಲ, ಕೃಪ, ನೀನು ಹೋಗದೆ ಹೋದರೆ ಪಾಪ ಅವರು ಬಹಳ ನೊಂದುಕೊಳ್ಳುತ್ತಾರೆ. ಮನೆಯ ಒಬ್ಬಳೇ ಒಬ್ಬಳಾದ ಒಲವಿನ ಪುತ್ರಿ ನೀನು ಹೋಗದ ಅವರ ಹಬ್ಬವೊಂದು ಹಬ್ಬವೇ !' ಎಂದನು.

'ನನ್ನನ್ನು ಹಾಸ್ಯಪಡಿಸಿದುದರಿಂದ ನಿಮ್ಮ ಮನಸ್ಸು ತೃಪ್ತಿಯಾಯಿತೋ ?'

'ಹಾಸ್ಯವೇನೂ ಇಲ್ಲ. ನಾಳೆ ನೀನು ಹೋದರೆ ನನ್ನ ಮೇಲೆ ಮಾತು ಬರುವುದಿಲ್ಲ. ನೀನು ನಾಳೆಯೇ ಹೊರಡಬೇಕು, ಕೃಪ ತಂದೆಯ ವರಿಗೆ ಹೇಳು ನಾನು ಶುಕ್ರವಾರ ಬರುತ್ತೇನೆಂದು.'

ಕೃಪ ತಾನೊಬ್ಬಳೇ ತಂದೆಯ ಮನೆಗೆ ಹೋಗಲು ಇಷ್ಟಪಡಲೇ ಇಲ್ಲ. ಆನಂದನಿಲ್ಲದ ಒಂದೊಂದು ಕ್ಷಣವೂ ಅವಳಿಗೆ ಒಂದೊಂದು ಯುಗದಂತೆ. ಆನಂದನ ಪ್ರೇಮವನ್ನೆಲ್ಲಾ ತನ್ನ ಹೃದಯದಲ್ಲಿ ತುಂಬಿಕೊಳ್ಳಬೇಕೆಂಬುದೇ ಅವಳ ಆಸೆ; ಹಾಗೆಯೇ ಮಾಡಿಯೂ ಇದ್ದಳು. ಅವನೂ ಅಷ್ಟೆ ಕೃಪ ಳೆಂದರೆ ತನ್ನ ಜೀವವೆಂದೇ ತಿಳಿದಿದ್ದನು. ಕೃಪಳಿಗೆ ಆನಂದನೆಂದರೆ ಆನಂದ. ಅವಳಿಗೆ ಮೊದಲು ಅವನು, ಆಮೇಲೆ ತಂದೆ ತಾಯಿ ದೇವರು ಮೊದಲಾದವರು.

ಆನಂದ ಹಾಗೂ ಹೀಗೂ ತಾನು ಖಂಡಿತ ಶುಕ್ರವಾರದ ದಿನ ಬೆಳಗ್ಗೇನೇ ಮೈಸೂರಿನಲ್ಲಿರುತ್ತೇನೆಂದು ಹೇಳಿ ಕೃಪಾದೇವಿಯನ್ನು ಪಾಡ್ಯಮಿಯ ದಿನವೇ ಮೈಸೂರಿಗೆ ಹೋಗಲು ಒಪ್ಪಿಸಿದನು. ಬಹು ಕಷ್ಟದಿಂದ ಗಂಡನನ್ನು ಮೂರುದಿನ ಅಗಲಿರಲು ಕೃಪ ಒಪ್ಪಿದಳು. ಆನಂದ ಮಾರನೆಯ ದಿನದ ಮಧ್ಯಾಹ್ನದ ರೈಲಿನಲ್ಲಿ ಹೆಂಡತಿಯನ್ನು ಕಳುಹಿಸುವುದಾಗಿಯೂ, ಯಾರನ್ನಾದರೂ ಸ್ಟೇಷನ್ ಬಳಿ ಕಳುಹಿಸಬೇಕೆಂದೂ, ಅಮೃತರಾಯರಿಗ ಅಂದೇ ಕಾಗದವನ್ನು ಬರೆದನು.

೩

ಪಾಡ್ಯಮಿಯ ದಿನ ಮಧ್ಯಾಹ್ನ ಎರಡುಗಂಟೆ ವೇಳೆಗೇನೇ ಆನಂದ ಕೃಪಳನ್ನು ಸಿಟಿ ರೈಲ್ವೆ ಸ್ಟೇಷನ್ನಿಗೆ ಕರೆದುಕೊಂಡು ಬಂದನು. ಒಂದು ಮೂರನೆಯ ತರಗತಿಯ ಟಿಕೆಟ್ಟನ್ನು ಕೃಪಳಿಗೆ ತೆಗೆದುಕೊಟ್ಟು, ಅವಳನ್ನು ಹೆಂಗಸರ ಗಾಡಿಯಲ್ಲಿ ಕುಳ್ಳಿರಿಸಿದನು. ಅವಳ ಪಕ್ಕದಲ್ಲಿ ಅವಳ ಹಾಸಿಗೆ ಮತ್ತು ಸೂಟ್‌ಕೇಸ್. ಅವನು ಪ್ಲಾಟ್‌ಫಾರಂನಲ್ಲಿ ನಿಂತು ಗಾಡಿಯ ಕಿಟಕಿಗೊರಗಿಕೊಂಡು ಹೆಂಡತಿಯೊಡನೆ ಮಾತನಾಡುತ್ತಿದ್ದನು.

'ಖಂಡಿತವಾಗಿಯೂ ಶುಕ್ರವಾರ ಬೆಳಿಗ್ಗೆ ಅಲ್ಲಿರಬೇಕು.'

'ನಿಜವಾಗಿಯೂ ಬರುತ್ತೇನೆ, ಕೃಪ!'

'ಗುರುವಾರ ರಾತ್ರಿನೇ ಇಲ್ಲಿಂದ ಹೊರಡಬೇಕು, ನನ್ನಾಣೆಗೂ.

'ನಿನ್ನಾಣೆಗೂ; ನನ್ನಾಣೆಗೂ; ಆಣೆ ಆಣೆಗೂ, ಸರಿಯೇ ?'

ಆಗ ತನ್ನ ಇಬ್ಬರು ಮಕ್ಕಳೊಡನೆ ಹೆಂಗಸೊಬ್ಬಳು ಕೃಪಳ ಬಳಿಗೆ ಬಂದು 'ನಿಮ್ಮ ಹಾಸಿಗೆಯನ್ನು ಸ್ವಲ್ಪ ಕೆಳಗಿಡುತ್ತೀರಾ ?' ಎಂದಳು. ಕೃಪ ಅವಳ ಕಡೆಗೊಮ್ಮೆ ನೋಡಿ, ತನ್ನ ಹಾಸಿಗೆ ಮತ್ತು ಸೂಟ್‌ಕೇಸನ್ನು ಕೆಳಗಿಟ್ಟಳು. ಆಕೆಯ ಇಬ್ಬರು ಮಕ್ಕಳೂ ಕೃಪಳ ಬಳಿ ಕುಳಿತರು. ಆಕೆ ಅಳಿಸಿಂದ ಸಾಮಾನುಗಳನ್ನು ತೆಗೆದುಕೊಳ್ಳುತ್ತಾ ಒಂದು ಕಡೆ ಇಡುತ್ತಿದ್ದಳು.

'ಅವಳನ್ನು ನೋಡಿದೆಯಾ, ಕೃಪ ?' ಎಂದು ಆನಂದ ನಸುನಗೆಯಿಂದ ಕೇಳಿದನು.

'ನನಗೂ ಕಣ್ಣಿದೆ.'

'ಇದೆ ಎಂತಲೇ ನಾನು ಹೇಳಿದ್ದು. ಅವಳು ಉಟ್ಟಿರುವ ಸೀರೆ ನಿನ್ನದರಂತೆ ಬೆಡಗಿನ ನೀಲಿಯದಲ್ಲ; ಸ್ವಚ್ಛ ಪೀತಾಂಬರ.'

'ಹೂ!'

'ಜಾಕೆಟ್ಟೂ ಅದೇ ಬಣ್ಣದ್ದು.'

'ಅದು ಈಗಿನ ಕಾಲದ ತರಹ! ನಮ್ಮ ಯೂನಿಫಾರಂ!'

'ಅವಳ ತಲೆಗೂದಲು ಸ್ವಾಭಾವಿಕವಾದ ಕುರುಳಿಸಿಂದ ಮೆರೆಯುತ್ತಿದೆ. ಕುರುಳಾಗಿ ಮಾಡಿಕೊಂಡಿದ್ದಲ್ಲ. ಆಕೆಯದು ನಿಜವಾದ ಬೈತಲೆ; ಓರೆಯಾಗಿ ತೆಗೆದಿರುವ ಬೈತಲೆಯಲ್ಲ. ನೆಟ್ಟನೆಯ ಬೈತಲೆ ಚೆನ್ನಾಗಿಲ್ಲವೆಂದು ನನಗೆ ಹೇಳುತ್ತಿದ್ದೆಯಲ್ಲ. ಅವಳನ್ನು ನೋಡು; ಅದು ಚೆನ್ನಾಗಿಲ್ಲವೇ ?'

ಕೃಪ ಆನಂದನ ಕಡೆಯೇ ನೋಡುತ್ತಾ ಸುಮ್ಮನಿದ್ದಳು.

'ಅವಳ ಹುಬ್ಬು ನೋಡು ಕೃಪ, ತಿದ್ದಿದಂತಿದೆ. ಕೆಂಪು ಮಿಶ್ರವಾದ ಬಿಳುಪು ಬಣ್ಣ ಆಕೆಯದು, ಬರಿ ಬಿಳುಪಲ್ಲ. ಹಣೆಯಲ್ಲಿ-ಹೂ ನಿನ್ನಂತೆಯೇ-ಕುಂಕುಮ ಚಾದು ಎರಡೂ ಇವೆ. ಆದರೆ ಅವುಗಳ ಮೇಲೆ ಬಂದಿರುವ ವಿಭೂತಿಯ ಪಟ್ಟೆಗಳನ್ನು ನೋಡು. ಅವು ಆಕೆಯ ರೂಪವನ್ನು ಇಮ್ಮಡಿಸಿವೆ. ಆಕೆಯದು ಸಿಂಗರಿಸಿದ ಅರ್ಧಜಡೆಯಲ್ಲ; ಗಂಟುಹಾಕಿದ ತುರುಬು. ಅವಳ ತಲೆಯಲ್ಲಿ ನೋಡು ತುಂಬಾ ಹೂಗಳು ಒಂದೇ ಒಂದು ಬಿಳಿಯ

ಗುಲಾಬಿಯಲ್ಲ. ಕಿವಿಯನ್ನು ತುಂಬಿದಂತಿರುವ ಓಲೆಗಳು; ಸಣ್ಣ ಥಳು ಕಿಸ ಲೋಲಾಕುಗಳಲ್ಲ. ಆ ಓಲೆಗಳೂ ಅವಳ ಮುಖಕ್ಕೆ ಒಪ್ಪುವಂತಿವೆ.'

'ಆಕೆ ಒಳ್ಳೆ ಶ್ವೇತಾಂಬರಧರೆ!'

'ರಜತಗಿರೀಶನಾದ ಪರಮೇಶನಿಗೆ ಆತ್ಮಸಮರ್ಪಣೆ ಮಾಡಲು ಸಿದ್ಧಳಾಗಿರುವ ಹಿಮವಂತನ ಮಗಳು ಪಾರ್ವತಿಯಂತಿದ್ದಾಳೆ.'

ಆ ವೇಳೆಗೆ ಆ ಶ್ವೇತಾಂಬರಧರೆ ಸಾಮಾನುಗಳನ್ನೆಲ್ಲಾ ಒಂದು ಕಡೆ ಇಟ್ಟದ್ದಾಯಿತು. ಆಕೆ ತನ್ನ ಮಕ್ಕಳ ಬಳಿ ಕುಳಿತು 'ನನ್ನಿಂದ ನಿಮಗೆ ಕಷ್ಟವಾಯಿತು' ಎಂದು ಕೃಪಾದೇವಿಗೆ ಹೇಳಿದಳು.

'ಏನೂ ಇಲ್ಲ' ಎಂದು ಅವಳ ಮುಖವನ್ನೇ ನೋಡುತ್ತಾ ಕೃಪ ಹೇಳಿದಳು.

'ಗಂಟೆ ಎಷ್ಟಮ್ಮಾ?'

ಕೃಪಾದೇವಿ ತನ್ನ ಕೈಗಡಿಯಾರದ ಕಡೆ ನೋಡಿ, 'ರೈಲು ಹೊರಡಲು ಇನ್ನೂ ಹತ್ತು ನಿಮಿಷಗಳಿವೆ' ಎಂದಳು.

'ಇವೆರಡೂ ಅವರ ಮಕ್ಕಳಾ?' ಎಂದು ಕೃಪಳನ್ನು ಕೇಳುವಂತೆ ಆನಂದ ಕೇಳಿದನು. ಕೃಪ ಆನಂದನ ಕಡೆಗೊಮ್ಮೆ ನೋಡಿ, ಆಕೆಯ ಕಡೆ ಕೇಳುವ ದೃಷ್ಟಿಯನ್ನು ಬೀರಿದಳು. 'ಹೌದಮ್ಮ; ಈ ಹುಡುಗಿಯೇ ನನ್ನ ಮೊದಲ ಮಗಳು. ಇವಳಿಗೆ ಇನ್ನೂ ನಾಲ್ಕು ವರ್ಷ. ಇದು ಕೈಗೂಸು' ಎಂದು ಆಕೆ ತನ್ನ ಗಂಡು ಮಗುವನ್ನು ಕೈಗೆ ತೆಗೆದುಕೊಂಡು ಅದಕ್ಕೆ ಬುಟ್ಟಿಯಿಂದ ಹಣ್ಣು ತೆಗೆದುಕೊಡಲು ತೊಡಗಿದಳು.

'ಆ ರೂಪಕ್ಕೆ ತಕ್ಕಂತಹ ಮಕ್ಕಳು. ಅವೂ ಎಷ್ಟು ಚೆನ್ನಾಗಿವೆ!' ಎಂದು ಆನಂದ ಹಿಡಿದಿದ್ದ ಕೃಪಳ ಕೈಯನ್ನು ಅಮುಕಿ ಮೆಲ್ಲನೆ ಹೇಳಿದನು.

'ಆಕೆಗೆ ರೂಪವೇನೋ ಇದೆ ಆದರೆ ಮ್ಯಾಸ್ಕುಲೆನ್ ಫೇಸ್.'

'ಹೌದು. ಹೌದು. ರಾಣಿಯವರು ಸರಿಯಾದ ಗುಣ, ರೂಪ ಇವಕ್ಕೆ ಗೌರವ ಕೊಡುವುದು ಇಲ್ಲೇ ಇದೆಯೇ?'

'ಸಾಕು, ಸುಮ್ಮನಿರಿ' ಎಂದು ಕೃಪ ಹೇಳಿದಳು. ರೈಲು ಹೊರಡಲ. ಗಂಟೆ ಹೊಡೆಯಿತು. 'ಬರುತ್ತೀಯಾ, ಕೃಪ' ಎಂದು ಆನಂದ ಹೇಳಿದನು. 'ಹೂ' ಎಂದು ಕೃಪ ಕಣ್ಣೊರಸಿಕೊಂಡಳು! ರೈಲೂ ಹೊರಟಿತು

'ಅವರು ನಿಮ್ಮವರೆ ಅಮ್ಮ ?' ಎಂದು ಆಕೆ ಕೃಪಳನ್ನು ಕೇಳಿದಳು.

'ಊ' ಎಂದು ಕೃಪ ಸ್ವಲ್ಪ ತಲ್ಲಣಿಸಿಕೊಂಡು ಉತ್ತರವಿತ್ತಳು.

'ಅವರು ಯಾವ ಕೆಲಸದಲ್ಲಿದ್ದಾರಮ್ಮ ?'

'ಕಾಲೇಜಿನಲ್ಲಿ ಬಾಟನಿ ಅಸಿಸ್ಟೆಂಟ್ ಪ್ರೊಫೆಸರ್ !'

'ಇಷ್ಟು ಚಿಕ್ಕ ವಯಸ್ಸಿನಲ್ಲಿಯೇ ಪ್ರೊಫೆಸರ್ ! ಇನ್ನೂ ಬಹುಶಃ ಇಪ್ಪತ್ತನಾಲ್ಕು ವಯಸ್ಸಿರಬಹುದು. ಸೀಮೆಯಲ್ಲಿ ಓದಿ ಬಂದವರೋ ?'

'ಲಂಡನ್ ಎಂ. ಎಸ್‌ಸಿ.'

'ಅದಕ್ಕೇನೆ ! ನೀವಿಬ್ಬರೂ ಆದರ್ಶ ದಂಪತಿಗಳಮ್ಮಾ ! ನೋಡಿದರೆ ಸಂತೋಷವಾಗುತ್ತೆ. ನೀವು ಮೈಸೂರಿಗೆ ದಸರಾಕ್ಕೋ ?'

'ಅದು ನನ್ನ ತೌರುಮನೆ. ಹಾಗೂ ದಸರಾನೂ ನೋಡೋಣ ಅಂತ.' ಎಂದು ಯೋಚನೆಯಿಂದ ಹೊರಟ ಕೃಪಳ ಮಾತನ್ನು ಕೇಳುತ್ತಿದ್ದ ಆಕೆ, 'ನಿಮ್ಮೊಡನೆಯೇ ಅವರೂ ಏಕೆ ಬರಲಿಲ್ಲ ?' ಎಂದು ನಸುನಗೆಯಿಂದ ಕೇಳಿದಳು.

'ಅವರಿಗೆ ಇನ್ನೂ ಎರಡು ದಿನ ಕಾಲೇಜಿದೆ. ಅವರು ಶುಕ್ರವಾರ ಬರುತ್ತಾರೆ.'

'ಮೈಸೂರಲ್ಲಿ ನಿಮ್ಮ ಮನೆ ಎಲ್ಲಿದೆಯಮ್ಮ ?'

'ಲಕ್ಷ್ಮೀಪುರದಲ್ಲಿ; ಟಿಂಬರ್ ಮರ್ಚೆಂಟ್ ಅಮೃತರಾಯರ ಮನೆ'

ಆಕೆಯ ಮಗು ಸುಮ್ಮನೆ ಕೃಪಳ ಕಡೆಯೇ ನೋಡುತ್ತಿತ್ತು. 'ಬಾ, ಮಗು !' ಎಂದು ಕೃಪ ಕೈನೀಡಿದಳು. ಅದು ಅವಳ ಬಳಿಗೆ ಹೋಗಲು, ಅವಳು ಸಂತೋಷದಿಂದ ಅದಕ್ಕೆ ಮುತ್ತುಕೊಟ್ಟು, 'ನಿಮ್ಮ ಹೆಸರೇನಮ್ಮ !' ಎಂದು ಆಕೆಯನ್ನು ಕೇಳಿದಳು.

'ಪಾರ್ವತಿ'

'ಪಾರ್ವತಿ !' ಎಂದು ಕೃಪಳ ಎದೆಯಲ್ಲಿ ಬಡಿಯಿತು ! ಆ ಹೆಸರು ಕಿವಿಗೆ ಬಿದ್ದೊಡನೆಯೇ ಕೃಪ ಸ್ವಲ್ಪ ಸ್ತಬ್ಧಳಾದಳು !

ಸ್ವಲ್ಪ ಹೊತ್ತಾದ ಮೇಲೆ ತಾನೇ ಚೇತರಿಸಿಕೊಂಡು, 'ನಿಮ್ಮ ತಂದೆಯವರ ಹೆಸರೇನು ಮಗು ?' ಎಂದು ಕೈಯಲ್ಲಿದ್ದ ಮಗುವಿನ ಕಡೆ ನೋಡುತ್ತಾ ಪಕ್ಕದಲ್ಲಿ ಕುಳಿತಿದ್ದ ಹುಡುಗಿಯನ್ನು ಕೃಪ ಕೇಳಿದಳು.

'ಶಿವರುದ್ರಪ್ಪನೋರು.'

'ಅವರಿಗೇನಮ್ಮ ಕೆಲಸ' ಎಂದು ಕೃಪ ಪಾರ್ವತಮ್ಮನನ್ನು ಕೇಳಿದಳು.

'ಅವರು ಮಂಡಿ ವ್ಯಾಪಾರಿಗಳು.'

'ಮೈಸೂರಿನಲ್ಲಿ ನಿಮ್ಮವರು ಯಾರಿದ್ದಾರಮ್ಮ?'

'ನಮ್ಮಣ್ಣ ಅಲ್ಲಿ ಪೋಲೀಸ್ ಇನ್‌ಸ್ಪೆಕ್ಟರು.'

* * * * *

ಮೈಸೂರ್ ಸ್ಟೇಷನ್ ಬಂದಿತು. ಕೃಪಳ ತಂದೆತಾಯಿಗಳು ಸ್ಟೇಷನ್ನಿಗೆ ಬಂದಿದ್ದರು. ಪಾರ್ವತಮ್ಮನ ಅಣ್ಣನೂ ಬಂದಿದ್ದನು. 'ನಮಸ್ಕಾರವಮ್ಮ' ಎಂದು ಕೃಪ ಪಾರ್ವತಮ್ಮನಿಗೆ ಹೇಳಿ, ತಂದೆ ತಾಯಿಗಳೊಡನೆ ಕಾರಿನಲ್ಲಿ ಕುಳಿತಳು; ಪಾರ್ವತಮ್ಮನ ಕಡೆಯೇ ಎವೆ ಇಕ್ಕದೆ ನೋಡುತ್ತಾ ಇದ್ದಳು. ಕಾರೂ ಮನೆಯ ಕಡೆ ಹೊರಟಿತು.

೪

ಶುಕ್ರವಾರ ಬೆಳಗ್ಗೆ ಆರುಗಂಟೆಗೆ ಆನಂದ ಮೈಸೂರು ಸ್ಟೇಷನ್ನಿನಲ್ಲಿ ಇಳಿದನು. ಸ್ಟೇಷನ್ನಿನಲ್ಲಿ ಕಾದಿದ್ದ ಅವನ ಮಾವನ ಕಾರಿನಲ್ಲಿ ಮನೆಗೆ ಬಂದನು. ಕೃಪ ಅಷ್ಟು ಹೊತ್ತಿಗೇನೆ ಎದ್ದು ತನಗಾಗಿ ಕಾದಿರುವಳೆಂದು ಆತ ತಿಳಿದಿದ್ದನು. ಆದರೆ ಅಷ್ಟು ಹೊತ್ತಿಗೆ ಮನೆಯ ಮುಂಬಾಗಿಲೇ ತೆರೆದಿರಲಿಲ್ಲ. 'ಕೃಪಾ! ಕೃಪಾ!!' ಎಂದು ಬಾಗಿಲು ತಟ್ಟಿದನು. ಅವನತ್ತೆ ಬಾಗಿಲು ತೆರೆದಳು. 'ಕೃಪಾಗೆ ಮೈ ಸ್ವಸ್ಥವಿಲ್ಲವೇ?' ಎಂದು ಆನಂದ ಕೇಳಿದನು.

'ಅವಳೊಬ್ಬಳನ್ನೇ ಇಲ್ಲಿಗೆ ಕಳುಹಿಸಬೇಡವಪ್ಪ. ನಾವೆಲ್ಲಾ ಅವಳಿಗೆ ಪರಕೀಯರು!'

'ಏಕೆ ಅತ್ತೆ ಹಾಗೆ ಹೇಳುತ್ತೀರಿ?'

'ನೋಡಪ್ಪ ಅವಳು ಬಂದಾಗಲಿಂದ ಹಾಸಿಗೆಯ ಮೇಲೆಯೇ ಇದ್ದಾಳೆ. ಡಾಕ್ಟರಿಗೆ ಅವಳ ದೇಹಸ್ಥಿತಿ ನೋಡ ಹೇಳಿದೆವು. ಯಾವ ಜ್ವರವೂ ಅವಳಿಗೆ ಇಲ್ಲವೆಂದರು ಅವರು.'

'ಊ'

'ಅವಳಿಗೆ ಮೂರು ದಿನಗಳಿಂದ ತಿಂಡಿ ನೀರಿಲ್ಲ. ಅಂತೂ ಬಂದೆಯಲ್ಲ ದೊರೆ! ಇನ್ನು ನೀನುಂಟು ಅವಳುಂಟು. ನೀನಾದರೂ ಹೋಗಿ ಸ್ವಲ್ಪ ಕಾಫಿ ಕೊಡಪ್ಪ ಅವಳಿಗೆ' ಎಂದು, ಕೃಪ ಮಲಗಿದ್ದ ಕೊಟಡಿಗೆ ಆಕೆ ಆನಂದ ನನ್ನು ಕರೆದುಕೊಂಡು ಹೋದಳು. 'ಕೃಪಾ! ಕೃಪಾ!' ಎಂದು ಆನಂದ ಕರೆದನು. 'ಹಾಳು ಪಾರ್ವತಿ!' ಎಂದು ಕನವರಿಸಿ ಕೃಪ ಹೊದ್ದಿಕೆಯಿಂದ ಮುಖವನ್ನು ಪೂರ್ತಿಯಾಗಿ ಮುಚ್ಚಿಕೊಂಡಳು. ಆನಂದ ಅವಳ ತಲೆಯ ಬಳಿ ಕುಳಿತು 'ಕೃಪಾ! ಏಳು' ಎಂದು ಹೊದಿಕೆಯನ್ನು ಸ್ವಲ್ಪ ಎಳೆದನು. ಆಕೆ ಕಣ್ಣುಗಳನ್ನುಜ್ಜಿಕೊಳ್ಳುತ್ತಾ, ಇನಿಯನ ಕಡೆ ನೋಡಿ 'ನೀವಾ! ಏನೋ ಕನಸೆಂದಿದ್ದೆ' ಎಂದು ಎದ್ದು ಕುಳಿತಳು. 'ಮುಖ ತೊಳೆದುಕೋ ಏಳು ಕೃಪ. ಏನು, ಮೂರು ದಿನಗಳಿಂದಲೂ ತಿಂಡಿ ನೀರಿಲ್ಲವಂತೆ' ಎಂದು ಆನಂದ ಹೇಳಿದನು.

'ಹೂ, ನೀವು ಬರದೆ ಇರಿ. ನನ್ನ ಮನಸ್ಸು ಹೇಗೆ ಹೇಗೋ ಇತ್ತು'

ಆನಂದನ ಬಲಾತ್ಕಾರದಿಂದ ಅಂದು ಕೃಪ ಫಲಹಾರ ಪಾನೀಯ ಗಳನ್ನು ಸ್ವೀಕರಿಸಿದಳು. ಆನಂದನ ಅತ್ತೆ, ಮಗಳನ್ನು ನೋಡುತ್ತಾ ಅಳಿಯನ ಕಡೆ ತಿರುಗಿ, 'ಏನು ಮಂತ್ರಗಾರನಪ್ಪ, ನೀನು!' ಎಂದು ನಸುನಗೆ ಯಿಂದ ಹೇಳಿದಳು.

'ನನ್ನದೇನು ಮಂತ್ರ ಅತ್ತೆ. ಅವಳನ್ನು ತಾಯಿಯ ಮನೆಯಲ್ಲಿ ಚೆನ್ನಾಗಿರಬೇಡ ಎಂದೆನೇ?'

'ನೀನೇ ನೋಡಪ್ಪ ಅವಳನ್ನು: ಭಾರತದ ಆದರ್ಶ ಹೆಂಗಸನ್ನು!'

'ನಿನ್ನ ಲೆಕ್ಚರ್ ಸಾಕು ಸುಮ್ಮನಿರಮ್ಮ' ಎಂದು ಕೃಪ ಹೇಳಿದಳು.

* * * * *

ಅಂದು ಸಂಜೆಯಲ್ಲಿ ಆನಂದ ಎಗ್ಜಿಬಿಷನಿಗೆ ಹೋಗಲು ಕೃಪಾದೇವಿ ಯನ್ನೂ ಸಿದ್ಧವಾಗಿರಲು ಹೇಳಿ ತಾನೂ ಬಟ್ಟೆಬರೆ ಹಾಕಿಕೊಳ್ಳಲು ಕೊಟ ಡಿಗೆ ಹೋದನು. ಅವನು ಉಡುಪು ತೊಟ್ಟು, ಕೃಪಳಿಗಾಗಿ ಇದಿರು

ನೋಡುತ್ತಾ ಕುರ್ಚಿಯ ಮೇಲೆ ಕುಳಿತು ಮೇಜಿನ ಮೇಲಿದ್ದ ವೃತ್ತ ಪತ್ರಿಕೆಯನ್ನು ನೋಡುತ್ತಿದ್ದನು.

'ಇಂದಾ ಇವನ್ನು ತೆಗೆದುಕೊಳ್ಳಿ' ಎಂದು ಕೃಪ ಫಲಹಾರದ ತಟ್ಟೆಯೊಂದನ್ನೂ, ಕಾಫಿಯ ಲೋಟವೊಂದನ್ನೂ ಮೇಜಿನ ಮೇಲಿಟ್ಟು, ಗಂಡನ ಕುರ್ಚಿಯ ಬಳಿ ನಿಂತುಕೊಂಡು, ಮೇಜಿನ ಮೇಲೆ ಕೈಯೂರಿ ಗಂಡನ ಕಡೆ, 'ನಾನು ಈಗ ಹೇಗಿದ್ದೇನೆ?' ಎಂದು ಪ್ರಶ್ನೆ ಕೇಳುವ ದೃಷ್ಟಿಯನ್ನು ಬೀರಿದಳು.

ಆನಂದ ಕೃಪಳ ಉಡುಪನ್ನು ನೋಡಿ ಸ್ತಂಭಿತನಾದನು; 'ನೀನು ಇಂದು ಪಾರ್ವತಿ!' ಎಂದನು.

'ಈ ಉಡುಪು ಚೆನ್ನಾಗಿದೆಯಾ?'

'ಓಹೋ!'

'ಆಕೆಯದಕ್ಕಿಂತಲೂ?'

'ಆಕೆ ಯಾರು?'

'ನೀವು ರೈಲಿನಲ್ಲಿ ಅಂದು ನೋಡಿ ಮೆಚ್ಚಿದಿರಲ್ಲಾ ಆಕೆ.'

'ನಾನು ಆಕೆಯನ್ನು ಮೆಚ್ಚಲಿಲ್ಲ, ಕೃಪಾ!' ಎಂದು ಮೆಲ್ಲನೆ ಕೃಪಳ ಗಲ್ಲವನ್ನು ಕುಲುಕ್ಕಿ, 'ಆಕೆ ವಿಶ್ವಕರ್ತನಿಂದ ಚೆನ್ನಾಗಿ ಸೃಷ್ಟಿಸಲ್ಪಟ್ಟಿದ್ದಾಳೆ ಎಂದೆ ಅಷ್ಟೆ. ಯಾರು ಬೇಕಾದರೂ ಆ ಪರಮೇಶ್ವರನ ಸೃಷ್ಟಿಕೌಶಲ್ಯವನ್ನು ಮೆಚ್ಚಬಹುದಷ್ಟೆ?'

'ಹೂ'

'ನೀನೂ ಚೆನ್ನಾಗಿಯೇನೋ ಇದ್ದೀ. ಆದರೆ ರೂಪಿಗೆ ಮತ್ಸರವಿಲ್ಲ. ಆಕೆಗೆ ಈ ಉಡುಪು ಇನ್ನೂ ಚೆನ್ನಾಗಿ ಒಪ್ಪುತ್ತಿತ್ತು.'

ಕೃಪ ಅಧೋಮುಖಿಯಾದಳು. 'ಬಾ, ಇನ್ನು ಎಗ್ಜಿಬಿಷನ್ನಿಗೆ ಹೋಗೋಣ, ಕೃಪಾ' ಎಂದು ಆನಂದ ಕರೆದನು.

ಎಗ್ಜಿಬಿಷನ್ನಿನೊಳಗೆ ಇಬ್ಬರೂ ಹೋದರು. ಹೆಂಗಸರ ವಸ್ತು ಪ್ರದರ್ಶನದ ಕಡೆ ನೋಡುತ್ತಿದ್ದಾಗ ಪಾರ್ವತಮ್ಮ ಕೃಪಾದೇವಿಯ ಪಕ್ಕದಲ್ಲಿ ನಿಂತು, 'ಸೌಖ್ಯವೇನಮ್ಮ?' ಎಂದಳು. ಕೃಪ ಆಕೆಯ ಕಡೆ ದೃಷ್ಟಿಸಿ ನೋಡಿ, ಗಂಡನ ಕಡೆಗೊಮ್ಮೆ ನೋಡಿ 'ಹೂ' ಎಂದಳು. 'ಓ! ನಿಮ್ಮ

ವರೂ ಈ ದಿವಸ ಬಂದಿದ್ದಾರೆ; ಅದಕ್ಕೆ ನಿಮ್ಮ ಮುಖದಲ್ಲಿ ಇಂದು ಕಳೆ ಬಂದಿದೆ!' ಎಂದು ಮುಗುಳು ನಗೆಯಿಂದ ಪಾರ್ವತಮ್ಮ ಹೇಳಿದಳು. ಆಗ ಆಕೆಯ ಅಣ್ಣ 'ಇನ್ನು ಹೋಗೋಣ ಬಾ ಪಾರ್ವತಿ' ಎಂದು ಕರೆದನು. ಆಕೆ 'ಬರುತ್ತೇನಮ್ಮ ನಮಸ್ಕಾರ' ಎಂದು ಕೃಪಾದೇವಿಗೆ ಹೇಳಿ ಹೊರಟು ಹೋದಳು.

'ನೀವಿಬ್ಬರೂ ಬಹಳ ಗುರುತಾಗಿ ಹೋಗಿದ್ದೀರಿ?' ಎಂದು ಆನಂದ ನಸುನಗೆಯಿಂದ ಹೆಂಡತಿಗೆ ಹೇಳಿದನು.

'ನಾನು ಬಂದಾಗಲೆಲ್ಲಾ ಆಕೆಯನ್ನು ಇಲ್ಲಿ ನೋಡುತ್ತೇನೆ! ಅವಳ ಆ ಮಕ್ಕಳನ್ನು ನೋಡಿ ಎಷ್ಟು ಚೆನ್ನಾಗಿವೆ! ಸುಂದರವಾದ ಎರಡು ಹಿಂದೂ ಪ್ರತಿಮೆಗಳಂತಿವೆ ಅವು!'

'ಆಕೆಯೂ ರೂಪವತಿ

ಕೃಪ ದುರುಗುಟ್ಟಿಕೊಂಡು ಗಂಡನ ಕಡೆಗೊಮ್ಮೆ ನೋಡಿ, 'ಹೌದು; ಯಾರಿಲ್ಲ ಅಂದರು! ನಿನ್ನೆ ನಮ್ಮ ರಾಜುವಿನೊಡನೆ ನಾನೊಬ್ಬಳೇ ಇಲ್ಲಿಗೆ ಬಂದುದನ್ನು ಆಕೆ ನೋಡಿ 'ಏನಮ್ಮ ನೀವೊಬ್ಬರೇ ಬಂದಿದ್ದೀರಿ; ನಿಮ್ಮವರು ಬರಲಿಲ್ಲವೇ?' ಎಂದಳು. 'ಅವರು ನಾಳೆ ಬರುತ್ತಾರೆ, ಎಂದೆ.'' ಎಂದು ಒಂದುತರದ ಧ್ವನಿಯಿಂದ ಕೃಪ ಹೇಳಿದಳು.

'ಆಕೆಯ ಮುಖದಲ್ಲಿ ಒಳ್ಳೆ ತಾಯ್ತನದ ಕಳೆ ಇದೆ! ಆಕೆಯನ್ನು ನೋಡಿದರೆ ನನ್ನ ತಾಯಿಯ ನೆನಪಾಗುತ್ತದೆ, ಕೃಪಾ!' ಎಂದು ಆನಂದ ಏನೋ ಹೊಳೆದಂತೆ ಹೇಳಿದನು.

'ನಾನು ನಿಮ್ಮ ತಾಯಿ ತಂದೆಗಳನ್ನು ನೋಡಿಲ್ಲ. ಆ ವಿಷಯದಲ್ಲಿ ನಾನು ದುರಾದೃಷ್ಟಳೇ ಎಂದು ಕೃಪ ಯೋಚಿಸುತ್ತಾ ಹೇಳಿದಳು.

ಆನಂದ ಪ್ರತಿಯೊಂದು ವಸ್ತುವನ್ನೂ ಕೃಪಳಿಗೆ ತೋರಿಸುತ್ತಾ ಹೋದನು. ಅವಳು ಆನಂದನಾಡಿದ ಪ್ರತಿಮಾತಿಗೂ ಸುಮ್ಮನೆ 'ಊ' ಎನ್ನುತ್ತಿದ್ದಳು. ಅವಳ ಮನೋಗತಿಯನ್ನು ಕಂಡು ಆನಂದ ತನ್ನಲ್ಲಿ ತಾನೇ ನಸುನಕ್ಕು, 'ಎಲ್ಲಕ್ಕೂ ಕಾರಣ ಆ ಪಾರ್ವತೀದೇವಿ!' ಎಂದು ಕೊಂಡು, 'ಇರಲಿ ಇವಳಿಗೂ ಒಂದು ಪಾಠ ಕಲಿಸುತ್ತೇನೆ' ಎಂದು ಮನಸ್ಸುಮಾಡಿಕೊಂಡನು.

೫

ಆಶ್ವಯುಜ ಮಾಸದ ಪೂರ್ಣಿಮಾ. ಏಳುಗಂಟೆಗೆ ಸಿಟಿ ರೈಲ್ವೆ ಸ್ಟೇಷನ್ನಿನಲ್ಲಿ ಆನಂದ ಕೃಪ ಮೈಸೂರು ರೈಲಿನಿಂದ ಇಳಿದರು. ಟಾಕ್ಸಿಯೊಂದರಲ್ಲಿ ಮನೆಯನ್ನು ಸೇರಿದರು.

ಮನೆಗೆ ಬರುವುದಕ್ಕೇ ಇಲ್ಲ; 'ಆ ಗುಲಾಬಿ ಗಿಡವನ್ನು ನೋಡಬೇಕು. ಬಹುಶಃ ಈಗ ಮೊಗ್ಗುಗಳು ಅರಳಿ ಹೂಗಳಾಗಿರಬೇಕು ' ಎಂದು ಕೃಪ ಆನಂದನಿಗೆ ಹೇಳಿದಳು.'ಮೈಸೂರಿನಲ್ಲೂ ಹಗಲಿರುಳೂ ಮಹಾರಾಣಿಯವರಿಗೆ ಇದೇ ಕನಸಾಗಿತ್ತೇನೋ ! ಆಗಬಹುದು ಬನ್ನಿ ' ಎಂದು ತಂದಿದ್ದ ಸಾಮಾನುಗಳನ್ನೆಲ್ಲಾ ಮನೆಯಲ್ಲಿಟ್ಟು, ಹಾಕಿದ್ದ ಉಡುಪಿನಿಂದಲೇ ಇಬ್ಬರೂ ಮನೆಯ ಹಿಂದಿದ್ದ ಉದ್ಯಾನವನಕ್ಕೆ ಹೋದರು.

ಅಂದು ಸುಧಾಕರನು ತನ್ನ ಕಿರಣಗಳನ್ನು ಎಲ್ಲೆಡೆಯಲ್ಲಿಯೂ ಎರೆಚಿ ಭೂಮಿಯನ್ನೆಲ್ಲಾ ಹಾಲಿನಿಂದ ಮುಚ್ಚಿದಂತೆ ಮಾಡಿದ್ದನು. ಸೂರ್ಯದೇವನು ಪಶ್ಚಿಮದಲ್ಲಿ ಮುಳುಗಿದ್ದ ದಾರಿ ಕೆಂಪಗೆ ಸ್ವಲ್ಪಸ್ವಲ್ಪ ಕಾಣುತ್ತಿತ್ತು. ಮಾರುತನು ನಿಧಾನವಾಗಿ ಬೀಸುತ್ತಿದ್ದನು. ದಂಪತಿಗಳು ಮೆಲ್ಲನಡೆಯಿಂದ ಪ್ರತಿ ಗಿಡವನ್ನೂ ನೋಡುತ್ತಾ ಆ ಗುಲಾಬಿಯಗಿಡದ ಬಳಿ ಬಂದರು. ಆ ಗಿಡವನ್ನು ಸ್ವಲ್ಪದೂರದಿಂದ ನೋಡಿದೊಡನೆಯೇ ಕೃಪಾದೇವಿ ಅಲ್ಲಿಗೆ ಓಡಿಹೋಗಿ ' ನಡುವಿನ ಕವಲುಗಳೆರಡರಲ್ಲಿಯೂ ಮೊಗ್ಗುಗಳು ಅರಳಿವೆ ! ಕೆಂಪು ಮತ್ತು ಬಿಳಿಮೊಗ್ಗುಗಳು ಸ್ವಲ್ಪ ಅರಳಿವೆ! ' ಎಂದು ಸಂತೋಷದಿಂದ ಹೇಳಿದಳು.

ಆನಂದನೂ ಅಲ್ಲಿಗೆ ಬಂದು, ಆ ಗಿಡದ ಕಡೆ ನೋಡಿ 'ನಾನು ಅಂದು ಹೇಳಿದ ಮಾತಿಗೆ ಏನು ಉತ್ತರ ಕೊಡುತ್ತೀರಿ ರಾಣಿಯವರೇ ! ? ಎಂದು ನಸುನಗೆಯಿಂದ ಹೇಳಿದನು.

' ನೀವು ನಿಜವಾಗಿಯೂ ಬ್ರಹ್ಮರೇ !ಹೌದು; ನೀವು ಹೇಳಿದಂತೆಯೇ ಈ ಕವಲಿನಲ್ಲಿ ಬಿಳಿಯ ಹೂ. ಅರ್ಧ ಅರಳಿದ ಮೊಗ್ಗುನೋಡಿ ಎಷ್ಟು ಸೊಗಸಾಗಿದೆ. ಈ ನಡುವಿನ ಎರಡು ಕವಲುಗಳಲ್ಲಿಯೂ ಪೂರ್ತಿಯಾಗಿ ಅರಳಿರುವ ಕೆಂಪು ಮಿಶ್ರವಾದ ಬಿಳಿಯ ಹೂಗಳು ಬಹಳ ರಮ್ಯವಾಗಿವೆ. ಈ

ಕೊನೆಯ ಕವಲಿನಲ್ಲಿಯ ಕೆಂಪು ಹೂ ಸಹ ಅರ್ಧ ಅರಳಿದೆ. ಈ ಮಿಶ್ರ ಬಣ್ಣದ ಹೂಗಳು ಎಷ್ಟು ಅಗಲವಾಗಿ ಚೆಂದವಾಗಿವೆ!'

'ಹೌದು; ವಿಶ್ವಕರ್ತನು ಅವನ್ನು ಸೊಗಸಾಗಿ ನಿರ್ಮಾಣಮಾಡಿದ್ದಾನೆ!'

'ಇಷ್ಟು ರೂಪದಿಂದ ಅವನ್ನು ಸೃಷ್ಟಿಸಲಿಕ್ಕೆ ಅವನ ಮನಸ್ಸಿನಲ್ಲಿ ಏನಾಸೆ ಇತ್ತೋ!'

'ಎಲ್ಲರೂ ಅವನ್ನು ನೋಡಿ ಮೆಚ್ಚಲೆಂಬುದೇ ಅವನ ಆಸೆ. ತನ್ನ ಸೃಷ್ಟಿಯ ಸೊಬಗಿನಿಂದ ಎಲ್ಲರ ಮನಸ್ಸನ್ನೂ ಸೊಬಗಿನಿಂದ ಮೆರೆಯಿಸುವುದೇ ಅವನ ಲೀಲೆ.'

'ಹೂಗಳು ಬಹಳ ಚೆನ್ನಾಗಿವೆ!'

'ಹೌದು'

'ಈ ತೋಟ ನಮ್ಮದಾಗಿಯೇ ಇದ್ದಿದ್ದರೆ?'

'ಆಗಲೂ ಇಷ್ಟರಮಟ್ಟಿನ ಸುಖವೇ'

ಕೃಪಾದೇವಿ ಆ ಹೂಗಳನ್ನು ಮುಟ್ಟಿ, ತನ್ನ ಗಂಡನ ಕಡೆಗೊಮ್ಮೆ ನೋಡಿ, 'ಇದನ್ನು ಕಿತ್ತುಕೊಳ್ಳಲಾ?' ಎಂದು ಓರೆಗಣ್ಣಿನಿಂದ ಅವನನ್ನು ನೋಡುತ್ತಾ ನಿದಾನವಾಗಿ ಹೇಳಿದಳು.

'ಆ ಹೂವನ್ನು ಕೇಳಬೇಡ ಕೃಪ. ದೇವದೇವನು ಅದರಲ್ಲಿಟ್ಟಿರುವ ಸೌಂದರ್ಯವನ್ನು ನೋಡಿ ನಲಿಯೋಣ. ಅದರ ರೂಪ ನಮ್ಮದು; ಅದು ಬೇರೆಯವನದು.'

ದೊಡ್ಡ ಸಿಡಿಲೊಂದು ತಲೆಯ ಮೇಲೆ ಬಿದ್ದಂತಾಯಿತು ಕೃಪಾದೇವಿಗೆ. ಇದೇ ಆಕೆಯ ಜೀವನದಲ್ಲಿ ತಾನು ಕೇಳಿದ್ದನ್ನು ಇನಿಯನು ಆಕೆಗೆ ದಯಪಾಲಿಸದಿದ್ದ ದಿನ. ಅವಳು ಗಂಡನ ಕಡೆ ನೋಡಿ, ಅವನ ಮೇಲೆ ದೈನ್ಯ ಕಟಾಕ್ಷವನ್ನು ಬೀರಿ, ಆ ಗುಲಾಬಿ ಹೂಗಳನ್ನು ನೋಡಿ ತಲೆಬಗ್ಗಿಸಿಕೊಂಡಳು; ತನ್ನ ಕರವಸ್ತ್ರದಿಂದ ಕಣ್ಣನ್ನೊರಸಿಕೊಂಡಳು.

ಆಗ ರಾಮರಾಯರು ತಮ್ಮ ಮನೆಯ ಹಿಂಬಾಗಿಲ ಮೂಲಕ ತೋಟಕ್ಕೆ ಪ್ರವೇಶಿಸಿ, 'ಹಲೋ! ಆನಂದ್ ಇಂದು ಬಂದಿರಾ!' ಎಂದು ಕೂಗಿದರು. 'ನಾನು ಮನೆಗೆ ಹೋಗುತ್ತೇನೆ' ಎಂದು ನೆಲವನ್ನು

ನೋಡುತ್ತಾ ಕೃಪ ಆನಂದನಿಗೆ ಹೇಳಿ ಮೆಲ್ಲಮೆಲ್ಲನೆ ಯೋಚನೆಯಿಂದ ಕೂಡಿದ ಹೆಜ್ಜೆಗಳನ್ನಿಡುತ್ತಾ ಮನೆಯ ಕಡೆ ಹೊರಟಳು.

'ಹೌದು; ಈ ರೈಲಿನಲ್ಲಿ ಬಂದೆ' ಎಂದು ಆನಂದ ರಾಮರಾಯರಿಗೆ ಉತ್ತರವಿತ್ತನು.

'ಆಗಲೇ ತೋಟದ ಇನ್‌ಸ್ಪೆಕ್ಷನ್ನಿಗೆ ಬಂದು ಬಿಟ್ಟಿದ್ದೀರಿ. ನಿಮ್ಮ ಮನಸ್ಸಿಗೆ ಇದೇ ದೊಡ್ಡ ಅತ್ತೆಯ ಮನೆಯಂತಿದೆ!'

ಯೋಚನೆಯಿಂದಿದ್ದ ಆನಂದನ ಮುಖದಿಂದ ಮುಗುಳು ನಗೆಯ ಕಣವೊಂದು ಚದರಿತು!

'ಹೇಗಿದೇರಿ ಈ ಗುಲಾಬಿ ಹೂ?' ಎಂದು ಆನಂದ ರಾಮರಾಯರನ್ನು ಕೇಳಿದನು.

'ಬಹಳ ಸೊಗಸಾಗಿದೇರಿ. ಎಲ್ಲಾ ನಿಮ್ಮ ಹಸ್ತಗುಣವಪ್ಪ. ಅದು ಸರಿಸ್ರಿ. ನಿಮ್ಮವರೇಕೆ ಇಂದು ಎಂದಿನಂತೆ ನಗುಮುಖರಾಗಿರಲಿಲ್ಲ. ತಾಯಿಯ ಮನೆ ಬಿಟ್ಟು ಬಂದಿದ್ದಕ್ಕಾಗಿ ಆಕೆ ಹೀಗಿಲ್ಲವೆಂದೇ ಹೇಳುತ್ತೇನೆ. ಯಾಕೆಂದರೆ ನಿಮ್ಮನ್ನು ಎಲ್ಲರಿಗಿಂತಲೂ ಆಕೆ ಅಧಿಕವಾಗಿ ಪ್ರೀತಿಸುತ್ತಾರೆ.

'ಅವರಿಗೊಂದು ಪಾಠ ಕಲಿಸಿದೆ ಇಂದು'

'ಪಾಠಕ್ಕೆ ಸಬ್ಜೆಕ್ಟು ಯಾವುದುರಿ?'

'ಗುಲಾಬಿ ಹೂ'

'ಒಳ್ಳೆ ಪಾಠವಪ್ಪ! ಪಾಠ ಕಲಿತುಕೊಳ್ಳುವಲ್ಲಿ ನಿಮ್ಮವರು ನಗುತ್ತಿರುವುದನ್ನು ನೋಡಿದ್ದೇನೆ; ಆದರೆ ಇಂದು ಬಾಡಿದ ಮುಖ?'

'ಅವರಿಗೆ ಪ್ರಕೃತಿಯನ್ನು ಮೆಚ್ಚು, ಅದನ್ನು ಕೊಂಡಾಡು, ಆದರೆ ತನ್ನದೇ ಆ ಮೆಚ್ಚಿಗೆಯ ವಸ್ತುಗಳೆಲ್ಲಾ ಆಗಲೆಂಬ ಬಯಕೆ ಬೇಡ ಎಂದೆ. ಅದಕ್ಕೇ ಅವರು ಹಾಗಾಗಿರವುದು.'

'ಏನು ಈ ಗುಲಾಬಿ ಹೂವನ್ನು ಕೇಳಿದರೇನೋ, ಅಷ್ಟೇ ತಾನೆ! ಅವರೇ ಈ ಗಿಡಕ್ಕೆ ಎಷ್ಟೋಸಲ ನೀರೆರೆದಿದ್ದಾರೆ. ಆ ಹೂ ಕೊಟ್ಟಿದ್ದ ಮಾತ್ರಕ್ಕೇ ಏನು ನಷ್ಟವಾಗಿ ಹೋಗುತ್ತಿತ್ರಿ.'

'ಅವರು ನೀರೆರೆದಿದ್ದ ಮಾತ್ರಕ್ಕೇ ಏನು, ಅದರಿಂದ ಈ ಹೂ ಅವರದಲ್ಲ. ನಿಮ್ಮ ತೋಟದಲ್ಲಿರುವುದರಿಂದ ಇದು ನಿಮ್ಮದೂ ಅಲ್ಲ. ನಾನು

ಪ್ರೋಷಿಸಿದ್ದರಿಂದ ಇದೂ ನನ್ನದೂ ಅಲ್ಲ. ಅದರ ಒಡೆಯ ಬೇರೆ ಇದ್ದಾನೆ. ಆದರೆ ಅದರ ಸೌಂದರ್ಯವನ್ನು ನೋಡಿ ನಲಿಯುಲು ನಮಗೆಲ್ಲರಿಗೂ ಅಧಿಕಾರವಿದೆ.'

'ನಿಮ್ಮ ವೇದಾಂತ ಏನೋ ಅಪ್ಪ!' ಎಂದು ರಾಮರಾಯರು ಆ ಗುಲಾಬಿ ಹೂವನ್ನು ಕಿತ್ತು ಆನಂದನ ಕೈಗೆ ಬಲಾತ್ಕಾರದಿಂದ ಕೊಟ್ಟು 'ಇದನ್ನು ಅವರಿಗೆ ಕೊಡ್ರಿ. ಪಾಪ ಅಷ್ಟು ಬಯಸಿದ ಮೇಲೆ ಇದರ ಬೆಳವಣಿಗೆಗಾಗಿ ಕಷ್ಟಪಟ್ಟ ಅವರಿಗೆ ಇದು ಇಲ್ಲದೆ ಹೋದರೆ ಇದು ಹುಟ್ಟಿದ್ದಕ್ಕೆ ಸಾರ್ಥಕವೇನು?' ಎಂದು ಹೇಳಿದರು. ಆನಂದನು ನಿಟ್ಟುಸಿರು ಬಿಟ್ಟನು. ಮನೆಯ ಗಡಿಯಾರದಲ್ಲಿ ಒಂಭತ್ತು ಗಂಟೆ ಹೊಡೆಯಿತು. 'ಇನ್ನು ಮನೆಗೆ ಹೋಗಿ ಆನಂದ್. ನಿಮ್ಮವರು ಊಟಕ್ಕಾಗಿ ಕಾದಿರಬಹುದು' ಎಂದು ರಾಮರಾಯರು ಹೇಳಿದರು. ಆನಂದ ಆ ಗುಲಾಬಿ ಹೂವನ್ನು ಕೈಯಲ್ಲಿ ಹಿಡಿದುಕೊಂಡು, ಎರಡು ಅಶೋಕದ ತಳಿರುಗಳಿಂದ ಕೂಡಿದ ಹೂ ಗೊಂಚಲುಗಳನ್ನು ಮರದಿಂದ ಕಿತ್ತುಕೊಂಡು ಮನೆಯ ಕಡೆ ಹೊರಟನು.

ಆನಂದ ಮನೆಯೊಳಕ್ಕೆ ಹೋದನು. ಅಡಿಗೆಯವನು ಬಂದು, 'ಅಮ್ಮನವರಿಗೆ ಸ್ವಲ್ಪ ಸ್ವಸ್ಥವಿರದಂತಿದೆ. ಅಡಿಗೆಯನ್ನು ಕೊಟಡಿಯಲ್ಲಿ ಮೇಜಿನ ಮೇಲಿಟ್ಟೆ. ಅವರಿಗೆ ಹೇಳಿದೆ. ಆದರೂ ಹಾಸಿಗೆಯ ಮೇಲೆಯೇ ಮಲಗಿದ್ದಾರೆ' ಎಂದು ಹೇಳಿದನು.

ಆನಂದ ತನ್ನ ಕೊಟಡಿಯೊಳಕ್ಕೆ ಹೋದನು. ಅಲ್ಲಿ ಎಲೆಕ್ಟ್ರಿಕ್ ದೀಪ ಉರಿಯುತ್ತಿತ್ತು. ಮೇಜಿನ ಮೇಲೆ ಊಟ ಸಿದ್ಧವಾಗಿತ್ತು. ಮೇಜಿನ ಪಕ್ಕದಲ್ಲಿದ್ದ ಮಂಚದ ಮೇಲಿನ ಹಾಸಿಗೆಯಲ್ಲಿ ಕೃಪ ಹೊರಳಾಡುತ್ತಿದ್ದಳು. ಅವಳ ಬಲಗಡೆ ಗೋಡೆಗೆ ಕ್ರಿಸ್ತದೇವನ ಪಟವೊಂದು ನೇತುಹಾಕಿದೆ. ದೇವನು ಎಳೆಯ ಬಾಲಕರನ್ನು ಕುಳ್ಳಿರಿಸಿಕೊಂಡು ರೊಟ್ಟಿ ಹಂಚುತ್ತಿದ್ದಾನೆ. ಆತನ ಸುತ್ತಲೂ ಪ್ರಕೃತಿಯ ನರ್ತನ. ಮಕ್ಕಳೆಲ್ಲಾ ತೇಜಸ್ಸಿನಿಂದ ಕೂಡಿದ ಆತನ ಮುಖವನ್ನು ಸುಮ್ಮನೆ ದೃಷ್ಟಿಸಿ ನೋಡುತ್ತಾ ಇವೆ. ಆ ಪಟಕ್ಕೆ ಹಾಕಿದ್ದ ಬಕುಳದ ಹಾರ ಸೊಗಸಾಗಿ ಮೆರೆಯುತ್ತಿತ್ತು. ಆ ಚಿತ್ರಪಟದ ಪಕ್ಕದಲ್ಲಿ 'ಪ್ಯಾರಡೈಸ್ ಲಾಸ್ಟ್'ನ ಅನೇಕ ಚಿತ್ರಗಳು

ಅಲ್ಲಲ್ಲಿ ಒಂದೊಂದು ರವಿವರ್ಮನ ಚಿತ್ರ. ಕೃಪ ಸುಮ್ಮನೆ ಕ್ರಿಸ್ತದೇವನ ಪಠವನ್ನೇ ನೋಡುತ್ತಾ, ಆಕಡೆ ಹೊರಳಿಕೊಂಡಿದ್ದಳು.

ಆನಂದ ಹಾಸಿಗೆಯ ಮೇಲೆ ಕುಳಿತು, ತನ್ನ ನಿಯಳ ಭುಜದ ಮೇಲೆ ಕೈಹಾಕಿ 'ಇಂದಾ ಕೃಪ' ಎಂದು ಆ ಗುಲಾಬಿ ಹೂವನ್ನು ನೀಡಿದನು. ಕೃಪ ಹಾಸಿಗೆಯ ಮೇಲೆ ಕುಳಿತಳು. ಗಂಡನ ಕೈಲಿದ್ದ ಆ ಗುಲಾಬಿಯ ಹೂವಿನ ಕಡೆ ನೋಡಿದಳು. ಅವಳ ಕಣ್ಣಿನಿಂದ ನೀರು ಸುರಿಯಿತು. ಕ್ರಿಸ್ತ ಮಹಾತ್ಮನ ಕಡೆಗೊಮ್ಮೆ ನೋಡಿ, ಇನಿಯನನ್ನು ದೈನ್ಯ ದೃಷ್ಟಿಯಿಂದ ನೋಡುತ್ತಾ 'ಅದನ್ನು ಸ್ವೀಕರಿಸಲು ನಾನು ಯೋಗ್ಯಳಲ್ಲ' ಎಂದಳು.

'ಏಕೆ! ಆಗ ಇದನ್ನು ಕೇಳಿದೆಯಲ್ಲಾ!'

'ಮೂಢಳಾಗಿ, ಭಗವಂತನ ಆಜ್ಞೆಯನ್ನು ತಿಳಿಯದೆ ಕೇಳಿದೆ. ನಾನು ಅಧಮಳು. ತಾವು ಅನ್ಯಥಾ ಭಾವಿಸಬೇಡಿ, ಅದರ ಯಜಮಾನಿಯಾಗಲು ನನಗೆ ಯೋಗ್ಯತೆ ಇಲ್ಲ.'

ಆನಂದ ಬಲಾತ್ಕಾರದಿಂದ ಆ ಹೂವನ್ನು ಕೃಪಳ ತುರುಬಿನಲ್ಲಿ ಮುಡಿಸಲು ತೆಗೆದುಕೊಂಡು ಹೋದನು. ಕೃಪ ಅದನ್ನು ಆನಂದನ ಕೈಯಿಂದ ಕಿತ್ತುಕೊಂಡು, ಅವನ ಕಡೆಯೇ ನೋಡುತ್ತಾ, ಕ್ರಿಸ್ತದೇವನ ಪಠಕ್ಕೆ ಹಾಕಿದ್ದ ಬಕುಳದ ಹಾರಕ್ಕೆ ಆ ಗುಲಾಬಿಯ ಹೂವನ್ನು ಸಿಕ್ಕಿಸಿಟ್ಟು, 'ಹೂ ಎಷ್ಟು ಚೆನ್ನಾಗಿದೆ! ಎಂದು ಗಂಡನನ್ನು ಕೇಳಿದಳು.

'ಚಿನ್ನದಿಂದ ಕೂಡಿದ ವಜ್ರದಂತಿದೆ' ಎಂದು ಆನಂದ ಕೃಪಾದೇವಿಗೆ ಹೇಳಿ, 'ತನ್ನ ಜೇಬಿನಲ್ಲಿದ್ದ ಆ ಎರಡು ಅಶೋಕದ ಹೂ ಗೊಂಚಲುಗಳನ್ನು ಆ ಗುಲಾಬಿ ಹೂವಿನ ಎರಡು ಕಡೆಗಳಲ್ಲಿಯೂ ಇರುವಂತೆ ಬಕುಳದ ಹಾರಕ್ಕೆ ಸಿಕ್ಕಿಸಿ, 'ಈಗ ಆ ಪಠ ಹೇಗಿದೆ; ಆ ಹಾರ ಹೇಗಿದೆ?' ಎಂದು ಕೇಳಿದನು.

'ಸೌಂದರ್ಯ ಸಾಗರನಿಗೆ ಸೌಂದರ್ಯದ ತೊರೆಗಳು ಬಂದು ಸೇರಿದಂತಿವೆ ಈ ಹೂಗಳೆಲ್ಲಾ. ಈ ತತ್ವವನ್ನು ತಿಳುಹಿಸಿದುದಕ್ಕಾಗಿ ನಿಮಗೆ ನಾನು ಚಿರ ಕೃತಜ್ಞಳು' ಎಂದು ಕೃಪ ಆನಂದನ ಕಾಲು ಹಿಡಿದುಕೊಂಡಳು.

'ಅದನ್ನು ನಾನು ತಿಳುಹಿಸಲಿಲ್ಲ, ಕೃಪ, ಆ ಪಾರ್ವತಿದೇವಿಯ ರೂಪರಾಸಿ ತಿಳುಹಿಸಿತು.'

‘ ಅದೂ ಅಲ್ಲ. ಈ ಗುಲಾಬಿ ಹೂ.’

‘ ಅಶೋಕವನ್ನೇಕೆ ಮರತೆ. ’

‘ ಅದು ನಿಮಗೆ ಜ್ಞಾನಾಭಿವೃದ್ಧಿಯಾಗುವಂತೆ ಮಾಡಿತು. ಈ ಗುಲಾಬಿ ಹೂ ನನ್ನ ಹೃದಯದ ಅಂಧಕಾರವನ್ನು ನಾಶಮಾಡಿತು !’ ಎಂದು ಆ ಹೂವನ್ನು ನೋಡುತ್ತಾ ಗಂಡನ ಭುಜದ ಮೇಲೆ ತನ್ನ ಎರಡು ಕೈಗಳನ್ನೂ ಹಾಕಿಕೊಂಡು ‘ ನಿಮ್ಮ ವಿಷಯದಲ್ಲಿ ತಪ್ಪು ತಿಳಿದುಕೊಂಡಿದ್ದ ಮೂಢಳ ತಪ್ಪನ್ನು ಕ್ಷಮಿಸಿ’ ಎನ್ನುವ ದೃಷ್ಟಿಯನ್ನು ಅವನ ಮೇಲೆ ಬೀರುತ್ತಾ, ಅವನಿಗೆ ಮುತ್ತುಕೊಟ್ಟಳು. ಆನಂದನೂ ನಸುನಗೆಯಿಂದ ಪ್ರೇಯಸಿಯನ್ನು ನೋಡುತ್ತಾ, ಹಾರದಿಂದ ಮೆರೆಯುತ್ತಿದ್ದ ಕ್ರಿಸ್ತದೇವನ ಪಟವನ್ನು ನೋಡುತ್ತಾ ಇನಿಯಳ ಮುತ್ತಿಗೆ ಪ್ರತಿ ಮುತ್ತನ್ನು ಆನಂದಿಸಿದನು.

---

# ಬೀಬೀ ನಾಚ್ಚಿಯಾರ್

‘ ಮ್ಲೇಚ್ಛಳೊಡನೆ ನನ್ನ ದೇವ! ಇದೇನು ದೃಶ್ಯ? ಯೋಚನೆಗಳಿಂದ ನನ್ನ ತಲೆ ಕೆಟ್ಟು ಹೋಗಿದೆಯೋ? ಪುನಃ ಅದೇ ದೃಶ್ಯ! ದೇವ ಇದೇನು! ನಿನಗೆ ಶ್ರೀದೇವಿ ಇರಲಿಲ್ಲವೇ? ಭೂದೇವಿ ಇರಲಿಲ್ಲವೇ?– ಮ್ಲೇಚ್ಛಳು! ಆದರೂ ಇವಳ ಮುಖದಲ್ಲಿ ಎಂತಹ ಕಳೆಯಿದೆ. ನಾನು ಕಂಡಿದ್ದ ಲಕ್ಷ್ಮೀ ದೇವಿಯ ಮುಖವೇ ಇವಳದೂ! ಆದರೆ ಉಡುಪೋ ಮ್ಲೇಚ್ಛರಮಣಿ ಯರು ಧರಿಸುವಂತಹುದು. ವಿಚಿತ್ರ!

‘ ಹಾ! ಛಳಿ! ಛಳಿ! ದೇವಾ! ನೀನೇನೋ ನವಾಬನಂವನಿಯ ಹಾಸಿಗೆಯಲ್ಲಿ ನವಾಬನಂತೆ ಮಲಗಿರುವೆ. ಇಲ್ಲಿ ಸಹಿಸಲಸಾಧ್ಯವಾದ ಛಳಿ. ಇದೇನು ಈ ದೃಶ್ಯ! ನನ್ನ ದೇವ ಬೆತ್ತಲೇ! ‘ ನನ್ನನ್ನು ನೋಡು ’ ಎನ್ನು ತ್ತಿದ್ದೀಯಾ, ದೊರೆ? ಇಂದು ಈ ಉತ್ತರೀಯವನ್ನು ಹೊದೆದುಕೋ. ‘ ಸುಮ್ಮನೆ ನಾನು ಅದನ್ನು ಹೊದೆಯುವೆನೇ?’ ಎನ್ನುತ್ತೀಯಾ?

‘ ಇನ್ನೂ ಸೊಗಸಿನ ದೃಶ್ಯವಿದು. ಎಷ್ಟು ವರ್ಷಗಳಿಂದ ಅಲ್ಲಿ ನೆಲಸಿ ರುವೆ, ಸ್ವಾಮಿ? ನಿನ್ನ ಮೇಲೆ ಬೆಟ್ಟದಂತೆ ಬೆಳೆದಿರುವ ಹುತ್ತ. ಇಲ್ಲಿಯೂ ಫಣಿಶಯನ ನೀನು! ಹುತ್ತದ ಮೇಲೆ ನಿನ್ನ ಅನನ್ಯಭಕ್ತೆ–ತುಳಸಿ! ಗಿಡ ವೆಷ್ಟು ಸೊಗಸಾಗಿ ಬೆಳೆದಿದೆ! ಏನು ತುಳಸಿ, ‘ ಮಾನವನು ನನ್ನನ್ನು

ಮುಟ್ಟಿದರೆ ಹೀಗೆ ಬೆಳೆಯುತ್ತಿರಲಿಲ್ಲ; ನಾನೇ ದೇವನಿಗೆ ಆತ್ಮಸಮರ್ಪಣೆ ಮಾಡಿದ್ದೇನೆ; ಆದುದರಿಂದಲೆ ಹೀಗಿದ್ದೇನೆ ' ಎನ್ನುತ್ತಿದ್ದೀಯಾ ?

' ಇದೇನು ! ಈ ಕಪಿಲಧೇನುವು ತನ್ನಷ್ಟಕ್ಕೆ ತಾನೇ ಈ ಹುತ್ತದ ಮೇಲೆ ಹಾಲು ಸುರಿಸಿ ಹೋಗುತ್ತಿದೆ ? ಇದು ಅದರ ದೇವನ ಸೇವೆ. ನೀನೇ ಧನ್ಯೆ ಗೋಮಾತೆ !

' ದೇವಾ ! ನಿನಗೆ ಎಲ್ಲೆಲ್ಲಿಯೂ ಸೇವಕರು. ನಾನು ಪಾಪಿ ! ನನ್ನ ಸುಖವನ್ನು ಬಯಸಿ ನಿನ್ನನ್ನು ದೂರಿದೆ; ಕ್ಷಮಿಸು. ನಿನಗೆ ಸರಿಯಾದ ನೆಲೆ ಸಿಕ್ಕುವವರೆಗೂ ನಾನು ನನ್ನ ಸುಖವನ್ನು ಬಯಸೆನು. ನನಗೆ ಇರುವ ಸುಖತಾನೆ ಏನು ದೊರೆ ! ಅಲ್ಲಿ ಆ ಕರಿಕಾಳ ಚೋಳ—ಆ ವೈಷ್ಣವ ದ್ವೇಷಿ—ನನ್ನನ್ನು ತನ್ನ ರಾಜ್ಯದಿಂದ ಓಡಿಸಿದ....ಹೋಗಲಿ ಆ ಮಾತು. ನಿನ್ನನ್ನು ಒಂದು ಸ್ಥಳದಲ್ಲಿ ನೆಲೆಗೊಳಿಸಬೇಕು. ಹೇಗೆ ? ನಾನು ಕಡು ಬಡವ. ಆಹುದು ! ಎಲ್ಲರೂ ಜಾತಿಯಿಂದ ಬೇರೆ ಇಟ್ಟಿರುವ ಹೊಯಿಸಳರ ಬಿಟ್ಟಿದೇವನಿರುವನು—ಎಂದು ನೀನು ಹಿಂದೆ ಹೇಳಿದ್ದುದು ಸರಿಯಾಗಿ ನೆನಪಿದೆ; ಅವನನ್ನು ನಿನ್ನ ಮಾತಿನಂತೆಯೇ ವೈಷ್ಣವನನ್ನಾಗಿ ಮಾಡಲೋಸುಗವೇ ಹೊರಟೆ; ಈ ಬೆಟ್ಟದ ಬಳಿ ಬರುವಲ್ಲಿ ಕತ್ತಲಾದುದರಿಂದ ಈ ಶಿಥಿಲ ದೇವಾಲಯದಲ್ಲಿ ಮಲಗಿದೆ. ಸರಿ, ಅದೇ ಕಡೆಯ ಮಾರ್ಗ. ಅವನನ್ನು ವೈಷ್ಣವನನ್ನಾಗಿ ಮಾಡುತ್ತೇನೆ; ಅವನ ಸಹಾಯದಿಂದ ನಿನ್ನ ಸೇವೆಯನ್ನು ಮನಸ್ಸಿಗೆ ತೃಪ್ತಿಯಾಗುವತನಕ ಮಾಡುತ್ತೇನೆ. ಏನು, ದೇವ ಕಣ್ಮರೆಯಾದ ! ಇದೇನು ಈ ಕಾಂತಿ ! ಕಣ್ಣು ಚುಚ್ಚುತ್ತಿರುವ ಸೂರ್ಯರಶ್ಮಿ ? ' ಎನ್ನುತ್ತಾ ಮಲಗಿದ್ದ ರಾಮಾನುಜಾಚಾರ್ಯರು ಕಣ್ಣುಗಳನ್ನುಜ್ಜಿಕೊಳ್ಳುತ್ತಾ ಎದ್ದು ಕುಳಿತು, ಆಗತಾನೆ ಉದಯಿಸಿ ತನ್ನ ಕದಿರುಗಳನ್ನು ಎಲ್ಲೆಲ್ಲಿಯೂ ಎರಚುತ್ತಿದ್ದ ಪ್ರಭಾಕರನಿಗೆ ನಮಸ್ಕಾರವನ್ನು ಮಾಡಿ ಬಲಗಡೆ ತಿರುಗಿದರು.

ನಿರ್ಜನವಾದ ಅರಣ್ಯ. ಅಲ್ಲಲ್ಲಿ ಕಿಲಕಿಲಧ್ವನಿಮಾಡುತ್ತಿದ್ದ ಪಕ್ಷಿಗಳ ನಿನಾದವಲ್ಲದೆ ಮತ್ತೆ ಯಾವ ಶಬ್ದವೂ ಇಲ್ಲ. ಆಚಾರ್ಯರು ಮಲಗಿದ್ದ ದೇವಾಲಯದ ಮುಂದಿದ್ದ ದೊಡ್ಡಹುತ್ತವನ್ನು ಕಂಡು, 'ನಾನು ಕಂಡದ್ದು

ಕನಸನ್ನೋ ಇಲ್ಲವೇ ದೇವನ ಸೃಜಸ್ಥಿತಿಯನ್ನೋ! ಹುತ್ತದ ಮೇಲೆ ಪುಷ್ಕಲವಾಗಿ ಬೆಳೆದಿರುವ ತುಲಸಿಯ ಗಿಡ! ಹೀಗೆ ಹುಲುಸಾಗಿ ಬೆಳೆದಿರುವ ತುಲಸಿಯ ಗಿಡವನ್ನು ನನ್ನ ಜೀವನದಲ್ಲಿ ನಾನೆಲ್ಲಿಯೂ ನೋಡಿಲ್ಲ! ಹುತ್ತದ ಬಳಿಗೆ ಗೋವೊಂದು ಬರುತ್ತಿದೆ. ಅದರದು ಏನು ಸೊಗಸಾದ ಕಪಿಲವರ್ಣ. ನಾನು ಕನಸಿನಲ್ಲಿ ಕಂಡ ಗೋವೇ ಇದು! ಆಶ್ಚರ್ಯ!!' ಎನ್ನುತ್ತಾ ಹುತ್ತದ ಕಡೆಯೇ ದೃಷ್ಟಿಸಿ ನೋಡಿದರು. ಗೋವು ಹುತ್ತದ ಮಗ್ಗುಲಿಗೆ ಬಂದು, ಅದರ ಮೇಲೆ ಹಾಲು ಸುರಿಸಿ ಹೊರಟುಹೋಯಿತು. 'ದೇವಾ! ನಿನ್ನ ಮಾಯೆ ಊಹಿಸಲಸಾಧ್ಯ. ನಿನ್ನ ಭೃತ್ಯನಾದ ನನ್ನಿಂದ ಸೇವೆ ಮಾಡಿಸಿಕೊಳ್ಳಲು ಮೊದಲೇ ನನಗೆ ಆಜ್ಞೆ ಮಾಡಿದೆ. ನಾನು ಪುಣ್ಯವಂತ, ದೇವಾ!' ಎನ್ನುತ್ತಾ ಹುತ್ತಕ್ಕೆ ತಾವು ಕುಳಿತಲ್ಲಿಯೇ ನಮಸ್ಕಾರಮಾಡಿ, ಆಮೇಲೆ ಕೆಳಗೆ ಹಾಸಿಕೊಂಡಿದ್ದ ಉತ್ತರೀಯವನ್ನು ಮೈಮೇಲೆ ಹಾಕಿಕೊಂಡು, ಹುತ್ತದ ಬಳಿಗೆ ಬಂದು ಕೈಜೋಡಿಸಿಕೊಂಡು ನಿಂತರು.

ಭುಜದ ಮೇಲೆ ನೇಗಿಲುಗಳನ್ನು ಹೊತ್ತುಕೊಂಡು, ಕೈಯಲ್ಲಿ ಗುದ್ದಲಿ ಹಾರಿಗಳನ್ನು ಎತ್ತಿಕೊಂಡು, ಎತ್ತುಗಳೊಡನೆ ಹೊಲ ಉಳಲು ಹುತ್ತದ ಬಳಿಯಲ್ಲಿದ್ದ ದಾರಿಯಲ್ಲಿ ಆದಿಕರ್ಣಾಟಕರಿಬ್ಬರು ಬರುತ್ತಿದ್ದರು. 'ಅಯ್ಯಾ, ಇಲ್ಲಿ ಸ್ವಲ್ಪ ಬನ್ನಿ' ಎಂದು ಆಚಾರ್ಯರು ಸಮ್ಮಭಾವದಿಂದ ಅವರನ್ನು ಕರೆದರು.

ಆದಿಕರ್ಣಾಟಕರಿಬ್ಬರೂ ಆಚಾರ್ಯರ ಮುಖವನ್ನು ದೃಷ್ಟಿಸಿ ನೋಡಿದರು. 'ಈರಾ, ಅವರ ಮುಖದಲ್ಲಿ ಏನು ಕಳೆ ಇದೆಯೋ!' ಎಂದು ಮುದುಕನು ತನ್ನ ಜತೆಯಲ್ಲಿದ್ದ ಹರೆಯದ ಮಗನಿಗೆ ಹೇಳಿದನು. 'ಹೌದಪ್ಪ; ಸ್ವಾಮಿಗಳ ಕಳೆ ಇದೆ' ಎಂದು ಆಚಾರ್ಯರ ಕಡೆಗೆ ನೋಡುತ್ತಾ, ಏನನ್ನೋ ಯೋಚಿಸುತ್ತಾ ಈರನು ಉತ್ತರಕೊಟ್ಟನು. ಇಬ್ಬರೂ ಆಚಾರ್ಯರ ಬಳಿ ಬಂದರು; ಅವರನ್ನು ನಮಸ್ಕರಿಸಿದರು.

'ಅಜ್ಜಪ್ಪ, ನಿನ್ನ ಹೆಸರೇನು? ಈತ ಯಾರು?' ಎಂದು ಆಚಾರ್ಯರೇ ಮೊದಲು ಕೇಳಿದರು.

'ಸ್ವಾಮಿ, ಮರಿಯ ಎಂದು ನನ್ನ ಕರೀತಾರೆ. ಈತ ನನ್ನ ಮಗ

ಈರ' ಎಂದು ಮುದುಕನು ಹೇಳಿದನು. ಅವರಿಬ್ಬರೂ ಆಚಾರ್ಯರಿಂದ ಸ್ವಲ್ಪ ದೂರ ಸರಿದರು.

'ಇರಲಿ ಬನ್ನಿರಪ್ಪ ಹತ್ತಿರಕ್ಕೆ.'

'ಸ್ವಾಮಿ, ನಾವು ಪಂಚಮರು. ಬುದ್ಧೀ ನಿಮ್ಮನ್ನು ನೋಡಿದರೆ ಬ್ರಾಹ್ಮಣರಂತಿದ್ದೀರಿ' ಎಂದು ಮರಿಯು ಭಕ್ತಿಭಾವದಿಂದ ಹೇಳಿದನು.

'ಪಂಚಮನಾದರೂ ಎಂತಹ ಆಚಾರಪ್ರಿಯನಿವನು!' ಎಂದು ಕೊಂಡು, 'ಮುದುಕಪ್ಪ, ಈ ಹುತ್ತದ ಬಳಿ ಎಂತಹ ಆಶ್ಚರ್ಯ!' ಎಂದು ಆಚಾರ್ಯರು ಹೇಳಿದರು.

'ಹೌದು ಬುದ್ಧೀ; ನನ್ನ ಬೂದುಬಣ್ಣದ ಹಸು ನಿತ್ಯ ಕಟ್ಟಿದ್ದ ಹಗ್ಗ ವನ್ನು ಕಿತ್ತುಕೊಂಡು ಬೆಳಿಗ್ಗೆ ಅಷ್ಟು ಹೊತ್ತಿಗೇನೇ ಹೋಗುತ್ತಿತ್ತು. ಪುನಃ ಅದು ಮನೆಗೆ ಬಂದಾಗ ಹಾಲು ಕೊಡುತ್ತಲೇ ಇರಲಿಲ್ಲ. ಹೀಗೆ ನಿತ್ಯವೂ ಅದು ಹೋಗಲು ಏನು ಕಾರಣ—ಎಂದು ತಿಳಿಯೋಕೆ ಅದರ ಹಿಂದೆ ಒಂದುದಿನ ಹೋದೆ. ಅದು ಈ ಹುತ್ತದ ಹತ್ತಿರಕ್ಕೆ ಬಂದು, ಇದರ ಮೇಲೆ ಹಾಲು ಸುರಿಸಿತು. ಅದರ ಕೆಲಸವನ್ನು ನೋಡಿ, 'ನೀನೂ ದೇವನ ಸೇವಕ' ಎಂದುಕೊಂಡು ಅದನ್ನು ಅಂದಿನಿಂದ ಕಟ್ಟಿಹಾಕೋದನ್ನು ಬಿಟ್ಟು ಬಿಟ್ಟೆ. 'ಈ ಹುತ್ತದಲ್ಲಿ ದೇವರಿದೆ. ಹಿಂದೆ ತುರುಕರ ದೊರೆಯೊಬ್ಬ ಬಂದು ದೇವಸ್ಥಾನ ಕೆಡವಿ,ಕಂಚಿನ ದೇವರನ್ನು ಎತ್ತಿಕೊಂಡು ಹೋದ.ಮೂರ್ತಿಯು ಚೆಂದಾನ ನೋಡಿ, ಒಡೆಯಲು ಮನಸ್ಸು ಬಾರದೆ ಕಲ್ಲ ದೇವರನ್ನು ಹಾಗೆಯೇ ಬಿಸಾಡಿ ಬಿಟ್ಟನಂತೆ. ಅದೇ ಈ ಹುತ್ತದಲ್ಲಿದೆ' ಎಂದು ನಮ್ಮ ತಾತಂದಿರು ಹಿಂದೆ ಹೇಳುತ್ತಿದ್ದರು, ಬುದ್ಧೀ' ಎಂದು ಮರಿಯು ಹೇಳಿದನು.

'ನೀವೆಲ್ಲಾ ಸ್ವಲ್ಪ ಸಹಾಯ ಮಾಡಿದರೆ ಈಗ ಹಾಳಾಗಿರುವ ಈ ದೇವಸ್ಥಾನವನ್ನು ಕಟ್ಟಿಸಿ, ದೇವನನ್ನು ಪ್ರತಿಷ್ಠೆ ಮಾಡುತ್ತೇನೆ.'

'ನಾವು ಎಷ್ಟು ಸಹಾಯ ಮಾಡಿದರೆ ತಾನೆ ಏನು ಬುದ್ಧೀ; ದೇವ ಸ್ಥಾನದ ಪ್ರಾಕಾರಕ್ಕೆ ಬರೋದಕ್ಕೂ ನಮಗೆ ಯೋಗ್ಯತೆ ಇಲ್ಲ!' ಎಂದು ಒಂದುತರದ ನಿರಾಶೆಯಿಂದ ಮರಿಯು ಹೇಳಿದನು.

'ಯೋಗ್ಯತೆ ಇಲ್ಲದೆ ಏನು, ಮರಿಯ! ಉತ್ಸವ ಕಾಲದಲ್ಲಿ ಮೂರು ದಿನವಾದರೂ ನೀವೆಲ್ಲಾ ದೇವಸ್ಥಾನದೊಳಕ್ಕೆ ಬರುವಂತೆ ಮಾಡುತ್ತೇನೆ.

ನೀವೆಲ್ಲಾ ವಿಷ್ಣುಭಕ್ತರೇ ಅಲ್ಲವೇ? ಎಲ್ಲರ ಹೃದಯದಲ್ಲಿಯೂ ಇರುವ ದೇವ ಒಬ್ಬನೇ.'

'ನನ್ನೊಡೆಯಾ! ಬ್ರಾಹ್ಮಣರಲ್ಲೆಲ್ಲಾ ನಮ್ಮ ಜನಾನ ನೋಡಿ ನೀವೊಬ್ಬರೇ ಹೀಗೆ ಹೇಳಿದ್ದು. ನಮ್ಮ ಜನಕ್ಕೆಲ್ಲಾ ಹೇಳ್ತೇನಿ; ಏನು ಕೆಲಸ ಮಾಡಬೇಕಾದರೂ ನಾವು ಸಿದ್ಧರಾಗಿದ್ದೇವೆ' ಎಂದು ನಮ್ರರೀತಿಯಿಂದ ಕೂಡಿದ ಪೂಜ್ಯಭಾವದಿಂದ ಮರಿಯ ಹೇಳಿದನು.

'ನಾನು ಇಂದು ಹಳೇಬೀಡಿಗೆ ಹೋಗಿ ದೊರೆಯನ್ನು ನೋಡಿಬರುತ್ತೇನೆ. ನನ್ನ ಕನಸಿನಲ್ಲಿ ದೇವ 'ನಾನು ಇಲ್ಲಿ ಇದ್ದೇನೆ'ಂದು ಹೇಳಿದ್ದಾನೆ. ಇದೂ ಅಲ್ಲದೆ ನಿಮ್ಮ ಅಜ್ಜಂದಿರು ಇಲ್ಲಿ ವಿಗ್ರಹವಿದೆಯೆಂದು ಹೇಳುತ್ತಿದ್ದರು– ಎಂದು ನೀನೂ ಹೇಳುತ್ತೀಯೆ. ಆದುದರಿಂದ ಈ ಹುತ್ತದಲ್ಲಿ ದೇವರಿದ್ದೇ ಇದೆ. ಇದನ್ನು ಅಗೆದು ವಿಗ್ರಹವನ್ನು ತೆಗೆದಿಟ್ಟಿರಿ. ದೊರೆಯ ಸಹಾಯದಿಂದ ದೇವಾಲಯವನ್ನು ಕಟ್ಟಿಸುತ್ತೇನೆ.'

'ದೇವರು ಸೇವೆಯನ್ನು ಯಾರು ಯಾರಿಂದ ಹೇಗೆ ಮಾಡಿಸಿಕೊಳ್ಳುತ್ತಾನೋ ಬುದ್ಧೀ.'

'ನಾಳೆ ಶ್ರೀರಾಮನವಮಿ. ಒಳ್ಳೆಯ ದಿನ. ಆದುದರಿಂದ ನಾಳೆಯೇ ಈ ಹುತ್ತವನ್ನು ಅಗೆದು ದೇವನನ್ನು ತೆಗೆದಿಡಿ, ಮರಿಯಾ.'

'ಆಗಲಿ ಬುದ್ಧಿ. ನಮ್ಮ ಜನಾನೆಲ್ಲಾ ನಾಳೆ ಕರ್ಕೊಂಡು ಬಂದು ಸ್ವಾಮೀನ ಎತ್ತಿಡುತ್ತೇವೆ' ಎಂದು ಮರಿಯ ಹೇಳಿ, ಆಚಾರ್ಯರನ್ನು ನಮಸ್ಕರಿಸಿ, ತನ್ನ ಮಗನೊಡನೆ ಹೊಲ ಉಳಲು ಹೋದನು.

೨

ಹನ್ನೆರಡನೆಯ ಶತಮಾನದ ಆದಿಭಾಗ. ಭಾರತಕ್ಕೆಲ್ಲಾ ಒಬ್ಬ ಸಾರ್ವಭೌಮನಿಲ್ಲದ ಕಾಲ. ಎಲ್ಲೆಲ್ಲಿಯೂ ದಂಗೆಗಳು. ಪ್ರತಿಯೊಂದು ಪ್ರಾಂತ್ಯವೂ ಸ್ವತಂತ್ರರಾಜ್ಯ. ಅಲ್ಲಲ್ಲಿ ಒಬ್ಬರೊಡನೊಬ್ಬರು ಹೋರಾಡುತ್ತಿದ್ದ ಸಣ್ಣ ಪುಟ್ಟ ರಾಜರು. ಇಂತಹ ಕಾಲದಲ್ಲಿಯೂ ಘಜನಿ, ಪಂಜಾಬ್ ಮತ್ತು ದೆಹಲಿ ಇವುಗಳನ್ನು ಘಜನಿ ಮಹಮೂದನ ಮೊಮ್ಮಗ ಅಹಮ್ಮದ್‌ಷಹನು

ಆಳುತ್ತಿದ್ದನು. ಘಜನಿ ಮಹಮೂದನು ಭಾರತವನ್ನು ಜಯಿಸಿ, ತನ್ನ ಸ್ವಾಧೀನದಲ್ಲಿಟ್ಟುಕೊಂಡಿದ್ದುದು ಪಂಜಾಬ್ ಮತ್ತು ದೆಹಲಿ ಮಾತ್ರ.

ಅಹಮದ್‌ಷಹನು ಪ್ರಕೃತಿಪ್ರೇಮಿ; ರಾಜಋಷಿ. ಘಜನಿಯಲ್ಲಿ ತನ್ನ ಪ್ರತಿನಿಧಿಯಾಗಿ ತನ್ನ ತಮ್ಮ ಆದಿಲ್‌ಷಹನನ್ನಿಟ್ಟಿದ್ದನು. ತನ್ನ ಪ್ರಕೃತಿ ಪ್ರೇಮವನ್ನು ಈಡೇರಿಸಿಕೊಳ್ಳಲೋಸುಗವೇ ಆತನು ದೆಹಲಿಯಲ್ಲಿ ನಿಂತನು. ತನ್ನ ಅರಮನೆಯನ್ನು ದೆಹಲಿಯಲ್ಲಿ ಯಮುನಾತೀರದಲ್ಲಿ ಕಟ್ಟಿಸಿದ್ದನು. ಅರಮನೆಯ ಹಿಂಭಾಗದಲ್ಲಿಯೇ ಯಮುನೆಯ ಸೋಪಾನಗಳು. ಆ ಮೆಟ್ಟಲುಗಳ ಪಕ್ಕದಲ್ಲಿ, ಅರಮನೆಯ ಹಿಂದೆ ಹರಿಯುತ್ತಿದ್ದ ಯಮುನೆಯ ಬಲದಡದ ಮೇಲೆಯೇ ರಾಜೋದ್ಯಾನ. ಅರಮನೆಯ ಹಿಂಭಾಗದಲ್ಲಿದ್ದ ಚಂದ್ರಮಹಲೇ ಪಾದಷಹನ ಏಕಮಾತ್ರ ಪುತ್ರಿಯಾದ ಮುಮ್‌ತಾಜಳದು. ಅದರಲ್ಲಿ ಆಕೆ, ಆಕೆಯ ಸೋದರಮಾವನ ಮಗಳು ನೂರ್‌ಬೇಗಂ, ಮತ್ತು ಪಾದಷಹನ ಹಿಂದೂ ಮಂತ್ರಿಯ ಮಗಳೂ ಮುಮ್‌ತಾಜಳ ಸಖಿಯೂ ಆದ ಸುಭದ್ರೆ, ಇವರು ವಾಸವಾಗಿರುತ್ತಿದ್ದರು.

ಚೈತ್ರಮಾಸದ ಹುಣ್ಣಿಮೆಯ ಸಾಯಂಕಾಲ ಮುಮ್‌ತಾಜಳೂ ಆಕೆಯ ಇಬ್ಬರು ಗೆಳತಿಯರೂ ಯಮುನೆಯ ಮೆಟ್ಟಲುಗಳ ಮೇಲೆ ಕುಳಿತು, ಯಮುನೆಯ ನೀರಿನಲ್ಲಿ ಕಾಲುಗಳನ್ನಿಟ್ಟುಕೊಂಡು ಕೈಗಳಿಂದ ನೀರನ್ನು ಎರಚುತ್ತಲಿದ್ದರು. ಸೂರ್ಯನು ಆಗತಾನೆ ಮುಳುಗುತ್ತಿದ್ದನು. ಆತನ ಕೆಂಗದಿರುಗಳು ತೆರೆತೆರೆಗಳಿಂದ ಹರಿಯುತ್ತಿದ್ದ ಯಮುನೆಯ ಪ್ರವಾಹದ ಮೇಲೆ ಬಿದ್ದು, ವಿವಿಧರೂಪಗಳಿಂದ ಮೆರೆಯುತ್ತಿದ್ದುವು. ದಡಗಳ ಮೇಲಿದ್ದ ಮರಗಳಲ್ಲಿ ಪಕ್ಷಿಗಳ ಇಂಚರವು ಕೇಳಿಸುತ್ತಿತ್ತು. ಈ ಪ್ರಕೃತಿ ಸೌಂದರ್ಯ ವನ್ನು ಅನುಭವಿಸುತ್ತಿದ್ದ ಎಲ್ಲರೂ ಮೌನವಾಗಿದ್ದರು. ಸ್ವಲ್ಪ ಹೊತ್ತಾದ ಮೇಲೆ ಮುಮ್‌ತಾಜಳೇ, 'ಭದ್ರಾ ! ನಿನ್ನೆ ಒಂದು ಕನಸನ್ನು ಕಂಡೆ' ಎಂದು ನಸುನಗೆಯಿಂದ ಹೇಳಿದಳು.

'ಯಾವುದೇ ಅದು ?' ಎಂದು ಸಖಿಯರಿಬ್ಬರೂ ಕೇಳಿದರು.

'ಅದನ್ನು ಕೇಳಿ ನೀವಾರೂ ನಗಕೂಡದು.'

'ಇಲ್ಲ; ಹೇಳು ತಾಜ್. ನಿನ್ನ ಸೋದರಿಯರೇ ನಾವೆಂದು ತಿಳಿ' ಎಂದು ಸುಭದ್ರೆ ಹೇಳಿದಳು.

'ಭದ್ರಾ! ಹಿಂದುಗಳಲ್ಲೆಲ್ಲಾ ನಿನ್ನನ್ನು ನಾನು ಬಹಳ ಮೆಚ್ಚಿದ್ದೇನೆ. ಅದೇನೋ ನೋಡು, ನನ್ನ ತಾಯಿಯಲ್ಲಿಯೂ ಇಲ್ಲದ ಪ್ರೇಮ ನನಗೆ ನಿನ್ನ ಮೇಲಿದೆ. ನನ್ನ ಆಸೆಗಳನ್ನೆಲ್ಲಾ ಈಡೇರಿಸುವುದರಲ್ಲಿ ನೀನು ಮೊದಲನೆಯವಳು. ಏನು ಸೊಗಸಾಗಿ ನನ್ನ ಚೆಲುವನನ್ನು ಸಿಂಗರಿಸುವೆಯೇ ನೀನು! ಆತ ನನ್ನ ಎರಡನೆಯ ಹೃದಯ, ನೂರ್. ನನ್ನ ಚೆಲುವ, ನೀವಿಬ್ಬರು ಇಷ್ಟು ಮಾತ್ರ ನನ್ನೊಡನಿದ್ದರೆ ನನಗೆ ಈ ಪ್ರಪಂಚದಲ್ಲಿ ಮತ್ತೇನೂ ಬೇಡ.'

'ನಮ್ಮ ಮೂವರಿಗಿಂತ ಇನ್ನೂ ಪ್ರೇಮವನ್ನು ಹೊಂದುವವನು ಬಂದಿದ್ದಾನೆ. ಅವನ ಜತೆಯಲ್ಲಿದ್ದಾಗ ಈ ಮಾತನ್ನು ನೀನು ಹೇಳಿದರೆ ಸರಿ! ಆಗ ನಿನ್ನ ಪ್ರೇಮ ನಮ್ಮಗಳ ಮೇಲೆ ಸ್ಥಿರವಾದುದೆಂದು ನಾವು ಒಪ್ಪುತ್ತೇವೆ' ಎಂದು ನೂರ್ ಬೇಗಂ ಹಾಸ್ಯಧ್ವನಿಯಿಂದ ಹೇಳಿದಳು.

'ಯಾರೆ ಅದು ಹೊಸದಾಗಿ ಬಂದಿರುವವರು?' ಎಂದು ಸುಭದ್ರೆ ನಡುವೆ ಮಾತು ಹಾಕಿದಳು.

'ನಿನಗೆ ಗೊತ್ತಿಲ್ಲವೇನೇ? ತಾಜ್, ನೀನು ಭದ್ರೆಗೆ ಅದನ್ನು ಹೇಳಲಿಲ್ಲವೇ?'

'ನೋಡಿದೆವಮ್ಮಾ ತಾಜಾ! ನನ್ನಲ್ಲಿಯೂ ಮರೆಮಾಚಿದೀ' ಎಂದು ಸುಭದ್ರೆ ತಾಜಳ ಮುಖವನ್ನು ದೃಷ್ಟಿಸುತ್ತಾ ಹೇಳಿದಳು.

'ಅದು ಅಷ್ಟೇನೂ ವಿಶೇಷವಾದ ಸಮಾಚಾರವಲ್ಲ ಭದ್ರಾ. ನೂರ್ ಎಲ್ಲಾ ಹೇಳುತ್ತಾಳೆ ಕೇಳು.'

'ಬೆಳಗ್ಗೆ ತುರ್ಕಿ ದೇಶದ ಸುಲ್ತಾನ್ ಬಂದಿದ್ದನೇ'

'ಅವನಿಗೆ ಪಾದಷಹರು ಏನು ಹೇಳಿದರು?'

'ಪಾದಷಹರು ಮಗಳನ್ನು ಕೇಳಿದರು. 'ನಾನು ಯಾರನ್ನೂ ಮದುವೆಯಾಗುವುದಿಲ್ಲ ಈಗ' ಎಂದು ಕಣ್ಣೀರು ಸುರಿಸುತ್ತಾ ಇವಳು ತಂದೆಗೆ ಹೇಳಿದಳು. 'ನನ್ನ ಮಗಳಿಗೆ ಇನ್ನೂ ಒಂದು ವರ್ಷ ಮದುವೆ ಮಾಡುವುದಿಲ್ಲ' ಎಂದು ಪಾದಷಹರು ಸುಲ್ತಾನನಿಗೆ ಹೇಳಿದರು.'

'ಇಷ್ಟೇನೆ! ಅವನಂತಹರು ಎಷ್ಟು ಜನ ಬಂದು ಈ ವೇಳೆಗೆ

'ಏನು ಭದ್ರಾ! ನೀನೇನೂ ಉತ್ತರ ಕೊಡಲೇ ಇಲ್ಲ. ನಾಳೆ ಅಮೃತ ಮಹಲಿಗೆ ಹೋಗಬೇಕೆಂದು ನಿನ್ನೆ ನೀನು ಹೇಳಿದ್ದೆ. ನೋಡು ಈ ಹೊತ್ತು ನೀನು ನನ್ನ ಮನೋಭೀಷ್ಟವನ್ನು ಪೂರೈಸಿದರೆ ನಿನ್ನ ಇಷ್ಟದಂತೆಯೇ ನಾಳೆ ಬೆಳಗಿನಲ್ಲಿ ಅಮೃತಮಹಲಿಗೆ ಹೋಗಿ, ನಾಳಿದ್ದು ಇಲ್ಲಿಗೆ ಹಿಂತಿರುಗೋಣ.'

'ನಾಳೆ ರಾತ್ರಿ ನಿನ್ನ ಚೆಲುವನನ್ನೇನು ಮಾಡುತ್ತೀ?' ಎಂದು ನೂರ್ ಬೇಗಂ ಮಮ್‌ತಾಜಳನ್ನು ನಸುನಗೆಯಿಂದ ಕೇಳಿದಳು. 'ಹೂಂ, ನೂರ್ ಹೇಳುವುದೂ ನಿಜ' ಎಂದು ಸುಭದ್ರೆಯೂ ಹೇಳಿದಳು.

'ಆತನಿಗೆ ಈ ರಾತ್ರಿ ಹೇಳುತ್ತೇನೆ. 'ಈ ಹೊತ್ತು ನಿನ್ನ ಮನಸ್ಸನ್ನು ತೃಪ್ತಿಪಡಿಸಿದೆ. ನಾಳೆ ನನ್ನ ಗೆಳತಿಯ ಇಷ್ಟಾರ್ಥವನ್ನು ಪೂರಯಿಸಬೇಕು. ಆದುದರಿಂದ ನನ್ನನ್ನು ಕ್ಷಮಿಸು' ಎನ್ನುತ್ತೇನೆ.'

'ಮುಗ್ಧ ಹುಡುಗಿ! ದೇವನು ಇವಳೊಡನೆ ಮಾತನಾಡುವನೇ!' ಎಂದುಕೊಂಡು, 'ಆಗಲಿ ಮಮ್ಮು, ನೀನು ಬರುವ ವೇಳೆಗೆ ಚೆಲುವ ನನ್ನು ಸಿಂಗರಿಸಿಡುತ್ತೇನೆ' ಎಂದು ಸುಭದ್ರೆ ಹೇಳಿದಳು.

'ಅಷ್ಟೇ ಅಲ್ಲ, ಭದ್ರಾ; ನಾನು ಬಂದ ಮೇಲೆ ನನಗೂ ಅಲಂಕಾರ ಮಾಡಬೇಕು'

'ಆಗಬಹುದು' ಎಂದು ಸುಭದ್ರೆ ಹೇಳಿದಳು.

ಸ್ನಾನ ಪೂರೈಸಿದ ಮೇಲೆ ಮೂವರೂ ಅರಮನೆಯ ಹತ್ತಿರ ಬಂದರು. ಮಮ್‌ತಾಜ್ ಮತ್ತು ನೂರ್ ಬೇಗಂ ಅರಮನೆಯೊಳಕ್ಕೆ ಹೋದರು. ಸುಭದ್ರೆ ಚೆಲುವದೇವನನ್ನು ಸಿಂಗರಿಸಲು ಚಂದ್ರಮಹಲಿಗೆ ಬಂದಳು.

೩

ರಾತ್ರಿ, ಒಂಭತ್ತುಗಂಟೆಯಾಯಿತು. ಸುಭದ್ರೆ ಚೆಲುವನನ್ನೂ ಮಮ್‌ತಾಜಳ ಕೋಟಡಿಯನ್ನೂ ಸಿಂಗರಿಸಿ, ನವಾಬನಂದಿನಿಯ ಬರುವಿಕೆಯನ್ನು ನಿರೀಕ್ಷಿಸುತ್ತಿದ್ದಳು; ಸ್ವಲ್ಪ ಹೊತ್ತಾದ ಮೇಲೆ ಮಮ್‌ತಾಜಳು ನೂರ್ ಬೇಗಂಳೊಡನೆ ತನ್ನ ಕೊಟಡಿಗೆ ಬಂದು, ಅದನ್ನು ನೋಡಿ 'ಭಲೆ! ಸುಭದ್ರಾ! ಅಲಂಕಾರ ಮಾಡುವುದರಲ್ಲಿ ನಿನಗೆ ಮೊದಲ ಬಹುಮಾನ ಕೊಡಬೇಕು' ಎಂದಳು.

" ನಿನ್ನ ಗಂಡ ಇದನ್ನು ಮೆಚ್ಚಿ ನಿನಗೆ ಮೊದಲು ಬಹುಮಾನ ಕೊಟ್ಟರೆ, ಅಮೇಲೆ ನನಗೆ ಇದಕ್ಕೆ ಎರಡನೆಯ ಬಹುಮಾನ ಕೊಡು ' ಎಂದು ನಗುತ್ತಾ ಸುಭದ್ರೆ ಉತ್ತರ ಕೊಟ್ಟಳು.

' ಗಂಡ ಯಾರೆ ? ಈ ದಿನ ಬೆಳಿಗ್ಗೆ ಬಂದಿದ್ದ ಸುಲ್ತಾನನೇ ? ' ಎಂದು ನೂರ್‌ಬೇಗಂ ನಡುವೆ ಮಾತು ಹಾಕಿದಳು.

' ಯಾವೋನೇ ಸುಲ್ತಾನ್ ? ಅವನ ಹೆಸರನ್ನು ನನ್ನ ಬಳಿ ಎತ್ತಬೇಡ. ಇನ್ನು ಮೇಲೆ ಅವನ ಹೆಸರನ್ನು ನನ್ನ ಬಳಿ ಎತ್ತಿದರೆ ನಿನ್ನನ್ನೇ ಅವನಿಗೆ ಕೊಡುತ್ತೇನೆ, ನೋಡು ' ಎಂದು ದರ್ಪದಿಂದ ಮುಮ್‌ತಾಜ ಹೇಳಿದಳು.

' ಇನ್ನು ಯಾರ ಹೆಸರನ್ನು ನಿನ್ನ ಬಳಿ ಎತ್ತಬೇಕು, ತಾಜ್ ? ಚೆಲುವನ ಹೆಸರು ನಿನ್ನ ಕಿವಿಗೆ ಚೆಲುವಾಗಿ ಬೀಳುತ್ತದೆಯೋ ? ' ಎಂದು ಸುಭದ್ರೆ ನಸುನಗೆಯಿಂದ ಹೇಳಿದಳು.

' ಏನೇ ಸುಭದ್ರಾ, ನೀನೂ ನನ್ನನ್ನು ತಮಾಷೆ ಮಾಡುತ್ತೀ- ನಿಮಗೂ ಕಾಲ ! ' ಎಂದು ಸುಭದ್ರೆಯನ್ನು ಓರೆಗಣ್ಣಿನಿಂದ ನೋಡುತ್ತಾ ಹೇಳಿ, ' ಅದೇನೋ ನೋಡೆ; ಆ 'ಚೆಲುವ' ಎನ್ನುವ ಹೆಸರು ನನ್ನ ಕಿವಿಗೆ ಬಿದ್ದೊಡನೆಯೇ ಎದೆಯೆಲ್ಲಾ ಜುಂಮೆನ್ನುತ್ತದೆ ' ಎಂದು ಮುಮ್‌ತಾಜ್ ಹೇಳಿದಳು.

' ಹಾಗಾದರೆ ಅವನು ಪಕ್ಕದಲ್ಲಿಯೇ ಇರುವಲ್ಲಿ ? ' ಎಂದು ಸುಭದ್ರೆ ಹೇಳುತ್ತಾ ನಕ್ಕಳು.

ಮುಮ್‌ತಾಜಳೂ ಮುಖದಲ್ಲಿ ಮುಗುಳುನಗೆ ಸೂಸಿ, ' ಎಲ್ಲಿ ಭದ್ರಾ ನನ್ನ ಚೆಲುವನನ್ನು ತೆಗೆ ' ಎಂದಳು.

' ನನ್ನ–ದೊಂದು–ಬಯಕೆ–ತಾಜ್ ' ಎಂದು ಸುಭದ್ರೆ ರಾಗ ತೆಗೆದು ಹೇಳಿದಳು.

' ನಿನ್ನ ಬಯಕೆ ಏನೇ ಇರಲಿ ಭದ್ರಾ ! ಅದನ್ನು ಈಡೇರಿಸಿಕೊಡು ತ್ತೇನೆ. '

' ನಿನ್ನನ್ನು ಅಲಂಕರಿಸಿದ ಮೇಲೆ ಚೆಲುವನ ಬಳಿ ನಿನ್ನನ್ನು ಕುಳ್ಳಿರಿ ಸುತ್ತೇನೆ. ಅಷ್ಟರವರೆಗೂ ಮಂಚದ ಪರದೆಯನ್ನು ತೆರೆಯಬೇಡ. ಚೆಲುವ ನನ್ನು ಸಿಂಗರಿಸಿ ಮಂಚದ ಮೇಲೆ ಕುಳ್ಳಿರಿಸಿದ್ದೇನೆ. '

'ಹಾಗಾದರೆ ಹಾಗೆಯೇ ಮಾಡು' ಎಂದು ಮುಮ್‌ತಾಜಳು ಹೇಳಿದಳು.

ಸುಭದ್ರೆ, ನೂರ್ ಬೇಗಂ ಇಬ್ಬರೂ ಸೇರಿ, ಮುಮ್‌ತಾಜಳನ್ನು ಅವಳ ಚೆಲುವನ ಇಷ್ಟದಂತೆಯೇ ಸಿಂಗರಿಸಿದರು. ಆಮೇಲೆ ಸುಭದ್ರೆ ಮಂಚದ ಪರದೆ ತೆಗೆದು 'ಇನ್ನು ಚೆಲುವನ ಬಳಿ ಕುಳಿತುಕೊಳ್ಳಬಹುದು, ತಾಜ್' ಎಂದು ಸಸುನಗೆಯಿಂದ ಹೇಳಿದಳು.

ಹಾಸಿಗೆಯೆಲ್ಲಾ ಮಲ್ಲಿಗೆ ಸಂಪಿಗೆ, ಜಾಜಿ, ಗುಲಾಬಿ ಮೊದಲಾದ ಹೂಗಳಿಂದ ತುಂಬಿಹೋಗಿದ್ದಿತು. ಆ ಹೂಗಳ ಮೇಲೆ ಕಾಶ್ಮೀರದ ರತ್ನ ಕಂಬಳಿಯೊಂದನ್ನು ಹಾಸಲಾಗಿದ್ದಿತು. ಕೊಟಡಿಯಲ್ಲಿ ಎಲ್ಲಿ ನೋಡಿದರೂ ಅರೇಬಿಯಾದ ಅತ್ತರಗಳ, ಮತ್ತು ಹತ್ತಿಸಿದ್ದ ಊದುಬತ್ತಿಗಳ ಸುವಾಸನೆ! ಸುಲ್ತಾನನ ಮಗಳ ಕೊಟಡಿ; ಕೇಳಬೇಕೆ! ಆಕೆ ಹೇಗೆ ನೆನೆದರೆ ಅದು ಹಾಗಾಗುತ್ತೆ!

ಮುಮ್‌ತಾಜಳು ಮರುಮಾತನಾಡದೆ ಹಾಸಿಗೆಯ ಮೇಲಿದ್ದ ಚೆಲುವನ ಬಳಿ ಕುಳಿತಳು. ಸುಭದ್ರೆ ಆಗ ಅವಳ ಮುಖವನ್ನು ನೋಡಿ ನಕ್ಕಳು. 'ನೂರ್, ಅಲಮಾರಿನಲ್ಲಿ ಆರತಿ ಮಾಡಿಟ್ಟಿದ್ದೇನೆ ತೆಗೆದುಕೊಂಡು ಬಾ!' ಎಂದು ಸುಭದ್ರೆ ನೂರ್‌ಬೇಗಂ ಗೆ ಹೇಳಿದಳು. ನೂರ್ ಬೇಗಂ ಅಲಮಾರಿನಲ್ಲಿದ್ದ ಚಿನ್ನದ ತಟ್ಟೆಯಲ್ಲಿ ಮಾಡಿಟ್ಟ ಆರತಿಯನ್ನು ತಂದಳು. ಸುಭದ್ರೆಯು ಚೆಲುವ ಮತ್ತು ಮುಮ್‌ತಾಜ್ ಇಬ್ಬರಿಗೂ ಎರಡು ಹೂಮಾಲೆಗಳನ್ನು ಹಾಕಿದಳು. ನೂರ್ ಮತ್ತು ಸುಭದ್ರೆ ದಂಪತಿಗಳಿಗೆ ಆರತಿಯನ್ನು ಬೆಳಗಿದರು.

ಆಗ ನೂರ್‌ಬೇಗಂ 'ಏನು ಸುಭದ್ರಾ, ಗಂಡ–ಹೆಂಡತಿಗಿಂತ ಚಿಕ್ಕವ!' ಎಂದು ನಸುನಗೆಯಿಂದ ತಲೆಯಲ್ಲಾಡಿಸುತ್ತಾ ಹೇಳಿದಳು.

'ಹೌದೇ; ನಾನು ನಿನಗೆ ಹಿಂದೆಯೇ ಹೇಳಿರಲಿಲ್ಲವೇ ನಮ್ಮ ಕೃಷ್ಣ, ರಾಧೆಗಿಂತ ಚಿಕ್ಕವ ಎಂದು.'

'ನೆನಪಿಗೆ ಬಂತು! ನೆನಪಿಗೆ ಬಂತು! ಹಾಗಾದರೆ ಚೆಲುವ ಕೃಷ್ಣ; ತಾಜ್ ರಾಧೆ; ನೀನು ಸುಭದ್ರಾ!'

'ತಮಾಷೆ ಮಾಡಬೇಡ ಸುಮ್ಮನಿರೆ! ನೀನು ಸದಾ ಹುಡುಗಿಯೇ!'

ಎಂದು ಮುಮ್ತಾಜಳು ನಸುನಗೆಯಿಂದ ನೂರ್‌ಬೇಗಂ ಗೆ ಹೇಳಿ, ಚೆಲುವ ಮೂರ್ತಿಯನ್ನು ಅಪ್ಪಿ ಮುದ್ದಿಟ್ಟಳು !

‘ ಏನೇ ಭದ್ರಾ ! ಆ ವಿಗ್ರಹವನ್ನು ಕಂಡರೇನೆ ಹಾಗೆ ಪ್ರಾಣ ಬಿಡುತ್ತಾಳೆ’ ಎಂದು ನೂರ್ ಬೇಗಂ ಹೇಳಿದಳು.

‘ ಅಹುದು ’ ಎಂದು ಸುಭದ್ರೆ ಯೋಚಿಸುತ್ತಾ ಹೇಳಿ, ‘ ಇನ್ನು ನಾವು ಬರುತ್ತೇವೆ, ತಾಜ್. ನಿನ್ನ ಚೆಲುವನನ್ನು ನಾಳೆ ಬಿಟ್ಟಿರಲು ಅಪ್ಪಣೆ ಕೇಳು. ಬೆಳಗಿನಲ್ಲಿಯೇ ನಾವೆಲ್ಲಾ ಅಮೃತ ಮಹಲಿಗೆ ಹೋಗಬೇಕು ’ ಎಂದಳು.

‘ ಆ ಕಲ್ಲನ್ನೇನೇ ಕೇಳೋದು ! ’ ಎಂದು ನೂರ್ ಬೇಗಂ ನಗುತ್ತಾ ಹೇಳಿದಳು.

‘ ಆಗಲಿ ಭದ್ರಾ ’ ಎಂದು ಮುಮ್ತಾಜಳು ಸುಭದ್ರೆಗೆ ನಸುನಗೆಯಿಂದ ಹೇಳಿದಳು.

೪

ಮಾರನೆಯ ದಿನ ಬೆಳಿಗ್ಗೆ ಸೂರ್ಯೋದಯವಾಗಿ ಸ್ವಲ್ಪ ಹೊತ್ತಾಗಿತ್ತು. ಅರಮನೆಯ ತನ್ನ ಬೈಠಕ್‌ಖಾನೆಯಲ್ಲಿ, ನವಾಬ್ ಅಹಮದ್‌ಷಹನು ಕೆನ್ನೆಯ ಮೇಲೆ ಕೈಯಿಟ್ಟುಕೊಂಡು, ತಲೆಬಗ್ಗಿಸಿಕೊಂಡು ಯೋಚಿಸುತ್ತಾ ಕುಳಿತಿದ್ದನು. ಆಗ ಅವನ ವಜೀರ ಅಲಂಷಹನು ಅಲ್ಲಿಗೆ ಬಂದು, ‘ ಪಾದಷಹ ! ಸುಲ್ತಾನರು ಇಂದು ತುರ್ಕಿಗೆ ಪ್ರಯಾಣ ಬೆಳಸಿದರು ’ ಎಂದನು.

‘ ಹೂಂ ! ’ ಎಂದು ತಲೆಯನ್ನು ಮೇಲಕ್ಕೆತ್ತಿ, ವಜೀರನ ಮುಖವನ್ನು ನೋಡಿ, ಪಕ್ಕದಲ್ಲಿದ್ದ ಆಸನವನ್ನು ವಜೀರನಿಗೆ ಕುಳಿತುಕೊಳ್ಳೆಂದು ಪಾದಷಹನು ತೋರಿಸಿದನು. ವಜೀರನು ಕುಳಿತು, ‘ ಪಾದಷಹ ! ಸುಮ್ಮನೆ ಯೋಚನೆಮಾಡಿ ಪ್ರಯೋಜನವೇನು ? ನಿಮ್ಮ ಮಗಳಿಗೆ ಎಂದು ಮನಸ್ಸು ಬರುತ್ತದೆಯೋ ಅಂದು ಮದುವೆ ಮಾಡಿಕೊಳ್ಳಲಿ ’ ಎಂದನು.

‘ ಹಾಗಲ್ಲ ಅಲಂಷಹ; ತುರ್ಕಿಯ ಸುಲ್ತಾನ ! ಅವನಂತಹ ಐಶ್ವರ್ಯವಂತ, ರೂಪವಂತ, ವಿದ್ಯಾವಂತ, ಬಲವಂತ ಈ ಪ್ರಪಂಚದಲ್ಲಿಯೇ ಇಲ್ಲ. ಇಂತಹವನು ನನ್ನಂಥ ದೀನನ ಮಗಳನ್ನು ಕೇಳಲು ಬಂದರೆ ಆಕೆ ಕೊಡುವ ಉತ್ತರವೇನು ? ಮುಖ್ಯ ಇಲ್ಲ ನಮಗೆ ಸುಲ್ತಾನನನ್ನು ಅಳಿಯನನ್ನಾಗಿ

ಮಾಡಿಕೊಳ್ಳುವ ಪುಣ್ಯ. ಸುಲ್ತಾನ ರೂಪವಂತ – ಎಂದು ತಾಜಳಿಗೆ ಹೇಳಿದರೆ ನನ್ನ ಕೈಹಿಡಿಯುವವನು ಅವನಿಗಿಂತ ರೂಪವಂತ, ಅವನಿಗಿಂತ ಐಶ್ವರ್ಯವಂತ, ಬಲವಂತ ಎನ್ನುತ್ತಾಳೆ. ಯಾರೋ ಆತ ಆ ಅಲ್ಲಾನೇ ಬಲ್ಲ!' ಎಂದು ನಿಟ್ಟುಸಿರನ್ನು ಬಿಡುತ್ತಾ ಪಾದಷಹನು ಹೇಳಿದನು. ವಜೀರನು ಯಾವ ಉತ್ತರವನ್ನೂ ಕೊಡದೆ ಸುಮ್ಮನಿದ್ದನು.

'ನೋಡು ಆಲಂಷಹ ನಮ್ಮಜ್ಜ ಈ ದೇಶದ ಎಲ್ಲಾ ವಿಗ್ರಹಗಳನ್ನೂ ಕೊಳ್ಳೆಹೊಡೆದು ತಂದನಷ್ಟೆ. ಅವುಗಳಲ್ಲಿ ಒಂದನ್ನು ತನ್ನ ಚಿಕ್ಕಂದಿನಲ್ಲಿ– ತಾಜ್ ಆಟದ ಗೊಂಬೆಗಾಗಿ ಕೇಳಿ ತೆಗೆದುಕೊಂಡಳು. ಅದರ ಹೆಸರೇನು? ಓ, ನೆನಪಿಗೆ ಬಂತು; ಚೆಲುವನಂತೆ! ಅದರ ಹೆಸರು ಅನ್ವರ್ಥನಾಮ, ಆಲಂಷಹ! ಅದು ಎಷ್ಟು ಸುಂದರವಾದ ವಿಗ್ರಹ! ಏನು ಕಳೆ ಇದೆ ಅದರ ಮುಖದಲ್ಲಿ! ಯಾವುದನ್ನೂ ಲಕ್ಷಿಸದೆ ವಿಗ್ರಹಗಳನ್ನೆಲ್ಲಾ ಛೇದಿಸಿದ ನಮ್ಮಜ್ಜ ಮಹಮೂದಷಹನ ಹೃದಯವನ್ನು ಸಹ ಕರಗಿಸಿ ತನ್ನ ಪಾಡು ಗಟ್ಟಿಯಾಗುವಂತೆ ಮಾಡಿಕೊಂಡಿದೆ ಆ ವಿಗ್ರಹ! ಅದೊಂದಿದ್ದರೆ ತಾಜಳಿಗೆ ಸಾಕು. ವಯಸ್ಸಾದ ಹುಡುಗಿ. ಅನ್ಯಾಯವಾಗಿ ಯೌವನವನ್ನು ಮರುಳುಗಾಡಿನಲ್ಲಿ ಬಿದ್ದ ಮಳೆಯಂತೆ ಕಳೆಯುತ್ತಿದ್ದಾಳೆ' ಎಂದು ಪಾದಷಹನು ಹೇಳಿದನು.

ಆಗ ಆಳೊಬ್ಬನು ಒಂದು ಮೊಳಕಾಲೂರಿ ಪಾದಷಹನನ್ನು ನಮಸ್ಕರಿಸಿ, 'ಪಾದಷಹ! ದಕ್ಷಿಣ ದೇಶದಿಂದ ಬ್ರಾಹ್ಮಣನೊಬ್ಬನು ತಮ್ಮನ್ನು ನೋಡಬೇಕೆಂದು ಬಂದಿದ್ದಾನೆ' ಎಂದು ಹೇಳಿದನು.

'ಈಗ ನೋಡಲಾಗುವುದಿಲ್ಲ ಎಂದು ಆತನಿಗೆ ಹೇಳು.'

'ಅಪ್ಪಣೆ ಖಾವಂದ್' ಎಂದು ಪುನಃ ಪಾದಷಹನನ್ನು ನಮಸ್ಕರಿಸಿ ಆಳು ಹೊರಟು ಹೋದನು.

'ಪಾದಷಹ! ಈ ದಿನ ಘಜ್ನಿಯಿಂದ ಕಾಗದ ಬಂದಿದೆ' ಎಂದು ವಜೀರನು ಹೇಳಿದನು.

'ಏನೆಂದು?'

'ಅಲ್ಲಿ ಗಲಭೆ ಬಹಳವಂತೆ. ನಿಮ್ಮ ತಮ್ಮಂದಿರು ನಿಮ್ಮನ್ನು ಸೈನ್ಯ ಸಮೇತ ತಕ್ಷಣ ಬರಹೇಳಿದ್ದಾರೆ.'

' ತಕ್ಷಣ ಹೋಗಬೇಕಾದ್ದು ನಮ್ಮ ಕರ್ತವ್ಯ. ಆಗಲಿ ಮಧ್ಯಾಹ್ನ ಸೈನ್ಯದೊಡನೆ ಘಜನಿಗೆ ಹೊರಡೋಣ, ಆಲಂಷಹ. '

' ಆಗಬಹುದು, ಖಾವಂದ್. '

ಆಗ ಪುನಃ ಅದೇ ಆಳು ಪ್ರವೇಶಿಸಿ ಪಾದಷಹನನ್ನು ಸಮಸ್ಕರಿಸಿ, ದೈನ್ಯದಿಂದ ' ಖಾವಂದ್ ! ' ಅವರೊಡನೆ ಒಂದು ನಿಮಿಷ ಮಾತನಾಡಿ ಹೊರಟು ಹೋಗುತ್ತೇನೆ. ಅವರಿಗೆ ನನ್ನ ಸಲಾಂಗಳನ್ನು ಹೇಳಿ, ದಕ್ಷಿಣ ದೇಶದಿಂದ ಬಂದಿದ್ದೇನೆಂದು ಹೇಳು ' ಎಂದು ಬ್ರಾಹ್ಮಣನು ನನ್ನನ್ನು ಪೀಡಿಸಿದನು, ಪಾದಷಹ ' ಎಂದನು.

' ನಾವೂ ಇಂದು ಘಜನಿಗೆ ಹೊರಟುಹೋಗುತ್ತೇವೆ ' ಎಂದುಕೊಂಡು, ' ಆಗಲಿ ಆತನನ್ನು ಬರಹೇಳು ' ಎಂದು ಆಳಿಗೆ ಪಾದಷನು ಹೇಳಿದನು.

ಸ್ವಲ್ಪ ಹೊತ್ತಾದ ಮೇಲೆ ಆಳು ಬ್ರಾಹ್ಮಣನನ್ನು ಕರೆದುಕೊಂಡು ಪಾದಷಹನ ಮುಂದೆ ಬಿಟ್ಟು, ನೆಲಮುಟ್ಟಿ ಸಲಾಂಮಾಡಿ ಹಿಂಜರಿದನು.

ಪಾದಷಹನು ಬ್ರಾಹ್ಮಣನ ಮುಖವನ್ನು ದೃಷ್ಟಿಸಿ ನೋಡಿ, ' ಈತನ ಮುಖದಲ್ಲಿ ಏನು ಕಳೆ ಇದೆ, ಆಲಂಷಹ ! ' ಎಂದು ಹೇಳಿ, ' ನಿಮ್ಮ ಹೆಸರೇನು ? ' ಎಂದು ಬ್ರಾಹ್ಮಣನನ್ನು ಕೇಳಿದನು.

' ಪಾದಷಹ ! ದೀರ್ಘ ಆಯುಷ್ಯವಂತನಾಗಿರು. ನನ್ನನ್ನು ರಾಮಾನುಜ ಎಂದು ಕರೆಯುವರು. '

' ರಾಮಾನುಜ ಕಿವಿಗಿಂಪಾದ ಒಳ್ಳೆಯ ಹೆಸರು ! ನನ್ನಿಂದೇನಾಗಬೇಕು? '

' ನನ್ನ ದೇವಮೂರ್ತಿ ನಿಮ್ಮ ಬಳಿ ಇದೆ. ಅದನ್ನು ದಯಪಾಲಿಸಬೇಕು, ಪಾದಷಹ ! '

' ಪಕ್ಕದ ಕೊಟಡಿಯಲ್ಲಿ ವಿಗ್ರಹಗಳೆಲ್ಲಾ ಬಿದ್ದಿವೆ. ನಿಮ್ಮ ದೇವರಾವುದೋ ಅದನ್ನು ತೆಗೆದುಕೊಂಡು ಹೋಗಿ. ಆಲಂಷಹ! ಇವರನ್ನು ಪಕ್ಕದ ಕೊಟಡಿಗೆ ಕರೆದುಕೊಂಡು ಹೋಗಿ ವಿಗ್ರಹಗಳನ್ನು ತೋರಿಸಿ. '

' ಅಪ್ಪಣೆ ಖಾವಂದ್ ' ಎಂದು ಆಲಂಷಹನು ಪಾದಷಹನಿಗೆ ಹೇಳಿ,

ರಾಮಾನುಜಾಚಾರ್ಯರೊಡನೆ ಪಕ್ಕದ ಕೊಟಡಿಗೆ ಹೋದನು. ಆಚಾ-ರ್ಯರು ಆ ಕೊಟಡಿಯಲ್ಲಿ ಸ್ವಲ್ಪಹೊತ್ತು ನಿಂತು, ವಿಗ್ರಹಗಳ ಕಡೆಗೊಮ್ಮೆ ತಮ್ಮ ದೃಷ್ಟಿಯನ್ನು ಬೀರಿ, ಕೆಲವು ಸ್ತೋತ್ರಗಳನ್ನು ಹೇಳಿ, 'ವಜೀರ್ ಸಾಹೇಬ್! ಇಲ್ಲಿ ನನ್ನ ವಿಗ್ರಹವಿಲ್ಲ!' ಎಂದರು.

ಅವರಿಬ್ಬರೂ ಪುನಃ ಪಾದಷಹನ ಬಳಿಗೆ ಬಂದರು. ವಜೀರನು ಅಲ್ಲಿ ವಿಗ್ರಹವಿಲ್ಲವೆಂದು ಪಾದಷಹನಿಗೆ ತಿಳಿಸಿದನು. 'ಆದರೆ ನಮ್ಮಲ್ಲಿ ಆ ವಿಗ್ರಹ ವಿಲ್ಲ' ಎಂದು ಪಾದಷಹನು ಆಚಾರ್ಯರಿಗೆ ಹೇಳಿದನು.

ಆಚಾರ್ಯರು ಸ್ವಲ್ಪಹೊತ್ತು ಯೋಚಿಸಿ, 'ಪಾದಷಹ! ಅದು ನಿಮ್ಮ ಮಗಳ ಬಳಿ ಇದೆ' ಎಂದು ನಿಧಾನವಾಗಿ ನಮ್ರಭಾವದಿಂದ ಪಾದಷಹನಿಗೆ ಹೇಳಿದರು.

'ನಿಮಗೆ ಹೇಗೆ ಗೊತ್ತು?' ಎಂದು ಪಾದಷಹನು ಕಣ್ಣುಗಳನ್ನು ಕೆಂಪಗೆ ಮಾಡಿಕೊಂಡು ಆಚಾರ್ಯರನ್ನು ದುರುಗುಟ್ಟಿಕೊಂಡು ನೋಡುತ್ತಾ ಹೇಳಿದನು.

'ಖಾವಂದ್! ಬಡವನ ಮೇಲೆ ಕೋಪ ಬೇಡ. ನನ್ನ ದೇವ ಕನಸಿನಲ್ಲಿ ಬಂದು ತಾನು ನಿಮ್ಮ ಮಗಳ ಬಳಿ ಇರುವುದಾಗಿ ಹೇಳಿದ.'

'ಹಾಗೋ! ಏನು ನಿಮ್ಮ ವಿಗ್ರಹದ ಹೆಸರು?.... ಹಾಳು ಮರೆತೇ ಹೋಗುತ್ತೆ........ಹೋ ಚೆಲುವ ಎಂದೋ?'

'ಹೌದು ಪಾದಷಹ! ಅದು ನನ್ನ ಶಲ್ವಪುಳ್ಳೆ'

'ಏನು ವಿಗ್ರಹಕ್ಕೆ ಜೀವವಿದೆಯೋ? ಈತನ ಕನಸಿನಲ್ಲಿ ಅದು ಹೇಗೆ ಬಂದು ಹೇಳಿತು? ನನ್ನ ಮಗಳು ಅದನ್ನು ಅಷ್ಟು ಪ್ರೀತಿಸಲು ಕಾರಣವೇನು? ಅವಳ ಗಂಡ ಅದೇನೋ? ಆ ಕಂಚು! ಏನಾದರೂ ಆಗಿರಲಿ ಅದು. ಆ ಹಾಳು ತೊಲಗಿ ಹೋದರೆ ನನ್ನ ಮಗಳ ಮನಸ್ಸು ಸರಿಯಾದ ಸ್ಥಿತಿಗೆ ಬಂದು. ಸುಲ್ತಾನನನ್ನು ವರಿಸಬಹುದು. ಪೀಡೆ ನನ್ನ ಮನೆಯನ್ನು ಬಿಟ್ಟು ತೊಲಗಿ ಹೋಗಲಿ' ಎಂದುಕೊಂಡು, 'ಬನ್ನಿ, ನಿಮ್ಮ ವಿಗ್ರಹವನ್ನು ಕೊಡುತ್ತೇನೆ' ಎಂದು ಆಚಾರ್ಯರಿಗೆ ಪಾದಷಹನು ಹೇಳಿದನು.

ಮೂವರೂ ಚಂದ್ರಮಹಲಿನಲ್ಲಿದ್ದ ಮುಮ್ತಾಜಳ ಕೊಟಡಿಯ ಬಳಿ

ಬಂದರು. ಆಗ ಪಾದಷಹನು 'ತಾಜ್ ಎಲ್ಲಿ?' ಎಂದು ಕೊಟಡಿಯ ಬಳಿ ನಿಂತಿದ್ದ ದಾಸಿಯನ್ನು ಕೇಳಿದನು.

'ಅವರು ತಮ್ಮ ಗೆಳತಿಯರೊಡನೆ ಅಮೃತಮಹಲಿಗೆ ಹೋಗಿದ್ದಾರೆ, ಖಾವಂದ್' ಎಂದು ದಾಸಿಯು ಹೇಳಿದಳು.

'ಊ! ಬಾಗಿಲು ತೆರೆ.'

'ಯಾರನ್ನೂ! ನಾನು ಬರುವವರೆಗೂ ಬಿಡಬೇಡ' ಎಂದು ಅಪ್ಪಣೆ ಕೊಟ್ಟಿದ್ದಾರೆ, ಪಾದಷಹ.'

'ಏನು ನನ್ನನ್ನೂ!'

'ನಿಮ್ಮನ್ನೂ ಸಹ, ಖಾವಂದ್.'

'ಬಾಗಿಲ ತೆರೆಯುವೆಯೋ ಇಲ್ಲವೋ' ಎಂದು ಪಾದಷಹನು ಕಣ್ಣುಗಳಿಂದ ಕಿಡಿಗಳನ್ನು ಸುರಿಸುತ್ತಾ ಕೇಳಿದನು.

ದಾಸಿಯ ನಡುಗುವ ಕೈಯಿಂದ ಬೀಗದ ಕೈಯ ಗೊಂಚಲು ನೆಲದ ಮೇಲೆ ಬಿತ್ತು. ಪಾದಷಹನೇ ಅದನ್ನು ಎತ್ತಿಕೊಂಡು ಬಾಗಿಲನ್ನು ತೆಗೆದನು. ಪಾದಷನು ಆಲಂಷಹ ಮತ್ತು ಆಚಾರ್ಯರು ಮಹ್ ತಾಜಳ ಕೊಟಡಿಯೊಳಹೊಕ್ಕರು. 'ಈ ಕೊಟಡಿಯು ಎಷ್ಟು ಸೊಗಸಾಗಿ ಸಿಂಗರಿಸಲ್ಪಟ್ಟಿದೆ!' ಎಂದು ಆಲಂಷಹನು ನುಡಿದನು.

'ಅವಳ ಗಂಟೇನು ಹೋಗಬೇಕು; ಸಂಪಾದಿಸಲು ಅವರಪ್ಪನಿದ್ದಾನಲ್ಲಾ!' ಎಂದು ಪಾದಷಹನು ಒಂದು ತೆರದ ರೋಷದಿಂದ ಹೇಳಿ, 'ಎಲ್ಲಿ ನಿಮ್ಮ ದೇವರಿದ್ದರೆ ತೆಗೆದುಕೊಳ್ಳಿ' ಎಂದು ರಾಮಾನುಜಾಚಾರ್ಯರಿಗೆ ಹೇಳಿದನು.

ಆಚಾರ್ಯರು ಅಲ್ಲಿದ್ದ ಹಾಸಿಗೆಗೆ ಸಾಷ್ಟಾಂಗ ನಮಸ್ಕಾರ ಮಾಡಿ, ಎದ್ದು ಕುಳಿತು, ಎರಡು ಕೈಗಳನ್ನೂ ಜೋಡಿಸಿ, ಚೆಲುವಸ್ವಾಮಿಯ ಸ್ತೋತ್ರವನ್ನು ಹಾಡಿದರು. ಮಂಚದ ತೆರೆಯನ್ನು ತಳ್ಳಿ ಹದಿನಾರು ವರ್ಷದ ಸುಂದರ ಬಾಲಕನು ನಗೆಯುತ್ತಾ ಬಂದು ಆಚಾರ್ಯರ ತೊಡೆಯ ಮೇಲೆ ಕುಳಿತನು. ಬಾಲಕನ ಕಾಲಿನ ಗೆಜ್ಜೆಗಳನ್ನೂ, ಸೊಗಸಿನ ಉಡುಪನ್ನೂ ನೋಡಿ, ಆಚಾರ್ಯರು ಸಂತೋಷಸಾಗರದಲ್ಲಿ ಮುಳುಗಿ, ಆತನ

ತಲೆಯನ್ನು ಪುತ್ರಪ್ರೇಮದಿಂದ ಆಘ್ರಾಣಿಸುತ್ತಾ,' ನನ್ನ ಶಲ್ಪವುಳ್ಳಿ! ನನ್ನ ಶಲ್ಪವುಳ್ಳಿ!!' ಎಂದು ಅಪ್ಪಿಕೊಂಡು ಮುದ್ದಿಟ್ಟರು.

ಈ ದೃಶ್ಯವನ್ನು ಕಣ್ಣಾರೆ ನೋಡುತ್ತಿದ್ದ ಪಾದಷಹನೂ ಆಲಂಷಹನು ಸ್ತಂಭೀಭೂತರಾದರು. 'ಸತ್ಯವಂತನಾದ ಭಕ್ತನೀತ!' ಎಂದು ಪಾದಷಹನು ಆಲಂಷಹನಿಗೆ ಹೇಳಿ, 'ಆಲಂಷಹ! ಈತನಿಗೆ ಬೇಕಾದ ಎಲ್ಲಾ ಪ್ರಯಾಣ ಸನ್ನಾಹಗಳನ್ನೂ ಮಾಡಿಕೊಡು. ನಮ್ಮ ಭಂಡಾರದಲ್ಲಿ ಕಾಲು ಭಾಗವನ್ನು ಇವನಿಗೆ ಕೊಟ್ಟು ಕಳುಹಿಸು. ಸೈನ್ಯದೊಡನೆ ಮಧ್ಯಾಹ್ನ ಬರಬೇಕು, ಆಲಂಷಹ. ಘಜನಿಗೆ ಹೋಗೋಣ' ಎಂದನು.

'ಅಪ್ಪಣೆ, ಖಾವಂದ್' ಎಂದು ಆಲಂಷಹನು ಹೇಳಿದನು.

೫

ಆಚಾರ್ಯರು ಚೆಲುವಮೂರ್ತಿಯನ್ನು ತೆಗೆದುಕೊಂಡು ಹೋದ ಎರಡನೆಯ ದಿನ ಬೆಳಗಿನಲ್ಲಿ, ಅಮೃತಮಹಲಿನ ಉದ್ಯಾನದ ಹಾಸುಗಲ್ಲಿನ ಮೇಲೆ ಮುಮ್‌ತಾಜಳು ಚಿಂತಾಕ್ರಾಂತಳಾಗಿ ಕುಳಿತಿದ್ದಳು. ಸುಭದ್ರಾ ನೂರ್‌ಬೇಗಂ ಅವಳ ಬಳಿಗೆ ಬಂದು, 'ಮಮ್ಮ, ಯಾಕೆ ಹೀಗೆ ಯೋಚಿಸುತ್ತಿದ್ದೀಯೆ? ಈ ದಿನ ಸಂಜೆಯೇ ಚಂದ್ರಮಹಲಿಗೆ ಹೊರಟು ಬಿಡೋಣ' ಎಂದರು.

'ಭವಾನ್ರು ನಿನ್ನೆಯೇ ಹೋಗಿದ್ದರೆ ಚೆನ್ನಾಗಿತ್ತು' ಎಂದು ಒಂದು ತೆರದ ನಿರಾಶೆಯಿಂದ ಮುಮ್‌ತಾಜಳು ಹೇಳಿದಳು.

'ಹೌದು; ನನ್ನಂತ ನೀನೂ ಇಲ್ಲಿ ನಿಂತೆ. ಅದೇನೋ ನಿಮ್ಮೊಡನೆ ಈ ಸ್ಥಳಕ್ಕೆ ಬಂದರೆ ನನಗೆ ಮತ್ತೇನೂ ಬೇಡವಾಗುವುದು. ಇಲ್ಲಿಯ ಪ್ರಕೃತಿಯ ಸೌಂದರ್ಯ– ವಿಶಾಲವಾಗಿ ನಿಧಾನವಾಗಿ ಹರಿಯುವ ಯಮುನೆ, ಇಲ್ಲಿನ ಸೊಗಸಾದ ರಾಜೋದ್ಯಾನ ಇವೆಲ್ಲಾ– ನನ್ನ ಮನಸ್ಸನ್ನಾಕರ್ಷಿಸಿವೆ. ಈ ಸ್ಥಳದಲ್ಲಿಯೇ ಯಾವಾಗಲೂ ಇರೋಣವೆನ್ನಿಸುತ್ತೆ, ತಾಜ್! ಅದಕ್ಕಾಗಿಯೇ ನನಗಾಗಿ ಇನ್ನೊಂದು ದಿನವಿರೆಂದು ನಿನ್ನೆ ನಿನ್ನನ್ನು ಕೇಳಿಕೊಂಡದ್ದು'

'ಅವಳ ಗಂಡನನ್ನು ಪಾಪ ಒಂದು ದಿನ ಕೂಡ ಅವಳು ಬಿಟ್ಟಿರಲಾರಳೆ' ಎಂದು ನೂರ್‌ಬೇಗಂ ಹಾಸ್ಯಧ್ವನಿಯಿಂದ ಹೇಳಿದಳು.

ಮುಮ್‌ತಾಜಳು ನೂರ್‌ಬೇಗಮ್‌ಳನ್ನು ದುರದುರನೆ ನೋಡಿದಳು. ಸ್ವಲ್ಪ ಹೊತ್ತಾದ ಮೇಲೆ, 'ನೂರ್ ನಿನಗೆ ಪರಿಹಾಸ್ಯ; ನನಗೆ ಪ್ರಾಣ ಸಂಕಟ. ಹೌದು; ಆತನೇ ಸನ್ನಿಧಿಯು; ನಾವೆಲ್ಲಾ ಆತನ ಭೋಗವಸ್ತುಗಳೇ. ಅಂತಹವನನ್ನು ಬಿಟ್ಟಿರುವುದು ಹೇಗೆ? ಇನ್ನಾದರೂ ಸುಮ್ಮನಿರುವೆಯಾ?' ಎಂದು ಒಂದು ತೆರದ ದರ್ಪದಿಂದ ಕೂಡಿದ ಕೋಪದಿಂದ ಹೇಳಿದಳು.

'ತಾಜ್, ಯಾಕೆ ಹಾಗೆ ಚಿಂತಿಸುವೆ. ನಿನ್ನ ದೇವ ನಿನ್ನನ್ನು ಬಿಟ್ಟು ಹೋಗುವುದಿಲ್ಲ' ಎಂದು ಸುಭದ್ರೆ ಸಮಾಧಾನಪಡಿಸಲು ಹೇಳಿದಳು.

'ಭದ್ರಾ! ನಿನಗೆ ಆತನ ಗುಣ ಗೊತ್ತಿಲ್ಲ. ಭಕ್ತರಿಗೆ ತನ್ನನ್ನೇ ಧಾರೆ ಎರೆದುಕೊಂಡು, ಇನಿಯಳನ್ನು ಬಿಟ್ಟು ಹೋಗುವ ಗುಣ ಆತನದು.'

'ಎಳೆಯ ಹದಿನೇಳು ವರ್ಷದ ಮುಹಮದೀಯ ಹುಡುಗಿಯಾದರೂ ನುರಿತ ಹಿಂದೂ ವೇದಾಂತಿಯಂತೆ ಇವಳು ಮಾತನಾಡುವಳು!' ಎಂದುಕೊಂಡು, 'ತಾಜ್, ರಾತ್ರಿ ಆತನೇನಾದರೂ ಹೇಳಿದನೇ?' ಎಂದು ಸುಭದ್ರೆ ಕೇಳಿದಳು.

'ಊ ಸುಭದ್ರಾ! 'ತಾಜ್! ನಿನ್ನ ಹತ್ತಿರ ನಾನು ಬಹಳ ದಿನಗಳಿಂದ ಇದ್ದೇನೆ. ಭಕ್ತರೆಲ್ಲಾ ಬಂದು ತಮ್ಮ ಬಳಿ ಇರಬೇಕೆಂದು ನನ್ನನ್ನು ಕೇಳುತ್ತಿದ್ದಾರೆ. ಪ್ರತಿಯೊಬ್ಬರ ಇಷ್ಟಾರ್ಥವನ್ನೂ ಈಡೇರಿಸುವುದು ನನ್ನ ಕರ್ತವ್ಯ. ನನ್ನ ಪ್ರಿಯ ಭಕ್ತ–ತಂದೆ–ಆಚಾರ್ಯ–ನಾದ ಈ ಬ್ರಾಹ್ಮಣನೊಡನೆ ದಕ್ಷಿಣ ದೇಶದ ಪುಣ್ಯಭೂಮಿಯೊಂದಕ್ಕೆ ಹೋಗುತ್ತೇನೆ. ನನ್ನ ಮೇಲೆ ನಿನಗೆ ಪ್ರೇಮವಿದ್ದರೆ, ನೈಜವಾದ ಪ್ರೀತಿ ಇದ್ದರೆ, ಬಂದು ನನ್ನನ್ನು ಅಲ್ಲಿ ನೋಡು' ಎಂದು ಹೇಳಿದನು.'

'ಏನು! 'ಪ್ರೀತಿ ಇದ್ದರೆ ಬಂದು ನೋಡು!' ನಿನ್ನ ತಪಿಸುತ್ತಿರುವ ಹೃದಯುವೇದನೆ ಆತನಿಗೆ ಗೊತ್ತಿಲ್ಲವೇ?' ಎಂದು ಸುಭದ್ರೆ ಮುಮ್‌ತಾಜಳಿಗೆ ಹೇಳಿ, 'ಇವಳಾಡುವುದೆಲ್ಲಾ ಸಂಬಲಾರದ ಸುಸಂಬದ್ಧವಾದ ಮಾತುಗಳಾಗಿವೆ. ದೇವರೇ ಬಲ್ಲ!' ಎಂದುಕೊಂಡು, 'ಸುಮ್ಮನೆ ಚಿಂತಿಸಬೇಡ

ತಾಜ್; ಖಂಡಿತವಾಗಿಯೂ ನೀನು ಆತನನ್ನು ಚಂದ್ರಮಹಲಿನಲ್ಲಿ ನೋಡುವೆ' ಎಂದಳು.

ಆ ದಿನ ಸಂಜೆಯೇ ಅವರು ಮೂವರೂ ಚಂದ್ರಮಹಲ ಒಳಗೆ ಬಂದರು. 'ತಾಜ್! ನಾವಿಬ್ಬರೂ ಮನೆಗೆ ಹೋಗಿ ನಾಳೆ ಬಂದು ನೋಡುತ್ತೇವೆ' ಎಂದು ನೂರ್‌ಬೇಗಂ ಹೇಳಿದಳು.

'ಹೌದು; ನಿಮ್ಮ ತಾಯಿತಂದೆಗಳು ನಿಮಗಾಗಿ ಎದುರು ನೋಡುತ್ತಿರುವರು. ಹೋಗಿ ಬನ್ನಿ. ಭದ್ರ, ನಾಳೆ ಬೆಳಿಗ್ಗೆ ಅಷ್ಟು ಹೊತ್ತಿಗೇನೇ ಬರಬೇಕು. ನೂರ್! ಮರೆಯದೆ ನಾಳೆ ಬಾ.'

'ಆಗಲಿ' ಎಂದು ಹೇಳಿ, ನೂರ್‌ಬೇಗಂ ಮತ್ತು ಸುಭದ್ರೆ ಹೊರಟು ಹೋದರು.

ಮುಮ್‌ತಾಜಳು ತನ್ನ ಕೋಟಡಿಯ ಒಳಗೆ ಬಂದಳು. ತೆರೆದಿರುವ ಕೊಟಡಿಯ ಬಾಗಿಲವನ್ನು ನೋಡಿ, ಅವಳ ಎದೆ ಝುಲ್ಲೆಂದಿತು. ನೋಡಿದಳು. ದಾಸಿಯು ಅಲ್ಲಿರಲಿಲ್ಲ. ಕೋಟಡಿಯೊಳಕ್ಕೆ ಓಡಿ ಬಂದು, ಮಂಚದ ಮುಖಪರದೆಯನ್ನು ಎಳೆದು ನೋಡಿದಳು. ತನ್ನ ಚೆಲುವ ಮೂರ್ತಿ ಅಲ್ಲಿರಲಿಲ್ಲ! 'ಅಯ್ಯೋ! ಚೆಲುವಾ, ನನ್ನನ್ನು ಬಿಟ್ಟು ಹೋದೆಯಾ? ನಾನು ಪಾಪಿ; ನಿನ್ನ ಬಿಟ್ಟು ಏಕೆ ಎರಡು ದಿನ ನಿಂತೆ!' ಎಂದು ಮಂಚದ ಮೇಲೆ ಹೊರಳಾಡುತ್ತಾ ರೋದಿಸಿದಳು.

ಆ ವೇಳೆಗೆ ದಾಸಿಯು ಅಲ್ಲಿಗೆ ಬಂದಳು. 'ಯಾರೆ ಕೊಟಡಿಯೊಳಕ್ಕೆ ಬಂದಿದ್ದವರು?' ಎಂದು ಮುಮ್‌ತಾಜಳು ಕಣ್ಣುಗಳಿಂದ ನೀರು ಸುರಿಸುತ್ತಾ ಗದ್ಗದಸ್ವರದಿಂದ ದಾಸಿಯನ್ನು ಕೇಳಿದಳು.

'ಪಾದಷಹರು, ಜಹಾಪನಾ! ಅವರು ವಿಗ್ರಹವನ್ನು ಬ್ರಾಹ್ಮಣನೊಬ್ಬನಿಗೆ ಕೊಟ್ಟರು' ಎಂದು ನಡುಗುವ ಧ್ವನಿಯಿಂದ ದಾಸಿಯು ಮುಮ್‌ತಾಜಳಿಗೆ ಹೇಳಿದಳು.

'ಹೂ! ಆ ಬ್ರಾಹ್ಮಣನ ಊರಾವುದು ಬಲ್ಲೆಯಾ?

'ಮೇಲುಕೋಟೆ ಎಂದು ಆತ ಹೇಳಿದಂತೆ ನೆನಪು.'

'ಹೌದು; ಆ ಹೆಸರು ನನ್ನ ಕಿವಿಯಮೇಲೆ ಹಿಂದೆ ಒಮ್ಮೆ ಬಿದ್ದಿದೆ!'

ಎಂದುಕೊಂಡು, ‘ನೀನು ಹೋಗು’ ಎಂದು ದಾಸಿಗೆ ಹೇಳಿದಳು. ದಾಸಿಯು ನವಾಬನಂದಿನಿಯನ್ನು ನಮಸ್ಕರಿಸಿ ಹೊರಟು ಹೋದಳು.

‘ದೇವಾ! ನೀನು ಹೇಳಿದ ಪ್ರತಿಮಾತನ್ನೂ ನಿಜವಾಗಿಯೂ ತಕ್ಷಣ ಮಾಡುವೆಯಲ್ಲಾ! ನನ್ನ ತಂದೆತಾಯಿಗಳು ನನಗೆ ಶತ್ರುಗಳು....ಸುಮ್ಮನೆ ದುಃಖಿಸಿ ಫಲವೇನು?....ಇಗೋ ನಿನ್ನಲ್ಲಿಗೆ ಬರುವೆನು’ ಎಂದು ಸರ್‍ರನೆ ಪಕ್ಕದ ಕೊಟಡಿಯೊಳಕ್ಕೆ ಹೋಗಿ, ಅಲ್ಲಿದ್ದ ಕತ್ತಿಯೊಂದನ್ನು ಒರೆಯಿಂದ ತೆಗೆದು, ಅದನ್ನೇ ದೃಷ್ಟಿಸಿ ಸ್ವಲ್ಪಹೊತ್ತು ನೋಡಿ, ಏನನ್ನೋ ಯೋಚಿಸುತ್ತಾ, ‘ನಿನ್ನನ್ನು ಹೀಗೆ ಸೇರಿದರೆ ನನ್ನನ್ನು ಮೆಚ್ಚಲಾರೆ. ನಿನ್ನ ಮೂರ್ತಿಯನ್ನು ಮನಸಾರೆ ನೋಡಿಯೇ ನಿನ್ನಲ್ಲಿಗೆ ಶಾಶ್ವತವಾಗಿ ಬರುವೆನು. ನೀನಲ್ಲದೆ ಮತ್ತಾರು ನನಗೆ ಬೇಕಾದವರು, ದೊರೆ!’ ಎಂದುಕೊಂಡು ಕತ್ತಿಯನ್ನು ಅಲ್ಲಿಯೇ ಬಿಸಾಟು ಹುಚ್ಚಳಂತೆ ತನ್ನಲ್ಲಿ ತಾನೇ ಏನೇನನ್ನೋ ಅಂದುಕೊಳ್ಳುತ್ತಾ, ನೆಟ್ಟಗೆ ಕುದುರೆಯ ಲಾಯಕ್ಕೆ ಬಂದಳು. ಕುದುರೆಗಳನ್ನು ಒಂದೊಂದನ್ನಾಗಿ ಮೊದಲಿನಿಂದ ನೋಡಿದಳು. ತನಗೆ ಬೇಕಾದುದು ಕಣ್ಣಿಗೆ ಬೀಳದಿರಲು, ಕಣ್ಣೀರು ಸುರಿಸುತ್ತಾ, ಗದ್ಗದ ಸ್ವರದಿಂದಲೇ ‘ಷಂಷೀರ್! ಷಂಷೀರ್!!’ ಎಂದು ಕೂಗಿದಳು. ಲಾಯದ ಕೊನೆಯಲ್ಲಿದ್ದ ಬಿಳಿಯ ಕುದುರೆಯೊಂದು ಕಟ್ಟಿದ್ದ ಹಗ್ಗವನ್ನೂ ಸಹ ಕಿತ್ತುಕೊಂಡು ಒಡತಿಯ ಬಳಿ ದಾಸನಂತೆ ಬಂದು ನಿಂತಿತು. ಅವಳ ಕಣ್ಣೀರನ್ನು ನೋಡಿ ಅದೂ ತಲೆಬಗ್ಗಿಸಿಕೊಂಡಿತು.

ಶ್ವೇತವರ್ಣದ ಅರಬ್ಬೀ ಟಾಕಣವದು. ನವಾಬ ನಂದಿನಿಯ ಪ್ರೇಮದ ಅಶ್ವ. ಅದು ಭಾರತವನ್ನೆಲ್ಲಾ ಸುತ್ತಿತ್ತೆಂದು ಹೇಳಬಹುದು. ಮುಮ್ತಾಜಳಿಗೆ ಅದೇ ಎರಡನೆಯ ಪ್ರಾಣ. ಮೊದಲ ಆಹಾರವನ್ನು ಅವಳು ಚೆಲುವ ಸ್ವಾಮಿಗೆ ಅರ್ಪಿಸುತ್ತಿದ್ದಳು. ಆಮೇಲೆ ಷಂಷೀರಿಗೆ ತಿಂಡಿತೀರ್ಥಗಳನ್ನಿಡುತ್ತಿದ್ದಳು. ಇವೆಲ್ಲ ಆದಮೇಲೆಯೇ ಆಕೆ ಊಟಮಾಡುತ್ತಿದ್ದುದು. ಅವಳು ಅದರ ಬೆನ್ನು ತಟ್ಟುತ್ತಾ, ‘ಷಂಷೀರ್! ನೀನು ನನ್ನ ದುಃಖವನ್ನರಿಯೆ. ಈಗಲೇ ರಾತ್ರಿ. ಕಂದಾ! ನನ್ನ ಮನಸ್ಸನ್ನು ತೃಪ್ತಿಪಡಿಸು; ನನ್ನ ದೊರೆಯ ಬಳಿಗೆ ನನ್ನನ್ನು ಕರೆದೊಯ್ಯು’ ಎಂದು ಕಣ್ಣೀರು ಸುರಿಸುತ್ತಾ

ಹೇಳಿ, ಲಾಯದಿಂದ ಹೊರಗೆ ಬಂದು, ಅದರ ಮೇಲೆ ಕುಳಿತು, 'ಷಂಷೀರ್! ಮೇಲುಕೋಟೆ !!' ಎಂದು ಮುಮ್‌ತಾಜಳು ಹೇಳಿದಳು.

ಸೂರ್ಯನ ಬೆಳಕಿನಲ್ಲಿ ರಾಜಮಾರ್ಗದಲ್ಲಿ ಹೋಗುತ್ತಿದ್ದಂತೆಯೇ ಆ ಕುದುರೆಯು ಕತ್ತಲೆಯಲ್ಲಿಯೂ ಹೋಗುತ್ತಿತ್ತು. ಅದನ್ನು ನೋಡಿದರೆ ತನ್ನರಸಿಯ ಆತ್ಮವೂ ತನ್ನ ಆತ್ಮವೂ ಒಂದೇ; ಅವಳ ದುಃಖವೇ ತನ್ನ ದುಃಖ ಎನ್ನುವಂತಿತ್ತು.

೬

ಇಂದು ಮೇಲುಕೋಟೆಯಲ್ಲಿ ಚೆಲುವಸ್ವಾಮಿಗೆ ಕುಂಭಾಭಿಷೇಕ. ಶ್ರೀವೈಷ್ಣವರೆಲ್ಲಾ ಯಾದವಾದ್ರಿಯ ಮೇಲಿರುವ–ನೂತನವಾಗಿ ವಿಷ್ಣು ವರ್ಧನಮಹಾರಾಜನಿಂದ ಕಟ್ಟಿಸಲ್ಪಟ್ಟ ದೇವಾಲಯದಲ್ಲಿ ನೆರೆದಿದ್ದರು. ಜೈನ ಬಿಟ್ಟಿದೇವನು ರಾಮಾನುಜಾಚಾರ್ಯರ ಪ್ರೇರಣೆಯಿಂದ ವೈಷ್ಣವ ವಿಷ್ಣುವರ್ಧನನಾಗಿದ್ದ ಆ ಹೊಯಿಸಳರ ಮಹಾರಾಜನು ಪರಿವಾರದೊಡನೆ ಈ ನೂತನದೇವಾಲಯಕ್ಕೆ ಬಂದಿದ್ದನು. ದಕ್ಷಿಣದೇಶದ ಶ್ರೀವೈಷ್ಣವ ರೆಲ್ಲಾ ನೆರೆದಿದ್ದರು. ಮರಿಯ ಮೊದಲಾದ ಆದಿಕರ್ಣಾಟಕರೂ ನಾಮ ಧಾರಣೆ ಮಾಡಿಕೊಂಡು ಅಂದು ಶ್ರೀವೈಷ್ಣವರ ಜತೆಯಲ್ಲಿ ಶ್ರೀವೈಷ್ಣವ ರಾಗಿದ್ದರು. ದೇವಾಲಯದಲ್ಲಿ ಎಲ್ಲೆಲ್ಲಿ ನೋಡಿದರೂ ವಾದ್ಯಗಳ ರವ, ವೇದಘೋಷ ಮತ್ತು ಸಂಗೀತ!

ಮಧ್ಯಾಹ್ನ ಹನ್ನೆರಡುಗಂಟೆಗೆ ಮಹಾಮಂಗಳಾರತಿ. 'ಮಹಾ-ಮಂಗಳಾರತಿ ಆಗಬಹುದೇ ಮಹಾಪ್ರಭು' ಎಂದು ಅರ್ಚಕರು ದೇವನ ಬಳಿ ಕೈಜೋಡಿಸಿ ನಿಂತಿದ್ದ ವಿಷ್ಣುವರ್ಧನಮಹಾರಾಜನನ್ನು ಕೇಳಿದರು. ಮಹಾರಾಜನು ತನ್ನ ಬಳಿ ಇದ್ದ ಆಚಾರ್ಯರ ಮುಖವನ್ನು ನೋಡುತ್ತಾ, 'ಗುರುಗಳು ಉತ್ತರಕೊಡಬೇಕು' ಎಂದು ಹೇಳಿದನು.

'ಆಗಬಹುದು ಅರ್ಚಕರೇ' ಎಂದು ಆಚಾರ್ಯರು ಹೇಳಿದರು.

ಅರ್ಚಕರು ದೇವನನ್ನು ಮಂಗಳಾರತಿಯಿಂದ ಬೆಳಗುತ್ತಿದ್ದರು. ದೇವನೆದುರಿಗೆ ನಿಂತು ಕೈಮುಗಿಯುತ್ತಿದ್ದ ಎಲ್ಲರೂ ಇದ್ದಕ್ಕಿದ್ದಂತೆಯೇ ಆರ್ತಧ್ವನಿಯೊಂದನ್ನು ಕೇಳಿ, ದೇವಾಲಯದ ಮುಂದೆ ತಿರುಗಿದರು. 'ನನ್ನ

ದೊರೆ! ಚೆಲುವಾ!! ' ಎಂದು ಕುದುರೆಯ ಮೇಲಿದ್ದಂತೆಯೇ ಕೈಮುಗಿಯುತ್ತಾ, ' ನಿನ್ನಿಷ್ಟದಂತೆಯೇ ದಾಸಿ ಬಂದಿದ್ದೇನೆ. ದೊರೆ! ನಿನ್ನ ಪಾದಗಳಲ್ಲಿ ಸೇರಿಸಿಕೋ! ' ಎಂದು ಹೇಳುತ್ತಾ ದೊಪ್ಪನೆ ಕುದುರೆಯ ಮೇಲಿನಿಂದ ಕೆಳಗೆ ಬಿದ್ದ ಸ್ತ್ರೀಮೂರ್ತಿಯನ್ನು ಎಲ್ಲರೂ ಕಂಡರು. ರಮಣಿಯು ನೆಲದಮೇಲೆ ಬಿದ್ದ ಸ್ವಲ್ಪಹೊತ್ತಿನಲ್ಲಿಯೇ ಅವಳ ಅಶ್ವವೂ ನೆಲದಮೇಲೆ ಬಿದ್ದಿತು!

ಆಚಾರ್ಯರು ಅನನ್ಯಭಕ್ತಿಯಿಂದ ದೇವನನ್ನು ನೋಡುತ್ತಿದ್ದಂತೆಯೇ ಪ್ರಜ್ವಲಿಸುವ ಮಿಂಚಿನಕಾಂತಿಯೊಂದು ಬಂದು ದೇವನಲ್ಲಿ ಸೇರಿ ಆತನಲ್ಲಿ ಮೊದಲಿದ್ದ ಕಳೆಯನ್ನು ಇಮ್ಮಡಿ ಮಾಡಿದುದನ್ನು ನೋಡಿ, ದೇವಸ್ಥಾನದ ಮುಂದೆ ತಮ್ಮ ಕಟಾಕ್ಷವನ್ನು ಬೀರಿದರು.

ದೇವನಿಗೆ ಮಹಾಮಂಗಳಾರತಿಯಾಯಿತು. ವೈಷ್ಣವರಲ್ಲಿ ಕೆಲವರು ಕೆಳಗೆ ಬಿದ್ದಿದ್ದ ರಮಣಿಯ ಬಳಿಗೆ ಬಂದರು. ಅವಳನ್ನು ನೋಡಿದ ಅವರಲ್ಲಿ ಕೆಲವರು ' ಇವಳು ಮ್ಲೇಚ್ಛರವಳು! ದೂರ ಹೋಗಿರಿ. ಇನ್ನು ಸ್ನಾನ ಮಾಡಬೇಕು ' ಎಂದರು.

ಆಚಾರ್ಯರು ಅವಳ ಬಳಿಗೆ ಬಂದು, ಸ್ವಲ್ಪಹೊತ್ತು ಮೌನವಾಗಿ ದೃಷ್ಟಿಸಿನೋಡಿ, ಯೋಚಿಸುತ್ತಾ ಅವಳನ್ನು ಮುಟ್ಟಿ ನೋಡಿದರು. ಅವಳ ಆತ್ಮನು ಅವಳ ದೇಹವನ್ನು ಬಿಟ್ಟಿದ್ದನು. ಅವರು ಕುದುರೆಯನ್ನೂ ಮುಟ್ಟಿ ನೋಡಿದರು. ಅದೂ ತನ್ನ ಒಡತಿಯ ಗತಿಯನ್ನೇ ಹೊಂದಿತ್ತು. ಗತಿಸಿದ ರಮಣಿಯನ್ನು ಸುಮ್ಮನೆ ದೃಷ್ಟಿಸಿ ನೋಡಿ, ' ನಾನು ಕನಸಿನಲ್ಲಿ ಕಂಡ ದೇವನ ನಾಚ್ಚಿಯಾರ್! (ತಮಿಳಿನಲ್ಲಿ ನಾಚ್ಚಿಯಾರ್ ಎಂದರೆ ದೇವನ ಪತ್ನಿ ಎಂದು.) ಆ ಬೀಬಿ!! ಸುಲ್ತಾನನ ಮಗಳು! ' ಎಂದುಕೊಂಡು, ' ತಾಯಿ! ದೇವನರಸಿ ನೀನೇ ಪುಣ್ಯವಂತಳು ' ಎಂದು ಆ ಶವಕ್ಕೆ ಕೈಮುಗಿದರು.

ಎಲ್ಲೆಲ್ಲಿಯೂ ಮೌನ. ' ಮರಿಯಾ! ' ಎಂದು ಆಚಾರ್ಯರು ಗದ್ಗದ ಸ್ವರದಿಂದ ಕೂಗಿದರು. ಆದಿಕರ್ಣಾಟಕರ ಮುಂದಾಳು – ಮರಿಯ ಆಚಾರ್ಯರ ಮುಂದೆ ಬಂದು ನಿಂತನು. ' ಮರಿಯಾ, ಈ ದೇವಾಲಯದ ಮುಂದಿರುವ ಮೂಲೆಯಲ್ಲಿ ಈಕೆಗಾಗಿ ಒಂದು ಗೋರಿ ಮಾಡಬೇಕು '

ಎಂದು ಆಚಾರ್ಯರು ಹೇಳಿದರು. 'ಆಗಬಹುದು ಗುರುಗಳೇ' ಎಂದು ಹೇಳಿ ಮರಿಯು ಹೊರಟು ಹೋದನು.

ಶ್ರೀವೈಷ್ಣವರಲ್ಲಿ ಕೆಲವರು ಆಚಾರ್ಯರ ಮಾತನ್ನು ಕೇಳಿದೊಡನೆಯೇ ಒಬ್ಬರ ಮುಖವನ್ನೊಬ್ಬರು ಅಸಮಾಧಾನದೃಷ್ಟಿಯಿಂದ ನೋಡಿದರು. 'ಮ್ಲೇಚ್ಛರವಳಾದುದರಿಂದ ಇವಳು ದೇವನ ಬಳಿ ಹೂಳಲ್ಪಡಲು ಅರ್ಹಳಲ್ಲವೆಂಬುದು ಇವರ ಭಾವನೆ. ಆಕೆ ದೇವರಲ್ಲಿ ಸೇರಿರುವಳೆಂದು ಇವರಿಗೇನು ಗೊತ್ತು! ಆಗಲಿ. ಇವರ ಮನಸನ್ನು ತಾನೆ ಏಕೆ ನೋಯಿಸಬೇಕು? ದೈವದ ಹೃದಯವನ್ನರಿಯದ ಮೂಢರಿವರು! ನನ್ನ ಮತ ಅಭಿವೃದ್ಧಿಯಾಗಬೇಕು. ಇನ್ನೂ ಅದು ಶೈಶವಾವಸ್ಥೆಯಲ್ಲಿದೆ. ಆದುದರಿಂದ ಈ ಶ್ರೀವೈಷ್ಣವರನ್ನು ಅಸಮಾಧಾನಪಡಿಸುವುದು ತರವಲ್ಲ' ಎಂದುಕೊಂಡು, ದೇವನಿಗೆ ಕೈ ಮುಗಿಯುತ್ತಾ, 'ಸ್ವಾಮಿಾ! ನಮ್ಮನ್ನು ಕ್ಷಮಿಸು. ನಾವೆಲ್ಲಾ ಮೂಢರು. ಎಷ್ಟಾದರೂ ಈಕೆ ನಿನ್ನ ನಾಚ್ಚಿ-ಯಾರ್. ಈ ಜೀವವಿಲ್ಲದ ದೇಹವನ್ನು ಎಲ್ಲಿಟ್ಟರೆ ತಾನೆ ಏನು; ಆತ್ಮವೇನೋ ನಿನ್ನಲ್ಲಿ ಐಕ್ಯವಾಗಿದೆ ನಮ್ಮನ್ನು ಕ್ಷಮಿಸು ಭಕ್ತವತ್ಸಲಾ!' ಎಂದು ಕಣ್ಣೀರು ಸುರಿಸುತ್ತಾ ದೇವನಿಗರಿಕೆ ಮಾಡಿ, 'ಮರಿಯಾ!' ಎಂದು ದೈನ್ಯದಿಂದ ಮತ್ತೊಮ್ಮೆ ಕೂಗಿದರು.

ಹಾರೆಗುದ್ದಲಿಗಳೊಡನೆ ಆಗತಾನೆ ಮನೆಯಿಂದ ಬಂದ ಮರಿಯು, 'ಏನು ಗುರುಗಳೇ?' ಎಂದು ಕೇಳಿದನು.

'ಮರಿಯಾ, ಇಲ್ಲಿ ಬೇಡ. ಬೆಟ್ಟದ ಬುಡದಲ್ಲಿರುವ ಆ ಎರಡು ಗುಡ್ಡಗಳ ನಡುವೆ ಇರುವ ಭೂಮಿಯಲ್ಲಿ ಈ ಎರಡು ಶವಗಳನ್ನೂ ಹೂಳಲು ಸಿದ್ಧಪಡಿಸು.'

'ನಾವೂ ಮರಿಯನೊಡನೆ ಹೋಗುತ್ತೇವೆ ಗುರುಗಳೇ' ಎಂದು ವೈಷ್ಣವರಲ್ಲಿ ಕೆಲವರು ಹೇಳಿದರು. ಆಚಾರ್ಯರು ದೈನ್ಯದೃಷ್ಟಿಯನ್ನು ಅವರ ಕಡೆ ಬೀರಿದರು. ಅವರೆಲ್ಲಾ ಮರಿಯನೊಡನೆ ಹೋದರು.

ಸಂಜೆ ಸೂರ್ಯಾಸ್ತದ ಸಮಯ. ಮುಮ್‌ತಾಜಳ– ಇನ್ನು ಮೇಲೆ ಆಚಾರ್ಯರಿಟ್ಟ 'ಬೀಬೀ ನಾಚ್ಚಿಯಾರ್' ಎನ್ನುವ ಹೆಸರಿನಿಂದಲೇ ಅವಳ ಹೆಸರನ್ನು ಹೇಳೋಣ– ಕಳೇಬರವನ್ನು ಹೂಳಲು ಮಾಡಿಟ್ಟ ಗೋರಿಯ

ಬಳಿಗೆ ಎಲ್ಲರೂ ಬಂದರು. ಮೊದಲು ಬೀಬೀ ನಾಚ್ಚಿಯಾರಳ ದೇಹವನ್ನು ಗೋರಿಯಲ್ಲಿಟ್ಟು, ಅವಳ ಬಳಿ ಅವಳ ನಚ್ಚಿನ ಷಂಷೀರನ್ನಿಟ್ಟರು. ಮೊದಲ ಹಿಡಿಯ ಮಣ್ಣನ್ನು ಆಚಾರ್ಯರೇ ಕಣ್ಣೀರು ಸುರಿಸುತ್ತಾ ಹೆಣಗಳ ಮೇಲೆ ಎರಚಿದರು. ಮಣ್ಣಿನಿಂದ ಹೆಣಗಳ ಮುಖಗಳೆಲ್ಲಾ ಮುಚ್ಚಲ್ಪಟ್ಟವು. ಸೂರ್ಯನೂ ಮುಳುಗಿದ; ಜಗವೆಲ್ಲಾ ಕತ್ತಲೆಯಿಂದ ತುಂಬಿತು!

೭

ಮಾಘಮಾಸದ ಶುಕ್ಲ ಚತುರ್ದಶಿಯ ರಾತ್ರಿ ಸುಮಾರು ಹತ್ತು ಗಂಟೆ ಇರಬಹುದು. ಚಂದ್ರನ ತಂಗದಿರುಗಳಿಂದ ತೊಯ್ದು ಜಗವೆಲ್ಲಾ ಶಾಂತಿಸಾಗರದಲ್ಲಿ ಮುಳುಗಿತ್ತು. ಯಾದವಗಿರಿಯ ತಪ್ಪಲಲ್ಲಿ ಯಾವುದೋ ಗೋರಿಯೊಂದನ್ನು ಹುಡುಕುತ್ತಾ ಅಶಾಂತತೆಯಿಂದ ಎರಡು ವ್ಯಕ್ತಿಗಳು ಸುಳಿದಾಡುತ್ತಿದ್ದುವು. ಆ ವ್ಯಕ್ತಿಗಳು ಮುಂದೆ ಮುಂದೆ ಬರುತ್ತಿದ್ದುವು. ಅವುಗಳಲ್ಲಿ ಕಿಂಕಾಬಿನ ಬಟ್ಟೆಯೊಂದರಿಂದ ಮುಚ್ಚಲ್ಪಟ್ಟದ್ದ ಚಿನ್ನದ ತಟ್ಟೆಯೊಂದನ್ನು ಹಿಡಿದುಕೊಂಡಿದ್ದ ವ್ಯಕ್ತಿಯು 'ಪಾದಷಹ! ಪಾದಷಹ!! ಇಲ್ಲಿದೆ!!!' ಎಂದು ನಿಧಾನವಾಗಿ ಹೇಳಿತು.

'ಹೂ, ಆಲಂಷಹ!' ಎಂದು ಗದ್ಗದಸ್ವರದಿಂದ ಪಾದಷಹನು ಹೇಳಿ, ಮಗಳ–ದೇವಪತ್ನಿಯ–ಗೋರಿಯ ಬಳಿಗೆ ಬಂದು, ಮೊಳಕಾಲೂರಿ ಗೋರಿಗೆ ನಮಸ್ಕಾರ ಮಾಡುತ್ತಾ, 'ಕಂದಾ! ಅಳಿದ ತಂದೆಗಾಗಿ ಮಗನು ದೇವರಲ್ಲಿ ಮೊರೆಯಿಡುವುದನ್ನು ಕೇಳಿದ್ದೇನೆ. ತಾಯಿಯ ಗೋರಿಯ ಬಳಿ ಮಗಳು ಬಂದು ಪೂಜಿಸುವುದನ್ನು ನೋಡಿದ್ದೇನೆ. ಗುರುವಿನ ಬೂದಿಯನ್ನು ಹೂಗಳಿಂದ ನಿತ್ಯವೂ ಅಲಂಕರಿಸಿ ಅದರ ಮೇಲೆ ಕಣ್ಣೀರು ಸುರಿಸುವ ಶಿಷ್ಯರನ್ನು ಅರಿತಿದ್ದೇನೆ. ಇನಿಯನ ಶವದ ಬಳಿ ಹೊರಳಾಡುತ್ತಾ ರೋದನ ಮಾಡುವ ಇನಿಯಳನ್ನು ಕಂಡಿದ್ದೇನೆ. ಆದರೆ-ಆದರೆ– ಮಗಳ ಗೋರಿಯ ಬಳಿ ಮೊಳಕಾಲೂರಿ, ಕಣ್ಣೀರು ಸುರಿಸುವ ತಂದೆಯನ್ನು ಕಂಡಿಲ್ಲ; ಕೇಳಿಲ್ಲ, ಇನ್ನು ಮುಂದೆ ಕೇಳುವುದೂ ಇಲ್ಲ. ಮಗೂ! ನಾನು ಪಾಪಿ. ನಿನ್ನ ಮತ್ತು ನಿನ್ನ ಇನಿಯನ ಗುಣಗಳನ್ನರಿಯದೆ ಹೋದೆ. ಕಾಫರ್ ನಾನು! ನಿನ್ನಿನಿಯನನ್ನು ಹೆರರಿಗೆ ಕೊಟ್ಟೆ. ಪ್ರೇಮದ ನಲ್ಲನನ್ನು ಬಿಟ್ಟು ನೀನು

ಹೇಗೆ ತಾನೆ ಇರುವೆ? ಮಗೂ! ಆದುದರಿಂದಲೇ ನಿನ್ನ ಕೆಲಸವನ್ನು ನೀನು ಮಾಡಿದೆ. ನಾನು ಪರಮ ಪಾತಕಿ. ಪ್ರಪಂಚದ ಭೋಗಕ್ಕೆ ಆಸೆಪಟ್ಟು, ನಿನ್ನನ್ನು ಸಾರ್ವಭೌಮಳನ್ನಾಗಿ ಮಾಡುವ ಆಸೆಯಿಂದ ಹಾಗೆ ಮಾಡಿದೆ. ಕಂದಾ! ನೀನು ಜಗದ ಸಾರ್ವಭೌಮಳು' ಎಂದು ಕಣ್ಣೀರಸ್ನೊರಸಿ ಕೊಂಡು, 'ಮಗಳೇ! ನಿನ್ನನ್ನು ಮಗಳೆಂದು ನಮಸ್ಕರಿಸುತ್ತಿಲ್ಲ; ದೇವನ ಪತ್ನಿ ಎಂದು ನಮಸ್ಕರಿಸುತ್ತಿದ್ದೇನೆ. ನಮ್ಮ ಪೂರ್ವಜನ್ಮದ ಪುಣ್ಯವಶ ದಿಂದ ನಮ್ಮ ಅಪವಿತ್ರವಾದ ಮನೆಯಲ್ಲಿ ಹುಟ್ಟಿ ನಮ್ಮನ್ನು ಪಾವನನನ್ನಾಗಿ ಮಾಡಿದೆ; ದೇವನ ದರುಶನವನ್ನು ನನಗೆ ಕೊಡಿಸಿದೆ. ಮಮತಾಜ್! ಏಳು! ಏಳು!! ಎಲ್ಲಿ, ಒಂದು ಮುದ್ದು ಮಾತನ್ನಾಡು. ನಿನಗಾಗಿ ಹಂಬ ಲಿಸುತ್ತಿರುವ ತಾಯಿಗೊಂದು ಮುತ್ತನ್ನು ಕೊಡು. ಏಳು, ನೋಡಲ್ಲಿ ಸುಭದ್ರಾ—ನೂರ್‌ಬೇಗಂ....ನಾನು ಹುಚ್ಚ. ಕಾಡಿನ ರೋದನ ನನ್ನದು! ನನ್ನ ತಪ್ಪನ್ನು ಕ್ಷಮಿಸು, ಕಂದಾ! ನನ್ನ ಕಡೆಯ ಮುತ್ತು' ಎಂದು ಗೋರಿಯನ್ನು ಚುಂಬಿಸಿ, ತಟ್ಟೆಯಲ್ಲಿದ್ದ ಹೂವಿನ ಹಾರವನ್ನು ತೆಗೆದು, ಅದನ್ನು ಗೋರಿಗೆ ಹಾಕಿ, 'ತಾಜ್! ಇದು ನನ್ನ ಪ್ರೇಮದ ಬಹುಮಾನ. ಕಂದಾ! ದೇವನರಸಿಯಾದ ನಿನಗಿತ್ತ ಉಡುಗರೆ' ಎಂದು ಕಣ್ಣೀರು ಸುರಿ ಸುತ್ತಾ ಎದ್ದುನಿಂತನು.

ಗೋರಿಯ ಪಕ್ಕದಲ್ಲಿ ಎಳೆದಳಿರುಗಳಿಂದಲೂ ಹೂ ಕಾಯಿಗಳಿಂದಲೂ ತುಂಬಿದ್ದ ಮಾಮರದ ಮೇಲಿನಿಂದ 'ಕೂ!' ಎಂದು ಕೋಗಿಲೆಯು ಕೂಗಿತು.

ತನ್ನ ಇನಿಯ ಚೆಲುವ ಸ್ವಾಮಿಗಾಗಿ ಮಡಿದ ಬೀಬೀ ನಾಚ್ಚಿಯಾರಳ ಗೋರಿಯನ್ನು ನೋಡಿದ ಮಾನವರೆಲ್ಲಾ ಮರುಗುವರು. ಆ ಗೋರಿ ಯನ್ನು ನೋಡಿ ಮರುಗುವವರು ಮಾನವರೊಬ್ಬರೇ ಅಲ್ಲ. ಆ ಗೋರಿಯ ಸುತ್ತುಮುತ್ತಲೂ ಅನೇಕ ಮಾವಿನ ಮರಗಳಿವೆ. ಎಲ್ಲಾಕಡೆಯ ಮರ ಗಳಲ್ಲಿಯೂ ಹಣ್ಣೆಲೆಗಳು ಬೀಳುತ್ತಿದ್ದರೆ ಇವುಗಳಲ್ಲಿ ಚಿಗುರು ಆಗ ತಾನೆ ಬಿಡುತ್ತದೆ. ಶಿಶಿರದಲ್ಲಿಯೇ ಮಾವಿನಕಾಯಿ ಮತ್ತು ಹಣ್ಣುಗಳು ಈ ಮರ ಗಳಲ್ಲಿ ಸಿಕ್ಕುತ್ತವೆ. ಎಲ್ಲೆಲ್ಲಿಯೂ ವಸಂತನ ಪ್ರಭಾವವಿರುವಲ್ಲಿ ಇಲ್ಲಿ ಶಿಶಿರವು ಬರುತ್ತದೆ! ಹೀಚಿನಲ್ಲಿಯೇ ಹಣ್ಣಾದ, ಹಣ್ಣಾಗುವ ಕಾಲದಲ್ಲಿ

ದೇವನಲ್ಲಿ ಐಕ್ಯಳಾದ, ತಮ್ಮ ಒಡತಿಯ ಬಾಳಿನಂತೆಯೇ ಅವುಗಳ ಜೀವನವೂ ಆಗಿದೆ!

ಕೋಗಿಲೆಯ ಇಂಚರವನ್ನು ಕೇಳಿದ ಪಾದಷಾನ ಎದೆ ಉಬ್ಬಿತು. 'ಮಗಳೇ ! ನನ್ನ ಪ್ರಾರ್ಥನೆ ದೇವನಿಗೆ ಕೇಳಿಸಿತು!' ಎನ್ನುತ್ತಾ ಸುರಿಯುತ್ತಿದ್ದ ಕಣ್ಣೀರನ್ನೊರಸಿಕೊಂಡನು.

೮

ಧನುರ್ಮಾಸದ ಒಂದು ಪ್ರಾತಃಕಾಲ. ಅಷ್ಟು ಹೊತ್ತಿಗೇ ರಾಮಾನುಜಾಚಾರ್ಯರು ಎದ್ದು, 'ದೇವಾ! ಮೊನ್ನೆ ರಾತ್ರಿ ನೀನು ಆಜ್ಞೆಮಾಡಿದ್ದಂತೆಯೇ ಬೀಬೀ ನಾಚ್ಚಿಯಾರಳ ಸ್ವರ್ಣಪ್ರತಿಮೆಯನ್ನು ಮಾಡಿಸಿ ತಂದಿದ್ದೇನೆ. ಇದೇ ಸುದಿನ. ಇದನ್ನು ನಿನ್ನ ಅಡಿಯಲ್ಲಿಟ್ಟು, ನಿನ್ನ ಹಿಂದಿನ ಅಪ್ಪಣೆಯಂತೆಯೇ ಮೊದಲ ಪೂಜೆಯನ್ನು ದಾಸಾಗ್ರೇಸರ ಸಾರ್ವಭೌಮನಾದ ಬಲಿಚಕ್ರವರ್ತಿಗೂ, ಎರಡನೆಯ ಪೂಜೆ ನಿನ್ನರಸಿ ಬೀಬೀನಾಚ್ಚಿಯಾರಳಿಗೂ ಅನಂತರ ನಿನಗೂ ಪೂಜೆಯನ್ನು ಮಾಡಿಸುತ್ತೇನೆ ಮತ್ತು ಮಾಡುತ್ತೇನೆ' ಎಂದು ದೇವನಿಗೆ ಕೈಮುಗಿಯುತ್ತಾ ಹೇಳಿ, ಬೀಬೀ ನಾಚ್ಚಿಯಾರಳ ಸ್ವರ್ಣಪ್ರತಿಮೆಯನ್ನು ಮೂಲಮೂರ್ತಿಯ ಅಡಿಯ ಬಳಿ ಪ್ರತಿಷ್ಠೆ ಮಾಡಿದರು.

ಪೂಜೆಯಾದ ಮೇಲೆ ಅರ್ಚಕರು ದೇವನನ್ನು ಮಂಗಳಾರತಿಯಿಂದ ಬೆಳಗಿದರು. ಆಚಾರ್ಯರು, ಮುಗಿದಿದ್ದ ಕೈಯಿಂದಲೇ, ದೇವನ ಮತ್ತು ಬೀಬೀ ನಾಚ್ಚಿಯಾರಳ ಮುಖಗಳನ್ನು ನೋಡುತ್ತ ಉಕ್ಕಿದ ಭಕ್ತಿಯಿಂದ ಬರುತ್ತಿದ್ದ ಎಳೆನಗೆಯ ಪ್ರವಾಹವನ್ನು ಮುಖದಲ್ಲಿ ಸೂಚಿಸಿದರು. ಎಲ್ಲೆಲ್ಲೂ ಬೆಳಕು ಬಂದಿತು. ಜಗವೆಲ್ಲಾ ಬಾಲಾರ್ಕನ ಜ್ಯೋತಿಯಿಂದ ಬೆಳಗಲ್ಪಟ್ಟಿತು!

---

(ಮೇಲುಕೋಟೆಯ ಸ್ಥಳಪುರಾಣದ ಆಧಾರದಿಂದ ಬರೆದ ಕತೆಯಿದು. ಮೇಲುಕೋಟೆಯ ಬೆಟ್ಟದ ಬುಡದಲ್ಲಿ ಬೀಬೀ ನಾಚ್ಚಿಯಾರಳ ಗೋರಿ ಇದೆ. ಈಗಲೂ ಆ ದೇವಸ್ಥಾನದಲ್ಲಿ ದೇವನಿಗಾಗಲು ಮುನ್ನವೇ, ಆತನ ಪಾದದ ಬಳಿ ಇರುವ ಬೀಬೀ ನಾಚ್ಚಿಯಾರಳ ವಿಗ್ರಹಕ್ಕೆ ಪೂಜೆಯಾಗುತ್ತದೆ. ವೈರಮುಡಿಯ ಉತ್ಸವ ಕಾಲದಲ್ಲಿ ಆದಿಕರ್ಣಾಟಕರನ್ನು ರಾಮಾನುಜಾಚಾರ್ಯರ ಮಾತಿನಂತೆಯೇ ಮೂರು ದಿನ ದೇವಸ್ಥಾನದೊಳಕ್ಕೆ ಬಿಡುತ್ತಾರೆ. ರೈಸ್ ಸಾಹೇಬರೂ ಮೈಸೂರು ಗೆಜೆಟಿಯರಿನಲ್ಲಿ ಈ ಸ್ಥಳದ ಪುರಾಣವನ್ನು ಬರೆದಿದ್ದಾರೆ.)

# ಎಂದುರೋ ಮಹಾನುಭಾವುಲು !

'ಏನು ರಾಯರು ಬಂದಿದ್ದು ?'

'ಏನೂ ಇಲ್ಲ ಸ್ವಾಮಿ. ಮಗು ತಮ್ಮ ಮುಂದೆ ಒಂದೆರಡು ಕೃತಿಗಳನ್ನು ಹಾಡಬೇಕೆಂದು ಆಸೆಪಡುತ್ತೆ. ತಪ್ಪೇನಾದರೂ ಇದ್ದರೆ ತಿದ್ದಿ ಸರಿಪಡಿಸಬೇಕೆಂದು........'

'ಈ ದಿನ ಕಛೇರಿ ಇದೆ ನನಗೆ ಬಿಡುವಿಲ್ಲ.'

' ಹದಿನೈದು ದಿನಗಳಿಂದಲೂ ಬರುತ್ತಿದ್ದೇವೆ ಸ್ವಾಮಿ. ಖಂಡಿತ ಈ ದಿನ ಕೇಳುವುದಾಗಿ ಹೇಳಿದ್ದಿರಿ........ '

'ಮಹಾ! ಮಹಾ!! ಈ ಮಗು ಹಾಡುವುದು. ಈಗ ಬಿಡುವಿಲ್ಲ ಹೋಗಿ'' ಎಂದು ಸಂಗೀತ ವಿದ್ವಾಂಸರಾದ ಕೃಷ್ಣಸ್ವಾಮಿ ಭಾಗವತರು ಎಂಟು ವರುಷದ ಮಗನ ಜೊತೆಯಲ್ಲಿ ನಿಂತಿದ್ದ ನಾರಾಯಣರಾಯರಿಗೆ ಹೇಳಿ, ಮನೆಯೊಳಕ್ಕೆ ಹೊರಟುಹೋದರು.

ನಾರಾಯಣರಾಯರು ಒಬ್ಬ ಹರಿಕಥೆಯ ದಾಸರು; ಕವಿತಾ ಜ್ಞಾನಿಗಳೂ ಆಗಿದ್ದರು. ಅವರ ಚಿಕ್ಕ ಮಗನೂ ಕೂಡ ತನ್ನ ಎಳೆತನದಲ್ಲಿಯೇ ಸಂಗೀತಜ್ಞಾನಿಯಾಗಿ, ತಂದೆ ಹಾಡುತ್ತಿರುವುದನ್ನು ಕೇಳಿ ಕೆಲವು ಹಾಡುಗಳನ್ನು ಕಲಿತಿದ್ದನು. ಅವನಿಗೆ ರಾಗ ಮತ್ತು ತಾಳ ಜ್ಞಾನವೂ ಇತ್ತು. ಮಗನನ್ನು ವಿದ್ವಾಂಸರ ಹತ್ತಿರ ಹಾಡಿಸಿ ಸರಿಪಡಿಸಬೇಕೆಂದೇ ಇಂದು

ರಾಯರು ತಮ್ಮ ಚಿಕ್ಕಂದಿನ ಗೆಳೆಯರಾದ ಭಾಗವತರ ಹತ್ತಿರಕ್ಕೆ ಬಂದು ತಿರಸ್ಕಾರ ವಾಕ್ಯವನ್ನು ಕೇಳಿ ಪೆಚ್ಚುಮೋರೆ ಹಾಕಿಕೊಂಡಿದ್ದು. ಪಾಪ! ಅವರು ಪ್ರತಿ ದಿನವೂ ಬೆಳಗಿನ ಹೊತ್ತು ಮತ್ತೇನೂ ಕೆಲಸ ಮಾಡದೆ ತಮ್ಮ ಮಗುವಿಗೆ ಬಟ್ಟೆಬರೆ ಹಾಕುವುದು.—ಮತ್ತೇನೂ ವಿಶೇಷ ಉಡುಪಿಲ್ಲ. ಒಂದು ಬಿಳಿಯ ಷರಾಯಿ; ಬಿಳಿಯ ಕಾಲರ ಷರಟಿನ ಮೇಲೆ ಮಕಮಲ್ಲಿನ ಕೋಟು; ತಲೆಗೆ ಮಕಮಲ್ಲಿನ ಟೋಪಿ—ಭಾಗವತರ ಮನೆಗೆ ಬಂದು ಕೆಲಸ ವಾಗದೇ ಹಿಂದಕ್ಕೆ ಹೋಗುವುದು ಇದೇ ಕೆಲಸವಾಗಿಹೋಗಿತ್ತು. ಮಗು ಸ್ವಲ್ಪ ಮೆಳ್ಳಗಣ್ಣಿನದು. ಅಂದವಾದ ಚಿಕ್ಕ ಬಿಳಿಯ ಮುಖ. ಎಳೆತನದ ನೋಟ. ನೋಡಲು ಏನೂ ತಿಳಿಯದಂತಿತ್ತು. ಭಾಗವತರಿಂದ ತಿರಸ್ಕಾರದ ಮಾತನ್ನು ಕೇಳಿ, ಅವರಿಗೆ ಕೇಳಿಸುವಂತೆಯೇ 'ಇವರು ಕೇಳದೆ ಹೋದರೆ ಕೆಡತು. ದೇವರು ಕೇಳುತ್ತಾನೆ. ಬಾಪ್ಪ!' ಎಂದು ಹೇಳಿತು. ರಾಯರು 'ರಾಮಾ!' ಎಂದು ಸಿಟ್ಟುಸಿರು ಬಿಟ್ಟು ಮನೆಯ ಕಡೆ ಹಿಂತಿರುಗಿದರು.

ಸ್ವಲ್ಪ ದೂರದಲ್ಲಿಯೇ ಸಂಗೀತ ಗುರುಗಳಾದ ಸುಬ್ಬಣ್ಣನವರು ಬರು ತ್ತಿದ್ದುದನ್ನು ನೋಡಿ, ರಾಯರೂ ಅವರ ಮಗನೂ ನಮಸ್ಕರಿಸಿದರು.

'ಏಕೆ ರಾಯರೇ! ಪೆಚ್ಚು ಮೋರೆ?' ಎಂದು ಸುಬ್ಬಣ್ಣನವರು ಕೇಳಿದರು.

'ಏನೂ ಇಲ್ಲ ಗುರುವೇ. ಈ ದಿನ ಕೃಷ್ಣಸ್ವಾಮಿ ಭಾಗವತರ ಹತ್ತಿ ರಕ್ಕೆ ನಮ್ಮ ಅಶ್ವತ್ಥನ್ನ ಕರೆದುಕೊಂಡು ಹೋಗಿದ್ದೆ. ಅವನಿಗೆ ಸಂಗೀತ ಗಾರರ ಹತ್ತಿರ ಹಾಡಬೇಕೆಂದು ಚಪಲ. ನಿತ್ಯ ನನ್ನ ಪ್ರಾಣ ತೆಗೆಯು ತ್ತಿದ್ದ. ಆದ್ದರಿಂದ ಹದಿನೈದು ದಿನಗಳಿಂದ ಭಾಗವತರ ಮನೆಗೆ ಕರೆದು ಕೊಂಡು ಹೋಗುತ್ತಿದ್ದೇನೆ. ಪ್ರತಿದಿನವೂ ಅವರು ಏನೇನೋ ನೆಪ ಹೇಳು ತ್ತಿದ್ದರು. ಈ ದಿನ 'ಮಗು ಮಹಾ ಹಾಡುವುದು!' ಎಂದು ತಿರಸ್ಕಾರ ದಿಂದ ಹೇಳಿದರು. ಮುಖ್ಯ ದೊಡ್ಡ ಕುದುರೆಯ ಸಹವಾಸ!'

'ಪಾಪ! ಮಗುವೇ ಹಾಡಲು ಬಂದರೆ ಅವನು ಹಾಗೆಂದನೆ?'

'ಊ ತಾತ! ಹದಿನೈದು ದಿನಗಳಿಂದ ಹೋಗುತ್ತಿದ್ದೇವೆ' ಎಂದು ಅಶ್ವತ್ಥ ನಗುತ್ತಾ ಹೇಳಿದನು.

'ನೀನು ಜಾಣ ಮಗು !' ಎಂದು ಸುಬ್ಬಣ್ಣನವರು ಮಗುವನ್ನು ಮುದ್ದಿಟ್ಟು, ಇವತ್ತು 'ಯಾವ ವಾರ ?' ಎಂದರು.

'ಶುಕ್ರವಾರ'

'ಈ ದಿನ ಸಾಯಂಕಾಲ ನಾಲ್ಕು ಗಂಟೆಗೆ ಭಾಗವತರ ಭಜನ ಮಂದಿರಕ್ಕೆ ಬನ್ನಿ. ಇಂದು ಸಂಗೀತ ಕಛೇರಿ. ಮಗುವಿನಿಂದ ಅಲ್ಲಿ ಹಾಡಿಸಿ. ಮಗು ಮರೆಯದೆ ಬಾ.'

'ಖಂಡಿತ ಬರುತ್ತೇವೆ, ತಾತ' ಎಂದು ಮಗು ಉತ್ತರ ಕೊಟ್ಟಿತು. ರಾಯರು ನಮಸ್ಕರಿಸಿ ಹೊರಟರು. 'ನಮ್ಮಲ್ಲಿ ಮಕ್ಕಳಿಗೆ ಸರಿಯಾಗಿ ಉತ್ತೇಜನ ಕೊಡುವುದಿಲ್ಲ!' ಎಂದುಕೊಂಡು ಸುಬ್ಬಣ್ಣನವರೂ ಹೊರಟರು.

* * * * *

ಆ ದಿನ ಸಂಜೆ ಭಾಗವತರ ಭಜನ ಮಂದಿರದಲ್ಲಿ ರತ್ನ ಕಂಬಳಿಗಳನ್ನು ಹಾಸಿದೆ. ಅವುಗಳ ಮೇಲೆ ಎಲ್ಲಾ ತರದ ವಾದ್ಯಗಳೂ ಇವೆ. ಅಲ್ಲಲ್ಲಿ ಸಾಂಬ್ರಾಣಿ ಕಡ್ಡಿಗಳನ್ನು ಹತ್ತಿಸಿದೆ.ಬೆಳ್ಳಿಯ ತಟ್ಟೆಗಳಲ್ಲಿ ಹಣ್ಣು ಹಂಪಲು; ಮೈಸೂರು ವೀಳೆ; ಅಡಿಕೆ ಪುಡಿ; ಮತ್ತು ಸುವಾಸನೆಯಾದ ಹೂ ಕುಚ್ಚುಗಳು. ಅಲ್ಲಿ ಪಟ್ಟಣದ ಮತ್ತು ಹೊರಗಿನ ವಿದ್ವಾಂಸರೆಲ್ಲಾ ನೆರೆದಿದ್ದರು. ಸುಬ್ಬಣ್ಣನವರು ನಡುವೆ ಶಾಲು ಹೊದ್ದುಕೊಂಡು ಕುಳಿತಿದ್ದರು. ಅವರ ಪಕ್ಕದಲ್ಲಿ ಭಾಗವತರು. ಮಿಕ್ಕ ಕೆಲವು ಸಂಗೀತಗಾರರು ವಾದ್ಯಗಳನ್ನು ಸೃತಿ ಮಾಡತೊಡಗಿದರು. ಈ ಹೊತ್ತಿಗೆ ನಾರಾಯಣರಾಯರು ಎಂದಿನಂತೆ ಅಶ್ವತ್ಥನನ್ನು ಕರೆದುಕೊಂಡು ಬಂದು ಸುಬ್ಬಣ್ಣನವರೇ ಮೊದಲಾದವರಿಗೆ ನಮಸ್ಕರಿಸಿ ಕುಳಿತರು. ಅಶ್ವತ್ಥ ಹಾಗೂ ಹೀಗೂ ಸರಿ ಮಾಡಿಕೊಂಡು ಸುಬ್ಬಣ್ಣನವರ ಪಕ್ಕದಲ್ಲಿ ಬಂದು ಕುಳಿತನು.

ಭಾಗವತರ ಸಂಗೀತಕ್ಕೆ ಪ್ರಾರಂಭವಾಯಿತು. ಸ್ವರಗಳೇನು ! ಸಾಹಿತ್ಯಗಳೇನು ! ಅಕಾರಸಾಧನೆಗಳೇನು! ಆರು ಗಂಟೆಗೆ ಎಲ್ಲವೂ ಮುಗಿಯಿತು. ಮಂಗಳವೊಂದು ಬಾಕಿ. ಆಮೇಲೆ ತಾಂಬೂಲ ವಿನಿಯೋಗ. ಆಗ ಸುಬ್ಬಣ್ಣನವರು ಕೋಪದಿಂದ ಎದ್ದು ನಿಂತರು.ಅಲ್ಲಿದ್ದ ವಿದ್ವಾಂಸರೆಲ್ಲಾ ಅವರಿಂದ

ಸಂಗೀತ ಕಲಿತವರೇ ಎನ್ನಬಹುದು. ಅವರ ಮುಖವನ್ನು ನೋಡಿ ಎಲ್ಲರಿಗೂ ಆಶ್ಚರ್ಯವಾಯಿತು. ಭಾಗವತರು ನಡುಗುತ್ತಾ ಅವರ ಬಳಿಗೆ ಬಂದು, ಭಯಭಕ್ತಿಗಳಿಂದ ಸಾಷ್ಟಾಂಗ ನಮಸ್ಕಾರ ಮಾಡಿ, 'ಗುರುಗಳಲ್ಲಿ ಏನು ಅಪರಾಧ ಮಾಡಿದ್ದೇವೊ ತಿಳಿಸಿದರೆ ಸರಿಪಡಿಸಿಕೊಳ್ಳುತ್ತೇವೆ' ಎಂದರು.

'ಅಪರಾಧವೇನೂ ಇಲ್ಲ. ಈ ಕಾಲದಲ್ಲಿ ಎರಡಕ್ಷರ ಬಂದರೆ, ಗರ್ವ ತಲೆಗೇರಿ ಬಿಡುತ್ತೆ. ಮನುಷ್ಯರು ತಮ್ಮ ಮನಸ್ಸಿನಲ್ಲಿ ತಾವೇ ಎಲ್ಲರಿಗಿಂತಲೂ ದೊಡ್ಡವರು ಎಂದುಕೊಳ್ಳುತ್ತಾರೆ. ಸರಿಯಾಗಿ ನೋಡಿದರೆ ಎದೆ ಸೀಳಿದರೂ ಒಂದಕ್ಷರವಿರುವುದಿಲ್ಲ' ಎಂದು ಕಣ್ಣುಗಳನ್ನು ಕೆಂಪಗೆ ಮಾಡಿಕೊಂಡು ಹೇಳಿದರು.

'ಗುರುಗಳಲ್ಲಿ ಏನೂ ಗರ್ವ ತೋರಿಸಿಲ್ಲ.'

'ಸಾಕು, ನಿನ್ನ ವಿನಯ. ಈ ದಿನ ಒಬ್ಬರಿಗೆ ಅವಮಾನಪಡಿಸಿದೆ. ನಾಳೆ–ನಾನೂ ಮುದುಕನಾಗುತ್ತಾ ಒಂದೆ–ನನಗೂ ಹಾಗೆಯೇ. ನಿಮ್ಮ ಸಹವಾಸ ಸಾಕು' ಎಂದು ಸುಬ್ಬಣ್ಣನವರು ಎರಡು ಹೆಜ್ಜೆಗಳನ್ನು ಮುಂದಕ್ಕಿಟ್ಟರು.

ಸಂಗೀತಗಾರರೆಲ್ಲಾ ಎದ್ದು, ಸುಬ್ಬಣ್ಣನವರ ಕೈಕಾಲು ಹಿಡಿದುಕೊಂಡು 'ಅಪರಾಧಿಗೆ ತಕ್ಕ ಶಿಕ್ಷೆ ವಿಧಿಸೋಣ. ದಯುವಿಟ್ಟು ಮಂಗಳಾರತಿ ತೆಗೆದುಕೊಂಡು ಹೋಗಿ' ಎಂದರು.

ಸುಬ್ಬಣ್ಣನವರು ನಿಂತುಕೊಂಡೇ 'ನೀವೆಲ್ಲಾ ಕುಳಿತುಕೊಳ್ಳಿ' ಎಂದರು. ಭಾಗವತರು 'ಅಪರಾಧಿ ಯಾರು ಗುರುವೇ?' ಎಂದು ದೈನ್ಯದಿಂದ ಕೇಳಿದರು.

'ನೀನೇ!'

ಭಾಗವತರಿಗೆ ನಡುಕ ಹತ್ತಿತು. ಅವರು 'ನಾನೇನೂ ಅಪರಾಧ ಮಾಡಿದಂತೆ ನೆನಪಿಲ್ಲ' ಎಂದರು.

'ನೆನಪು ಹೇಗೆ ಬರುತ್ತೆ? ನೋಡು! ಪಾಪ! ನಾರಾಯಣರಾಯರು ಹದಿನೈದು ದಿನಗಳಿಂದ, ಒಂದು ಹಾಡು ಕೇಳೆಂದು ಮಗುವನ್ನು ಕರೆದುಕೊಂಡು ಬಂದರೆ ತಿರಸ್ಕಾರ ವಾಕ್ಯವಾಡಿ ಕಳುಹುವುದೇ? ದೊಡ್ಡ ದೊಡ್ಡ

ಸಂಗೀತಗಾರರೇ ವಿದ್ವಾಂಸರ ಮುಂದೆ ಹಾಡಲು ಭಯಪಡುವಲ್ಲಿ, ಈ ಎಳಗೂಸು ತಾನೇ ಹಾಡಲು ಇಷ್ಟವುಳ್ಳದ್ದಾಗಿ ಬಂದರೆ ಕೇಳದೆ ಕಳುಹಿಸುವುದೇ ? ಇದು ನಿನ್ನ ಗೌರವಕ್ಕೆ ಕಡಮೆ.'

' ಮಗುವಿಗೆ ಪಾಪ ಕಷ್ಟವಾಗಬಹುದೆಂದು ಹಾಡಿಸಲಿಲ್ಲ. '

' ಹದಿನೈದು ದಿನಗಳಿಂದ ನಿನ್ನ ಮನೆಗೆ ಅಲೆಸಿದ್ದು ಕಷ್ಟ ಕೊಟ್ಟಂತಾಗಲಿಲ್ಲವೇನೋ ? ಪಾಪ! ಮಗು ಏನು ಹಾಡುತ್ತೆ ಎಂದು ತಿಳಿದೆಯೋ ? ' ಎಂದುರೋ ಮಹಾನುಭಾವುಲು ' ಎಂದು ತ್ಯಾಗರಾಜರೇ ಹಾಡಿರುವುದನ್ನು ಮರೆತೆಯೋ ? '

' ತಪ್ಪಾಯಿತು. ಕ್ಷಮಿಸಬೇಕು. ಈಗ ಗುರುಗಳು ಏನಪ್ಪಣೆ ಕೊಡುವಿರೋ ಮಾಡುತ್ತೇನೆ '

' ಹಾಗಾದರೆ ಮಗು ಈಗ ಇಲ್ಲಿ ಹಾಡಲಿ '

' ಗುರುಗಳ ಅಪ್ಪಣೆಯಂತೆಯೇ ಆಗಲಿ. '

ಸುಬ್ಬಣ್ಣನವರು ಪಕ್ಕದಲ್ಲಿದ್ದ ಅಶ್ವತ್ಥನ ಬೆನ್ನು ತಟ್ಟುತ್ತಾ ' ಹಾಡು ಮಗು ' ಎಂದರು.

' ಪಿಟೀಲು ಬಾರಿಸಬೇಕು, ತಾತ. '

' ಕೃಷ್ಣಾ ! ಪಿಟೀಲಂತೆ ನೋಡು– '

' ಶ್ರೀಕಂಠ ! ಈ ಮಗು ಹಾಡುತ್ತಂತೆ ಪಿಟೀಲು ನುಡಿಸೋ ' ಎಂದು ಭಾಗವತರು ತಮ್ಮ ಪ್ರಿಯಶಿಷ್ಯ ಶ್ರೀಕಂಠನಿಗೆ ಹೇಳಿದರು.

' ಶ್ರೀಕಂಠಯ್ಯ ಬಾರಿಸಿದರೆ ನಾ ಹಾಡೋಲ್ಲ, ತಾತ ! ಭಾಗವತರೇ ಬಾರಿಸಬೇಕು; ನಾ ಹಾಡಬೇಕು. ಅದಕ್ಕೇನೇ ಹದಿನೈದು ದಿನಗಳಿಂದ ತಿರುಗಿದ್ದು ' ಎಂದು ಅಶ್ವತ್ಥ ಅರೆತೊದಲು ಸಂತೋಷದ ಮಾತುಗಳಿಂದ ಸುಬ್ಬಣ್ಣನವರಿಗೆ ಹೇಳಿದನು.

' ನೀನೇ ಬಾರಿಸಬೇಕೆಂದು ಮಗು ಆಸೆಪಡುತ್ತೆ, ಕೃಷ್ಣ ' ಎಂದು ನಗುತ್ತಾ ಸುಬ್ಬಣ್ಣನವರು ಹೇಳಿ, ' ಭಲೆ !' ಎಂದು ಮಗುವಿನ ಬೆನ್ನು ತಟ್ಟಿದರು.

"ಶ್ರೀಕಂಠ ! ಹಾಗಾದರೆ ಆ ಮೂಲೆಯಲ್ಲಿರೋ ನನ್ನ 'ಸರಸ್ವತೀ' ನ (ಅವರ ಪ್ರೇಮದ ಪಿಟೀಲಿನ ಹೆಸರು) ತೆಗೆದುಕೊಡು."

ಶ್ರೀಕಂಠ ಪಿಟೀಲನ್ನು ತಂದುಕೊಟ್ಟ. 'ಇನ್ನು ಹಾಡು ಮಗು' ಎಂದು ಭಾಗವತರು ಪಿಟೀಲನ್ನು ಕೈಗೆ ತೆಗೆದುಕೊಂಡರು. ಸಂಗೀತಗಾರರೆಲ್ಲಾ ಹುಡುಗ ಹೇಗೆ ಹಾಡುವನೋ ಎಂದು ಸದ್ದಿಲ್ಲದೆ ಬೆಪ್ಪಾಗಿ ನೋಡುತ್ತಿದ್ದರು.

ಅಶ್ವತ್ಥ ಮೊದಲು ಆಲಾಪನೆ ಮಾಡಿ 'ಎಂದುರೋ ಮಹಾನುಭಾವುಲು!' ಎಂಬ ತ್ಯಾಗರಾಜರ ಕೃತಿಯನ್ನೇ ಶ್ರೀರಾಗದಲ್ಲಿ ಹಾಡಲು ಪ್ರಾರಂಭಿಸಿದನು. ಮಗುವಿನ ಆಲಾಪನೆ, ಹಾಡುವಿಕೆ, ತಾಳ ಹಾಕುವುದು ಇವನ್ನೆಲ್ಲಾ ಕಂಡು ತ್ಯಾಗರಾಜರೇ ಎದುರಿಗೆ ಹಾಡತ್ತಿದ್ದಂತೆ ಭಾಸವಾಗುತ್ತಿತ್ತು. ಸಂಗೀತಗಾರರೆಲ್ಲಾ ಅವನ ಹಾಡನ್ನು ಕೇಳುತ್ತಾ ತಲೆದೂಗ ತೊಡಗಿದರು.

ಇದಾದ ಮೇಲೆ ಮೂರು ಜಾವಡಿಗಳನ್ನೂ ನಾಲ್ಕು ದೇವರ ನಾಮಗಳನ್ನೂ ಅಶ್ವತ್ಥ ಹಾಡಿ, 'ಇಷ್ಟೇ ತಾತ ನನಗೆ ಚೆನ್ನಾಗಿ ಬರುವುದು' ಎಂದನು.

'ನಿನಗೆ ಬರುವ ಯಾವದಾದರೂ ಒಂದು ಮಂಗಳ ಹಾಡಿಬಿಡು ಮಗು, ಸಾಕು' ಎಂದು ಸುಬ್ಬಣ್ಣನವರು ನಸುನಗೆಯಿಂದ ಅಶ್ವತ್ಥನ ತಲೆ ಸವರುತ್ತಾ ಹೇಳಿದರು.

ಅಶ್ವತ್ಥ ಮಂಗಳವನ್ನೂ ಹಾಡಿದನು. ಸುಬ್ಬಣ್ಣನವರೇ ಕರ್ಪೂರ ತೆಗೆದುಕೊಂಡು ಮಂಗಳಾರತಿ ಮಾಡಿದರು. ಭಾಗವತರು 'ಶ್ರೀಕಂಠ, ಎಲ್ಲರಿಗೂ ತಾಂಬೂಲ ಕೊಡು' ಎಂದು ಹೇಳಿದರು.

'ಏನಾದರೂ ತಪ್ಪಿದ್ದರೆ ತಿಳಿಸಿ ಭಾಗವತರೇ ತಿದ್ದಿಕೊಳ್ಳುತ್ತೇನೆ' ಎಂದು ಅಶ್ವತ್ಥ ಕೇಳಿದನು.

'ಮಗೂ! ನೀನು ಯಾರ ಬಳಿ ಪಾಠ ಕಲಿತೆ?'

'ಕೃಷ್ಣಪ್ಪನವರು ಒಂದು ವರ್ಷ ಹೇಳಿಕೊಟ್ಟರು. ಆಮೇಲೆ ಅನಿವಾರ್ಯದಿಂದ ಬಂದುಬಿಟ್ಟೆವು.''

'ನನ್ನ ಗುರುಗಳೂ ಅವರೇ. ಅವರ ಶಿಷ್ಯರಲ್ಲಿ ತಪ್ಪು ತಿದ್ದುವಷ್ಟು ಶಕ್ತಿ ನನಗೆಲ್ಲಿದೆ? ಮಗೂ! ನೀನು ಹೀಗೆ ಹಾಡುತ್ತೀ ಎಂದು ತಿಳಿದಿರಲಿಲ್ಲ' ಎಂದು ಹೇಳಿ ಮನೆಯೊಳಕ್ಕೆ ಹೋಗಿ, ಭಾಗವತರು ಒಂದು ತಟ್ಟೆಯಲ್ಲಿ

ವೀಳೆಯದೆಲೆ, ಅಡಿಕೆ, ಇಪ್ಪತ್ತು ರೂಪಾಯಿಗಳನ್ನು ತಂದು ಅಶ್ವತ್ಥನ ಮುಂದಿಟ್ಟು, 'ತೆಗೆದುಕೋ, ಮಗು' ಎಂದರು.

'ನೀವು ನನ್ನ ಗುರುಗಳು. ನಿಮ್ಮಿಂದ ದಕ್ಷಿಣೆ ತೆಗೆದುಕೊಳ್ಳಬೇಕೆ, ಭಾಗವತರೆ?'

'ಇದು ದಕ್ಷಿಣೆಯಲ್ಲ. ಏನಾದರೂ ಕಳ್ಳೆಪುರಿ ತೆಗೆದುಕೊ ಎಂದು.'

'ಅಹಾ! ನಾನು ಸಾಯೋವರೆಗೂ ಕಳ್ಳೆಪುರಿ ತಿಂದರೂ ಇನ್ನೂ ಮಿಕ್ಕು ಹೋಗುತ್ತೆ. ಅದು ನನಗೆ ಬೇಡಿ."

'ನೀನು ತೆಗೆದುಕೊಳ್ಳದೆ ಹೋದರೆ ನನ್ನ ಮನ ನೋಯುತ್ತೆ. ತೆಗೆದುಕೋ, ಮಗು'

'ನೋಡಿದಿಯಾ, ತಾತ!' ಎಂದು ಸುಬ್ಬಣ್ಣನವರ ಕಡೆ ಬಾಲ್ಯ ಕಟಾಕ್ಷವನ್ನು ಬೀರುತ್ತಾ ನಸುನಗುತ್ತಾ ಅಶ್ವತ್ಥ ಕೇಳಿದನು.

"ಮನೆಗೆ ಬರೋ ಲಕ್ಷ್ಮೀನ ಬೇಡ ಅಂತೀಯಾ? ತೆಗೆದುಕೊಂಡು ಜೇಬಿನಲ್ಲಿ ಹಾಕಿಕೋ" ಎಂದು ಸುಬ್ಬಣ್ಣನವರು ಹೇಳಿದರು. ಅಶ್ವತ್ಥ ಹಣವನ್ನು ತೆಗೆದುಕೊಂಡು, ಜೇಬಿನಲ್ಲಿ ಹಾಕಿಕೊಂಡು, ಅದನ್ನು ತಂದೆಗೆ ಕೊಡೋಣವೆಂದು ಎರಡುಹೆಜ್ಜೆಯಿಟ್ಟನು.ಅಲ್ಲೇ ಮನೆಯೊಳಕ್ಕೆ ಹೋಗುವ ಬಾಗಿಲು; ಅದರ ಪಕ್ಕದಲ್ಲಿಯೇ—ಸ್ವಲ್ಪ ದೂರದಲ್ಲಿ—ನಾರಾಯಣ ರಾಯರು ಕುಳಿತಿದ್ದರು. ಅಶ್ವತ್ಥ ಬಾಗಿಲು ಹತ್ತಿರಕ್ಕೆ ಬಂದೊಡನೆಯೇ ಬಾಗಿಲಲ್ಲಿ ನಿಂತಿದ್ದ ರಮಣಿಯು ಅವನನ್ನು ಎತ್ತಿಕೊಂಡು ಮನೆಯೊಳಕ್ಕೆ ಹೋದಳು.

ಬಾಳೆಯಹಣ್ಣು, ಕಲ್ಲುಸಕ್ಕರೆ ಮತ್ತು ಹಾಲನ್ನು ಕೊಟ್ಟು, ತೊಡೆಯ ಮೇಲೆ ಕುಳ್ಳಿರಿಸಿಕೊಂಡು ಮುದ್ದಿಡುತ್ತಾ 'ನಿನ್ನ ಹೆಸರೇನು ಮಗು?' ಎಂದು ಆಕೆ ಕೇಳಿದಳು.

"ಅಶ್ವತ್ಥ, ಅಮ್ಮ"

"ಅಲ್ಲಿರುವವರೇ ಅಲ್ಲವೇ ನಿನ್ನ ತಂದೆ?"

"ಊ"

"ನಿಮ್ಮ ತಾಯಿ ಎಲ್ಲಿದ್ದಾಳೆ?

'ಸತ್ತು ಎರಡು ವರಷವಾಯಿತು' ಎಂದು ಹೇಳಿ ಅಶ್ವತ್ಥ ಕಣ್ಣೀರು ಸುರಿಸತೊಡಗಿದನು.

'ಅಳಬೇಡ ಸುಮ್ಮನಿರು, ಮಗು' ಎಂದು ಸಮಾಧಾನಪಡಿಸುತ್ತಾ ಜೇಬನ್ನು ಹಣ್ಣು ಹಂಪಲಿಂದ ತುಂಬಿ, "ಅಕ್ಕತಂಗಿಯರೆಷ್ಟು ಮಂದಿ?" ಎಂದು ಆಕೆ ಕೇಳಿದಳು.

'ಇಲ್ಲ.'

'ಹಾಗಾದರೆ ಮನೆಯಲ್ಲಿ ಅಡಿಗೆ ಮಾಡುವವರಾರು?'

'ನಮ್ಮ ತಂದೆ'

'ಅಣ್ಣತಮ್ಮಂದಿರಿದ್ದಾರೆಯೋ?'

'ಇಬ್ಬರು ಅಣ್ಣಂದಿರಿದ್ದಾರೆ. ಇಬ್ಬರೂ ಹುಟ್ಟುಕುರುಡರು'

'ಅಯ್ಯೋ! ಪ್ರಪಂಚವೇ!' ಎಂದು ಆಕೆಯೂ ಕಣ್ಣೀರು ಸುರಿಸಿದಳು.

ವೀಳೆಯದೆಲೆ ಕೊಟ್ಟಮೇಲೆ ಎಲ್ಲರೂ ಹೊರಟುಹೋದರು. ನಾರಾಯಣರಾಯರು ಬಾಗಿಲಲ್ಲೇ ಮಗುವಿಗಾಗಿ ಕಾದಿದ್ದರು ಆಗ ಭಾಗವತರು ಮನೆಯೊಳಕ್ಕೆ ಬಂದು,ದಂಪತಿಯನ್ನು ನೋಡುತ್ತಾ, 'ಪಾಪ!ಅವರ ತಂದೆ ಕಾದಿದ್ದಾರೆ ಬಿಡಿ, ಮೀನೂ!' ಎಂದರು.

'ನಮಗಂತೂ ಮಕ್ಕಳಿಲ್ಲ. ಇದನ್ನು ಸಾಕಿಕೊಳ್ಳೋಣ. ಇಷ್ಟು ಚಿಕ್ಕ ವಯಸ್ಸಿನಲ್ಲೇ ಎಷ್ಟು ಚೆನ್ನಾಗಿ ಹಾಡುತ್ತೆ!'

'ಅವರ ತಂದೆ ಇಂಥ ಮುದ್ದುಮಗುವನ್ನು ಕೊಡುವರೇನೆ? ನನಗೆ ಮೊದಲು ಇವನು ಇಷ್ಟು ಚೆನ್ನಾಗಿ ಹಾಡುತ್ತಾನೆಂದು ತಿಳಿದಿರಲಿಲ್ಲ!'

ಮೀನಾಕ್ಷಮ್ಮನು ತಾನು ಮಗುವಿನಿಂದ ತಿಳಿದ ಸಮಾಚಾರಗಳನ್ನೆಲ್ಲಾ ಗಂಡನಿಗೆ ಹೇಳಿ, 'ಹಿಂದೆ ಐದಾರು ಸಲ ಇವನನ್ನು ನೋಡಿದ್ದೆ, ಆದರೆ—' ಎನ್ನುವಲ್ಲಿ ನಾರಾಯಣರಾಯರು ಮನೆಯೊಳಕ್ಕೆ ಬಂದರು. ಭಾಗವತರು ಅವರಿಗೆ ನಮಸ್ಕಾರಮಾಡಿ, 'ತಮಗೆ ಬಹು ಶ್ರಮಕೊಟ್ಟೆ, ಕ್ಷಮಿಸಬೇಕು' ಎಂದರು.

'ಶ್ರಮವೇನೂ ಇಲ್ಲ ಸ್ವಾಮಿ'

‘ ಪಾಪ ! ನಿಮ್ಮನ್ನು ದೇವರು ಒಳ್ಳೆಯ ಸ್ಥಿತಿಯಲ್ಲಿಡಬೇಕು. ರಾಯರೆ ಹದಿನೈದು ದಿನಗಳಿಂದ ಈ ಮಗುವಿಗೋಸ್ಕರ ಬರುತ್ತಾ ಊಟಕ್ಕೆ ಬಹಳ ಹೊತ್ತಾಗುತ್ತಿದ್ದಿತಂತೆ. ತಮಗೆ ಬಹಳ ಕಷ್ಟ ಕೊಟ್ಟೆ. ಅಭಿಮಾನವಿಟ್ಟು ಆಗಾಗ ಬರುತ್ತಿರಿ ’

‘ ಆಗಲಿ ಸ್ವಾಮಿ. ಇದು ತಮ್ಮ ಕೂಸು. ಹೇಗಾದರೂ ಮಾಡಿ ತಾವು ಮುಂದಕ್ಕೆ ತರಬೇಕು. ಇದೇ ನನ್ನ ಕೋರಿಕೆ ’

‘ ಅವನು ಯಾರಿಂದಲೂ ಮುಂದಕ್ಕೆ ತರಲ್ಪಡಬೇಕಾಗಿಲ್ಲ, ರಾಯರೇ. ಅವನನ್ನು ಹಡೆದ ನೀವೇ ಪುಣ್ಯವಂತರು. ಅವನು ಮಹಾನುಭಾವ ! ’ ಎಂದು ಹೇಳಿ, “ಪಾಪ ! ಅವರಿಗೆ ಹೊತ್ತಾಯ್ತು ಬಿಡು ವಿಾನೂ, ಆಗಾಗ ಅವರು ನಮ್ಮ ಮನೆಗೆ ಬರುತ್ತಾರೆ ” ಎಂದು ಹೆಂಡತಿಗೆ ಭಾಗವತರು ಹೇಳಿದರು.

ಆಕೆಯು ಮಗುವಿಗೆ ಮುತ್ತು ಕೊಟ್ಟು, ‘ ಆಗಾಗ ನಮ್ಮ ಮನೆಗೆ ಬರುತ್ತಿರು ಮಗು ’ ಎಂದು ಹೇಳಿದಳು.

ಅಶ್ವತ್ಥ “ಆಗಲಿ ಅಮ್ಮಾ ” ಎಂದು ಭಾಗವತರು ಮತ್ತು ಅವರ ಹೆಂಡತಿ ಕೊಟ್ಟಿದ್ದ ಬಹುಮಾನಗಳನ್ನೆಲ್ಲಾ ತಂದೆಗೆ ತೋರಿಸಿದನು. ರಾಯರು ಭಾಗವತರಿಗೆ ನಮಸ್ಕಾರಮಾಡಿ ‘ ಹೋಗಿ ಬರುತ್ತೇವಮ್ಮ ’ ಎಂದು ಅವರ ಹೆಂಡತಿಗೆ ಹೇಳಿ, ‘ ನೀನಾದರೂ ನನ್ನ ಹೆಸರನ್ನು ಮುಂದಕ್ಕೆ ತಾ, ಕಂದ ! ’ ಎಂದು ಕಣ್ಣೀರು ಸುರಿಸುತ್ತಾ ಮನೆಯ ಕಡೆಗೆ ಹೊರಟರು.

ಪಾಪ ! ಇಂತಹ ಸಮಯದಲ್ಲಿ ರಾಯರು ತಮ್ಮ ಗತಿಸಿದ ಹೆಂಡತಿ ಯನ್ನು ನೆನೆದರೋ ಏನೋ !

---

# ಉದಯರಾಗ

ಬಸವಣ್ಣನ ಮುಂದೆ ದಾರಿ ಕವಲೊಡೆಯುತ್ತೆ. ಒಂದು ಚಾಮುಂಡಾಂಬಿಕೆಯ ದೇವಾಲಯಕ್ಕೂ ಮತ್ತೊಂದು ಬಸವಣ್ಣನ ಬಳಿ ಇರುವ ದೊಡ್ಡದೊಂದು ಗುಡ್ಡಕ್ಕೂ ಹೋಗುತ್ತೆ. ಆ ಗುಡ್ಡದ ಸುತ್ತಮುತ್ತಲೂ ಗಿಡಮರಗಳಿವೆ. ಗುಡ್ಡದ ಮೇಲೆ ಕುಳಿತರೆ ಉದಯಾಸ್ತಂಗಳ ಪ್ರಕೃತಿ ಸೌಂದರ್ಯವನ್ನು ಮನತಣಿಯುವ ತನಕ ನೋಡಬಹುದು.

ಸುಮಾರು ಹದಿನೇಳು ವರ್ಷದ ಹುಡುಗನೊಬ್ಬನು ಆ ಗುಡ್ಡದ ಮೇಲೆ ಕುಳಿತಿದ್ದನು. ಅವನ ಆಕೃತಿಯನ್ನು ನೋಡಿದರೆ ಹದಿನೇಳೆಂದು ಹೇಳುವುದೂ ಬಹಳ ಕಷ್ಟ. ಸಣ್ಣ ಕೈಕಾಲುಗಳು. ಕಡ್ಡಿಯಂತಿದ್ದ ದೇಹ. ಪಾತಾಳಕ್ಕೆ ಹೋದ ಕಣ್ಣುಗಳು. ಕೆದರಿದ ಜಡೆಜಡೆಯಾಗಿರುವ ಕೂದಲು. ಅವನು ಉಟ್ಟಿಸುದು ಕೊಳಕು ಪಂಚೆ. ಅದೂ ಚಿಂದಿಚಿಂದಿ. ಹಾಕಿಕೊಂಡಿದ್ದ ಷರಟಂತೂ ಎಲ್ಲಾ ಕಡೆಯಲ್ಲೂ ಹರಿದಿತ್ತು. ಅವನ ಬಲಗಡೆಯಲ್ಲೊಂದು ಕೊಳಲು. ಅದರ ಎರಡು ಕೊನೆಗಳೂ ಎರಡು ಕಬ್ಬಿಣದ ಕಟ್ಟುಗಳಿಂದ ಬಿಗಿಸಲ್ಪಟ್ಟಿದ್ದುವು. ಅವನ ಎಡಗಡೆ ಕೆಲವು ಸೀಬೆಯಕಾಯಿಗಳು.

ಆಗತಾನೇ ಅರುಣೋದಯವಾಗಿತ್ತು. ಅರುಣನ ಕೆಂಬೆಳಗು, ಬೀಳುತ್ತಿದ್ದ ಮಂಜಿನಲ್ಲಿ ವಿವಿಧ ರೂಪಗಳನ್ನು ತಾಳಿತ್ತು. ಹುಡುಗನು ಈ ದೃಶ್ಯದ ಕಡೆ ತಲೆಯೆತ್ತಿ ನೋಡಿದನು. ಪುನಃ ತಲೆಬಗ್ಗಿಸಿಕೊಂಡು ನೆಲವನ್ನೂ

ಈಕ್ಷಿಸಿದನು. ಅವನ ತಲೆಯೆಲ್ಲಾ ಏನೇನೋ ಯೋಚನೆಗಳಿಂದ ತುಂಬಿತ್ತು. ಮತ್ತೊಮ್ಮೆ ಅರುಣನನ್ನು ನೋಡುತ್ತಾ ಸಮಾಧಿಯಲ್ಲಿದ್ದ ಮಾನವನು ಪರಮೇಶನ ಪ್ರಥಮ ಸಾಕ್ಷಾತ್ಕಾರವನ್ನು ಪಡೆದಾಗ ಮುಖದಲ್ಲಿ ಸೂಸುವ ಮುಗುಳುನಗೆಯನ್ನು ಇವನೂ ತನ್ನ ಮುಖದಲ್ಲಿ ಸೂಸಿದನು. ಕೈಗೆ ಕೊಳಲನ್ನು ತೆಗೆದುಕೊಂಡು, 'ನೀಮಾಯೆಯೊಳಗೋ ನಿನ್ನೊಳಗೆ ಮಾಯೆಯೋ' ಎಂಬುದರ ಆಲಾಪನೆಯನ್ನು ಉದಯರಾಗದಲ್ಲಿ ಮಾಡಿದನು. ಕೊಳಲೂದುತ್ತಿರುವಲ್ಲಿ ಅವನ ಹೃದಯವು ಕೊಳಲಿನಿಂಚರದೊಂದಿಗೆ ದೇವನಡಿಯನ್ನು ಸೇರಿರಬಹುದು ಎನ್ನಿಸುವಂತಿತ್ತು. ಇವನ ಕೊಳಲನ್ನು ಆಲಿಸುತ್ತಾ ಇವನ ಹಿಂದೆ ಇಬ್ಬರು ನಿಂತಿದ್ದರು. ಮುರಲೀಮಗ್ನನಾಗಿದ್ದ ಹುಡುಗನು ಯಾವ ಕಡೆಯೂ ನೋಡಲೇ ಇಲ್ಲ.

ರಾಗಾಲಾಪನೆ ಆಯಿತು. ಆಮೇಲೆ ಅವನು ಹಾಡನ್ನೇ ಕೊಳಲಿನಲ್ಲಿ ಹಾಡಿದನು. ಸೊಗಸಿನ ಸ್ವರ. ಹೃದಯದಾಂತರ್ಯದಿಂದ ಹಾಡುತ್ತಿರುವ ಹಕ್ಕಿಯ ಮಂಜುಳ ವಾಣಿ. ದೇವನ ಹೃದಯವನ್ನೂ ಸ್ಪರ್ಶನಮಾಡುವಂತಿತ್ತು!

ಕೊಳಲಿನಲ್ಲಿ ಹಾಡಿದುದು ಮುಗಿದ ಮೇಲೆ ಅದನ್ನು ತನ್ನ ಬಳಿ ಇಟ್ಟ. ಉದಯಿಸುತ್ತಿದ್ದ ಸೂರ್ಯಮಂಡಲವನ್ನು ನೋಡಿ ಅವನು ನಕ್ಕನು. ತನ್ನ ಕೈಗಳನ್ನು ಜೋಡಿಸಿಕೊಂಡು ಕೊಳಲಿನಲ್ಲಿ ಹಾಡಿದುದನ್ನೇ ಬಾಯಲ್ಲೂ ಹಾಡಿದನು. ಈ ವಾಣಿಯಂತೂ ಕೊಳಲಿಗಿಂತಲೂ ಇಂಪಾಗಿತ್ತು. ಎಷ್ಟಾದರೂ ಇದು ಹೃದಯದ ಪ್ರತಿಧ್ವನಿ!

ಹಿಂದೆ ನಿಂತು ಕೇಳುತ್ತಿದ್ದವರಿಗೆ ಮೈಯೆಲ್ಲಾ ಜುಮ್ಮೆಂದು ಹೋಯಿತು. ಹಾಡುವವನನ್ನು ನೋಡಬೇಕೆಂಬ ಕುತೂಹಲ ಅವರಿಗೆ. ಅವರು ಹುಡುಗನ ಮುಂದೆ ಬಂದು ನಿಂತರೂ ಹುಡುಗ ತಲೆಬಗ್ಗಿಸಿಕೊಂಡೇ ಅಂಜಲೀಬದ್ಧನಾಗಿಯೇ ಹಾಡುತ್ತಿದ್ದನು. ಕೊನೆಗೆ ಪಲ್ಲವಿಯನ್ನು "ನಿನ್ನೊಳಗೆ ಮಾಯೆಯೊ, ಕೃಷ್ಣಾ!" ಎನ್ನುತ್ತಾ ಹಾಡಿ ಆತನು ತಲೆಯನ್ನು ಮೇಲಕ್ಕೆತ್ತಿದನು. ಮುಂದಿದ್ದವರನ್ನೂ ನೋಡಿದ! ಅವರು ಮುದುಕರು. ಸುಮಾರು ಅರವತ್ತೆಂಟು ವರ್ಷವಿರಬಹುದು. ಅಗಲವಾದ ಬಿಳಿಯ ಮುಖ. ಮುಖದಲ್ಲಿ ದೇವ-ರಾಜ-ಕಳೆಯಿತ್ತು. ಗಿಜಾರ್ಮೀಸೆ. ಹಣೆಯಲ್ಲಿ

ಕಸ್ತೂರಿ ತಿಲಕ. ಅರಮನೆಯ ಪೋಷಾಕಿನಿಂದಿದ್ದರು. ಅವರನ್ನು ನೋಡಿ ದೊಡನೆಯೇ ಹುಡುಗ ಬೆಪ್ಪಾದನು. ಸ್ವಲ್ಪ ಹೊತ್ತು ಅವರನ್ನೇ ನೋಡಿ, 'ನನ್ನ ದೇವರೇ ಈಗ ಬಂದಿರಾ' ಎಂದು ಕಾಲಮುಟ್ಟಿ ನಮಸ್ಕರಿಸಿ ಅವನು ನಿಂತನು.

'ನೀನಾರು ಮಗು?' ಎಂದು ಮುಂದೆ ನಿಂತಿದ್ದವರು ಹುಡುಗನನ್ನು ಕೇಳಿದರು.

ಹುಡುಗನು ಸುಮ್ಮನೆ ತನ್ನನ್ನು ಪ್ರಶ್ನಿಸಿದವರ ಮುಖವನ್ನೇ ನೋಡು ತ್ತಿದ್ದನು. ಅವನಿಗೆ ಏನು ಉತ್ತರ ಕೊಡಲೂ ತೋಚಲಿಲ್ಲ. ಏನೋ ಹೇಳ ಬೇಕೆಂದು ಹೊರಟ ನಾಲಿಗೆ ಅರೆತೆರೆದು ಅದುರುತ್ತಿದ್ದ ತುಟಿಗಳ ನಡುವೆಯೇ ನಿಂತಿತು.

'ನೀನಾರು ಮಗು?' ಎಂದವರು ಮತ್ತೊಮ್ಮೆ ಕೇಳಿದರು.

'ನಾನೊಬ್ಬ ಅನಾಥ ಸ್ವಾಮಿ!' ಎಂದು ಮುಗಿದಿದ್ದ ಕೈಯಿಂದಲೇ ಹುಡುಗ ಹೇಳಿದನು. ಹೇಳುತ್ತಿರುವಲ್ಲಿ ಅವನ ಕಣ್ಣುಗಳು ನೀರಿನಿಂದ ತುಂಬಿದುವು. ಅವನ ಮುಂದಿದ್ದವರು ಅದನ್ನು ಕಂಡರು. ಹುಡುಗನ ಭುಜದ ಮೇಲೆ ಕೈಹಾಕಿ, 'ಕುಳಿತುಕೋ, ಮಗು, ನೀನಾರು ಹೇಳು?' ಎಂದು ಹೇಳಿ ಹುಡುಗನನ್ನು ಬಲಾತ್ಕಾರದಿಂದ ಕಲ್ಲಿನಮೇಲೆ ಕುಳ್ಳಿರಿಸಿ, ತಾವೂ ಅವನ ಪಕ್ಕದಲ್ಲಿ ಕುಳಿತರು.

'ತಾವು ಅರಮನೆಯವರಾ, ಸ್ವಾಮಿ?' ಎಂದು ಹುಡುಗನು ದೈನ್ಯ ದಿಂದ ಅವರನ್ನು ಕೇಳಿದನು.

'ಹೌದು,' ಎಂದು ಹೇಳುತ್ತಾ, ಅವರು ಮುಖದಲ್ಲಿ ಮುಗುಳುನಗೆ ಸೂಸಿದರು.

'ಶ್ರೀಕೃಷ್ಣಪ್ರಭುಗಳು ತಮಗೇನಾಗಬೇಕು, ಸ್ವಾಮಿ?'

'ನಾನು ಶ್ರೀಕೃಷ್ಣಪ್ರಭುವಿನ ಪ್ರಿಯ ಸೇವಕ. ನನ್ನನ್ನು ಎಲ್ಲರೂ ಕೃಷ್ಣದಾಸನೆನ್ನುವರು. ಅದಿರಲಿ ಮಗು, ನೀನು ಯಾರು ಹೇಳು?

'ಮೊದಲೇ ಹೇಳಿದೆ ಸ್ವಾಮಿ, ನಾನೊಬ್ಬ ಅನಾಥನೆಂದು' ಎಂದು ಹೇಳುತ್ತಿರುವಲ್ಲಿ ಹುಡುಗನ ಕಣ್ಣಿನಿಂದ ನೀರು ಹರಿಯುತ್ತಿತ್ತು. 'ಹುಡು ಗನ ಜೀವನದಲ್ಲಿ ವಿಶೇಷವೇನೋ ಇರಬೇಕು' ಎಂದುಕೊಂಡು

ಕೃಷ್ಣದಾಸರು, 'ಕಂದಾ! ಮರೆಮಾಚದೆ ನಿನ್ನ ಕತೆಯನ್ನೆಲ್ಲಾ ಹೇಳು.ಎಲ್ಲ ವನ್ನೂ ಶ್ರೀಕೃಷ್ಣಪ್ರಭುವಿನಲ್ಲಿ ಹೇಳುತ್ತೇನೆ' ಎಂದರು.

ಹುಡುಗನು ಅವರನ್ನು ದೃಷ್ಟಿಸಿ ನೋಡುತ್ತಾ, 'ಸ್ವಾಮಿ, ನೀವೊಬ್ಬರೇ ನನ್ನನ್ನು ಇಲ್ಲಿ ಇಷ್ಟು ಪ್ರೀತಿಯಿಂದ ಮಾತನಾಡಿಸಿದ್ದು!' ಎಂದನು.

'ಆ ಮಾತುಗಳೆಲ್ಲಾ ಇರಲಿ ಮಗು. ನಿನ್ನ ಹೆಸರೇನು ಮೊದಲು ಹೇಳು. ನಾನು ಕೇಳಿದುದಕ್ಕೆ ನೀನು ಉತ್ತರ ಕೊಡಲಿಲ್ಲವಲ್ಲಾ.'

'ನನ್ನ ಹೆಸರನ್ನು ಹೇಳಲು ನನಗೇ ನಾಚಿಕೆಯಾಗುತ್ತೆ, ಸ್ವಾಮಿ' ಎಂದು ಹುಡುಗ ಹೇಳಿದನು. ಹುಡುಗ ತನ್ನ ಹೆಸರನ್ನು ನೆನೆಯುವಲ್ಲಿ ಬೀಳುತ್ತಿದ್ದ ಕಣ್ಣೀರಿನಿಂದ ಹುಸಿನಗುವಿನ ಕಣವೊಂದು ಚದುರಿತು!

'ತಾಯಿಯು ಒಲವಿನಿಂದ ಇಟ್ಟ ಹೆಸರಿನಿಂದ ನಿನಗೇಕೆ ನಾಚಿಕೆ, ಹೇಳು ಮಗು?' ಎಂದು ಕೃಷ್ಣದಾಸರು ಹುಡುಗನ ಬೆನ್ನುತಟ್ಟಿ ಕೇಳಿದರು.

'ಸ್ವಾಮಿ, ನನ್ನನ್ನು ನಮ್ಮ ತಾಯಿ ಕೃಷ್ಣಪ್ರಿಯ ಎನ್ನುತ್ತಿದ್ದಳು.'

ಕೃಷ್ಣದಾಸರು ಮುಖದಲ್ಲಿ ಮುಗುಳುನಗೆ ಸೂಸಿ, 'ಮಗು! ನಿನ್ನ ಮುರಲೀನಾದದಿಂದ ನೀನು 'ಕೃಷ್ಣಪ್ರಿಯ' ನೇ ಆಗಿದ್ದೀ!' ಎಂದು ಹೇಳಿ, 'ಕಂದಾ! ನನಗೆ ಹೊತ್ತಾಯಿತು. ಇನ್ನು ಬೆಟ್ಟದಮೇಲೆ ಶ್ರೀಕೃಷ್ಣಪ್ರಭುಗಳನ್ನು ನೋಡಲು ಹೋಗಬೇಕು. ನಿನ್ನನ್ನು ನೋಡಿದರೆ ಬಹಳ ಕಷ್ಟ ಜೀವನವನ್ನನುಭವಿಸಿದನಂತಿದ್ದೀ. ನಿನ್ನ ಕತೆಯನ್ನೆಲ್ಲಾ ಅವರಿಗೆ ಹೇಳಬೇಕೆಂಬ ಆಸೆ ನನಗೆ ಬಹಳವಾಗಿದೆ. ಮರೆಮಾಚದೆ ನಿನ್ನ ನೈಜ ಜೀವನವನ್ನೆಲ್ಲಾ ಹೇಳು' ಎಂದರು.

ಹುಡುಗನಿಗೆ ಆ ಮೃದು ನುಡಿಗಳನ್ನು ಕೇಳಿ ಸಂತೋಷವಾಯಿತು. ಮುಂದೆ ಒದಗಬಹುದಾದ ಸಂತೋಷದ ಕನಸನ್ನು ಅವನು ಆಗಲೇ ಕಂಡನು. 'ಸ್ವಾಮಿ, ನೀವು ಖಂಡಿತವಾಗಿಯೂ ಕೃಷ್ಣಪ್ರಭುವಿನೊಡನೆ ನನ್ನ ಕತೆಯನ್ನೆಲ್ಲಾ ಹೇಳುವಿರಾ? ನಾನೇ ಅವರಿಗೆ ಹೇಳಬೇಕೆಂದಿದ್ದೆ. ಈಗ ನಿಮ್ಮಿಂದಲೇ ಅವರಿಗೆ ತಿಳಿಯುವುದು ಇನ್ನೂ ಸಂತೋಷಕರವೇ' ಎಂದು ಯೋಚಿಸುತ್ತಾ ನಿಧಾನವಾಗಿ ಕೃಷ್ಣಪ್ರಿಯನು ಹೇಳಿದನು.

'ಒಂದು ಪದವನ್ನೂ ಮರೆಯದೆ ಅವರಿಗೆ ಹೇಳುತ್ತೇನೆ, ಮಗು' ಎಂದು ಕೃಷ್ಣದಾಸರು ಹುಡುಗನ ತಲೆ ನವರುತ್ತಾ ಹೇಳಿದರು.

'ತಂಜಾವೂರು ನಾನು ಹುಟ್ಟಿಬೆಳೆದ ಸ್ಥಳ. ನಮ್ಮ ತಾಯಿ ಮೈಸೂರಿನವಳು. ಅರಮನೆಯಲ್ಲಿ ಸಂಗೀತಗಾರರಾಗಿದ್ದ ಗತಿಸಿದ ಸುಬ್ಬಣ್ಣನವರ ಮಗಳು....'

'ಸುಬ್ಬಣ್ಣನವರೇ! ಅವರು ತೀರಿಹೋಗಿ ಸುಮಾರು ಇಪ್ಪತ್ತು ವರ್ಷವಾಯಿತಲ್ಲವೇ? ಅವರಿಗೆ ಒಬ್ಬಳೇ ಒಬ್ಬಳು ಮಗಳಿದ್ದಳು. ಆಕೆಯ ಹೆಸರು ಕಾವೇರಮ್ಮ ಎಂದು ಅಲ್ಲವೆ? ಆಕೆಯ ತಂದೆ ತೀರಿಹೋದ ಕಾಲಕ್ಕೆ ಆಕೆಗೆ ಇಪ್ಪತ್ತೆರಡು ವರ್ಷವಿರಬಹುದು' ಎಂದು ಕೃಷ್ಣದಾಸರು ಹೇಳಿದರು.

'ಹೌದು ಸ್ವಾಮಿ!' ಎಂದು ಕೃಷ್ಣಪ್ರಿಯನು ಬೆಪ್ಪಾಗಿ ಕೃಷ್ಣದಾಸರ ಮುಖವನ್ನು ನೋಡುತ್ತಾ, 'ನೀವು ಹೇಳಿದುದೆಲ್ಲಾ ನಿಜವೆ. ನಿಮಗೆ ನಮ್ಮ ತಾತ ಗುರುತುಂಟೆ?' ಎಂದನು.

'ಓಹೋ! ಆತ ನನ್ನ ಬಾಲ್ಯ ಸ್ನೇಹಿತ. ಮುಂದೆ ಹೇಳು.'

'ನಮ್ಮ ತಾತಂದಿರು ತನ್ನ ಸೋದರಮಾವನ ಮಗನಿಗೇ ತಮ್ಮ ಮಗಳನ್ನು ಕೊಟ್ಟರು. ತಾತ ತೀರಿಹೋಗಿ ಇಪ್ಪತ್ತು ವರ್ಷವಾಯಿತೆಂದು ನಮ್ಮ ತಾಯಿಯೂ ಹೇಳಿದ್ದಳು. ನಮ್ಮ ತಂದೆಗೂ ಅಷ್ಟೆ, ಅವರೊಬ್ಬರಲ್ಲದೆ ಬೇರೆಯವರಾರೂ ಅವರಿಗಿರಲಿಲ್ಲ. ಅವರು ತಂಜಾವೂರಿನ ತಾಲ್ಲೂಕ್ ಕಛೇರಿಯಲ್ಲೇ ಗುಮಾಸ್ತರಾಗಿದ್ದರು. ಹದಿನೈದು ರೂಪಾಯಿ ಸಂಬಳ ಬರುತ್ತಿತ್ತು. ಸಂಬಳವಲ್ಲದೆ ಅವರಿಗೆ ಬೇರೆ ಯಾವ ಆಸ್ತಿಯೂ ಇರಲಿಲ್ಲ. ನನ್ನ ಹನ್ನೆರಡನೆ ವರ್ಷದಲ್ಲೆ ಅವರಿಗೆ ದೊಡ್ಡಮ್ಮ ಬಂದು ಮೈಯೆಲ್ಲಾ ಊದಿಕೊಂಡು ತೀರಿಹೋದರು.' ಇಷ್ಟನ್ನು ಹೇಳಿ ಕೃಷ್ಣಪ್ರಿಯನು ತನ್ನ ಕತೆ ಹೇಳುವುದನ್ನು ನಿಲ್ಲಿಸಿದನು. ಕಣ್ಣೀರನ್ನು ಉಟ್ಟಿದ್ದ ಕೊಳಕು ಪಂಚೆಯಿಂದಲೇ ಅವನು ಒರೆಸಿಕೊಳ್ಳುತ್ತಿದ್ದನು.

'ಆಮೇಲೆ ನಿಮ್ಮ ಗತಿ?'

'ನಮ್ಮ ತಾಯಿಗೆ ಗಂಡನ ಕಡೆ ಯಾರೂ ಇಲ್ಲ. ತಂದೆಯ ಕಡೆಯೂ ಯಾರೂ ಇರಲಿಲ್ಲ. ನಮ್ಮ ತಾತ ತೀರಿಹೋದ ಮೇಲೆ ಅವರ ಆಸ್ತಿಯನ್ನೆಲ್ಲಾ ನಮ್ಮ ತಂದೆಯೇ ಖರ್ಚು ಮಾಡಿಬಿಟ್ಟಿದ್ದರು. ನಮ್ಮ ತಾಯಿಯೂ ಇದ

ಆಸ್ತಿಪಾಸ್ತಿಗಳನ್ನು ಮಾರಿ ನಮ್ಮ ತಂದೆಯ ಉತ್ತರ ಕ್ರಿಯೆಗಳನ್ನು ಮಾಡಿದಳು.'

'ನಿಮ್ಮ ಪಾಡು ಮುಂದಕ್ಕೆ ?'

'ನಮ್ಮ ತಾಯಿಗೆ ಮುಂದೆ ಏನು ಮಾಡಬೇಕೆಂದು ತೋಚಲೇ ಇಲ್ಲ. ಆಕೆಯ ಕೊರಳಿಗೆ ಆಗ ಹನ್ನೆರಡು ವರ್ಷದ ನಾನೊಬ್ಬ. ಯಾರ ಮನೆಯ ಲ್ಲಾದರೂ ಕೆಲಸ ಮಾಡಿಯಾದರೂ ನನ್ನನ್ನು ಸುಖವಾಗಿ ಸಾಕಬೇಕೆಂದು ಆಕೆಯ ಆಸೆ. ಕೊನೆಗೆ ನಮ್ಮ ಪಕ್ಕದ ಮನೆ ಶೇಷಶಾಸ್ತ್ರಿಗಳು ತಮ್ಮ ಸ್ನೇಹಿತರಾದ ಗೋಪಾಲಕೃಷ್ಣ ಭಾಗವತರ ಮನೆಯಲ್ಲಿ ಆಕೆಗೆ ಅಡಿಗೆ ಕೆಲಸ ಕೊಡಿಸಿದರು. ಭಾಗವತರು ಆಕೆಗೆ ತಿಂಗಳಿಗೆ ಐದು ರೂಪಾಯಿ ಕೊಡುತ್ತಿದ್ದರು.

'ಈ ಅಲ್ಪ ಜೀತದಿಂದ ನಾವಿದ್ದ ಮನೆಗೆ ಬಾಡಿಗೆ ಕೊಡುವುದೇ ಕಷ್ಟ ವಾಗಿತ್ತು. ಕೃಷ್ಣ ಭಾಗವತರಿಗೆ ಊರ ಬಳಿಯಿರುವ ಕಾವೇರೀ ತಡಿಯಲ್ಲಿ ಜಮೀನಿತ್ತು. ಆ ಜಮೀನಿನ ಒಂದಂಚಿನಲ್ಲಿ ಗುಡಿಸಲೊಂದನ್ನು ನಮಗಾಗಿ ಕಟ್ಟಿಸಿಕೊಟ್ಟರು. ನಮ್ಮ ತಾಯಿ ನನ್ನೊಬ್ಬನನ್ನೇ ಗುಡಿಸಿಲಿನಲ್ಲಿ ಬಿಡಲು ಧೈರ್ಯವಿಲ್ಲದೆ ಬೆಳಿಗ್ಗೆ ಆರು ಘಂಟೆಗೇನೇ ಅವಳ ಜತೆಯಲ್ಲಿಯೇ ಭಾಗ ವತರ ಮನೆಗೆ ಕರೆದುಕೊಂಡು ಹೋಗುತ್ತಿದ್ದಳು. ಆಕೆಗೆ ಭಯ, ನಾನೆಲ್ಲಿ ಮುಂದೆ ಹರಿಯುತ್ತಿದ್ದ ಕಾವೇರಿಯಲ್ಲಿಳಿಯುವೆನೋ ಎಂದು.

'ನನ್ನನ್ನು ಭಾಗವತರ ಮನೆ ಅಂಗಳದಲ್ಲಿ ಕುಳ್ಳಿರಿಸಿ ಆಕೆ ಮನೆಗೆಲಸ ಗಳನ್ನು ಮಾಡುತ್ತಿದ್ದಳು. ಭಾಗವತರಿಗೆ ವಿಶೇಷ ಸಂಸಾರವೇನೂ ಇಲ್ಲ. ಅವರೂ ಅವರ ಹೆಂಡತಿ ಇದ್ದ ಮಗ ತಿರುಚನಾಪಲ್ಲಿಯಲ್ಲಿ ಮೋಷ್ಟರಾಗಿದ್ದ. ಕೃಷ್ಣಭಾಗವತರು ಸುಪ್ರಸಿದ್ಧ ಸಂಗೀತಗಾರರು. ಅವರ ಮಗನಿಗೆ ಸಂಗೀತ ವೆಂದರೇನೇ ಆಗದು. ಕಬ್ಬಿನಲ್ಲಿ ಸೂಸಂಗಿ ಹುಟ್ಟಿತ್ತೆ, ಸ್ವಾಮಿ! ಅವ ರಿಬ್ಬರಿಗೂ ಸದಾ ಜಗಳ; ಆದ್ದರಿಂದ ಇಬ್ಬರೂ ಬೇರೆ ಬೇರೆಯಾದರಂತೆ.

'ನಾನು ನಿತ್ಯ ಭಾಗವತರ ಅಂಗಳದಲ್ಲಿ ಕುಳಿತಿರುತ್ತಿದ್ದೆ. ಆ ಅಂಗಳದ ಬಳಿಯಿರುವ ಕೊಠಡಿಯೇ ಭಾಗವತರದು. ಅವರು ಹಾಸಿಗೆಯಿಂದೆದ್ದೊಡ ನೆಯೇ ದೇವರ ನಾಮಗಳನ್ನು ಹಾಡುವುದು ಅವರ ವಾಡಿಕೆ. ಅವರ ಸಂಗೀತ ನನ್ನ ಮನವನ್ನು ಆಕರ್ಷಿಸಿತು. ನಿತ್ಯವೂ ಅಂಗಳದಲ್ಲಿ ತೂಕಡಿಸು

ತಿದ್ದವನಿಗೆ ಈ ರುಚಿ ಸಿಕ್ಕಿದಾಗಿನಿಂದ ಅವರ ಹಾಡಿಕೆಯ ಕಡೆಗೇ ಮನಸ್ಸು ಹೋಗುತ್ತಿತ್ತು. ಅವರು ಹಿಂದೆಲ್ಲಾ ತೆಲಗು ಮತ್ತು ತಮಿಳು ಹಾಡುಗಳನ್ನೇ ಹಾಡುತ್ತಿದ್ದರಂತೆ. ಒಮ್ಮೆ ಶ್ರೀಕೃಷ್ಣರಾಜರ ಒಡೆಯರ ಆಸ್ಥಾನದಲ್ಲಿ ಸಂಗೀತ ಪ್ರದರ್ಶನ ನಾಡಬೇಕೆಂದು ಮನಸ್ಸು ಬರಲು ಕೆಲವು ಕನ್ನಡ ಕೀರ್ತನೆಗಳನ್ನು ಕಲಿಯ ತೊಡಗಿದರಂತೆ. ಅದರಲ್ಲೂ ಅವರ ಹೃದಯವನ್ನು ಅಪಹರಿಸಿದ್ದು 'ನೀ ಮಾಯೆಯೊಳಗೊ'. ಅದನ್ನೇ ಶ್ರೀರಂಗಪಟ್ಟಣದಲ್ಲಿ ರಂಗನಾಥನ ಮುಂದೆ ಹಾಡಿ, ಅಲ್ಲಿಗೆ ಮಂಗಳಾರತಿಗಾಗಿ ಬಂದಿದ್ದು ಹಾಡನ್ನು ಕೇಳಿದ ಶ್ರೀಕೃಷ್ಣರಾಜ ಒಡೆಯರ ಪ್ರೀತಿಗೆ ಪಾತ್ರರಾದರಂತೆ. ಅಂದಿನಿಂದ ಅವರು ಪ್ರತಿದಿನವೂ ಬೆಳಗ್ಗೆ ಆ ದೇವರ ನಾಮವನ್ನೇ ಮೊದಲು ಹಾಡಿ, ಆ ಮೇಲೆ ಇನ್ನೂ ಕೆಲವನ್ನು ಹಾಡಲು ಪ್ರಾರಂಭಿಸಿದರಂತೆ.

'ಎಂಟು ಹತ್ತು ದಿನಗಳಗಲ್ಲೇ ಅವರು ಬೆಳಗಿನ ಹೊತ್ತು ಹಾಡುತ್ತಿದ್ದ ಮೂರು ನಾಲ್ಕು ಹಾಡುಗಳನ್ನು ಕಲಿತೆ. ನಿತ್ಯಾ ಮೊದಲು ಮೊದಲು ನನ್ನ ತಾಯಿಯನ್ನು ಗುಡಿಸಿಲಿಗೆ ಹೋಗೋಣವೆಂದು ಅವಸರಿಸುತ್ತಿದ್ದವನು ಅಂದಿನಿಂದ ಆಕೆಯೇ ಬಂದು, 'ಮನೆಗೆ ಹೋಗೋಣ ಬಾ' ಎನ್ನುವಂತೆ ಮಾಡಿದೆ. ನನಗೆ ಹೇಗಾದರೂ ಭಾಗವತರ ಹಾಡುಗಳನ್ನೆಲ್ಲಾ ಕೇಳಬೇಕೆಂಬ ಆಸೆ ಇತ್ತು.

'ಹೀಗೆ ಒಂದು ತಿಂಗಳು ಕಳೆಯಿತು. ದೀವಳಿಗೆ ಹಬ್ಬ ಬಂದಿತು. ನಮ್ಮ ತಾಯಿ ಅಂದು ರಾತ್ರಿ ಮೂರು ಘಂಟೆಗೆ ಭಾಗವತರ ಮನೆಗೆ ನನ್ನನ್ನು ಜತೆಯಲ್ಲಿಯೆ ಕರೆದುಕೊಂಡು ಬಂದಳು. ನಿತ್ಯದಂತೆಯೇ ನನ್ನನ್ನು ಅಂಗಳದಲ್ಲಿ ಕುಳ್ಳಿರಿಸಿ ತಾನು ಮನೆ ಕೆಲಸ ಮಾಡಲು ಹೊರಟಳು. ಅಂಗಳದಲ್ಲಿ ಸುಮ್ಮನೆ ಕುಳಿತಿದ್ದ ನನ್ನ ಮನಸ್ಸು ಎಲ್ಲೆಲ್ಲೋ ಅಲೆಯುತ್ತಿತ್ತು. ನನಗೆ ಗೊತ್ತಿಲ್ಲದಂತೆ ಹಾಡಿದೆ. ಸ್ವಲ್ಪ ಹೊತ್ತಾದಮೇಲೆ ಕಣ್ಣುಬಿಟ್ಟು ನೋಡುತ್ತೇನೆ, ಭಾಗವತರು ಎದುರಿಗೆ ನಿಂತಿದ್ದಾರೆ! 'ನನ್ನ ಕಂದ! ಏನು ಮುದ್ದಾಗಿ ಹಾಡುವಿಯೋ, ಕೃಷ್ಣ!' ಎಂದು ನನ್ನನ್ನು ತಬ್ಬಿಕೊಂಡು ಮುದ್ದಿಟ್ಟರು. ಅದೇ ಮೊದಲದಿನ ಅವರು ನನ್ನನ್ನು ಮಾತನಾಡಿಸಿದ್ದು. ಅವರು ನನ್ನ ಬಳಿ ಕುಳಿತು 'ಎಲ್ಲಿ ಮಗು! ಇನ್ನೊಂದು ಸಲ ಆ ಕೀರ್ತನೆಯನ್ನು ಹಾಡು' ಎಂದರು. ನಾನು ನಿರ್ಭಯವಾಗಿ ಹಾಡಿದೆ. 'ಮಗು!

ಈ ಕೀರ್ತನೆಯನ್ನು ನೀನು ನನಗಿಂತಲೂ ಸೊಗಸಾಗಿ ಹಾಡುತ್ತಿ. ಹಿಂದೆ ವ್ಯಾಸರು ಜೈಮಿನಿಗೆ ಹೇಳಿದರಂತೆ, 'ಜೈಮಿನಿ! ನಿನ್ನ ಅಶ್ವಮೇಧಪರ್ವವು ನನ್ನದಕ್ಕಿಂತಲೂ ಬಹಳ ಚೆನ್ನಾಗಿದೆ' ಎಂದು. ಆ ಮಾತನ್ನೇ ನಾನು ನಿನಗೂ ಹೇಳುತ್ತೇನೆ. ಆ ನಿರ್ಭಾಗ್ಯನಿಗೆ ಬದಲಾಗಿ ನೀನಾದರೂ ನನ್ನ ಹೊಟ್ಟೆಯಲ್ಲಿ ಹುಟ್ಟಬಾರದಾಗಿತ್ತೆ? ಎಂದರು.'

'ಅಂದಿನಿಂದ ಭಾಗವತರು ಸಂಗೀತ ಹೇಳಿಕೊಡಲು ಪ್ರಾರಂಭಿಸಿರ ಬಹುದು' ಎಂದು ಕೃಷ್ಣದಾಸರು ಕುತೂಹಲದಿಂದ ಕೃಷ್ಣಪ್ರಿಯನನ್ನು ಕೇಳಿದರು.

'ಹೌದು ಸ್ವಾಮಿ, ಆ ತಕ್ಷಣವೇ ನಮ್ಮ ತಾಯಿಯನ್ನು ಕರೆದು 'ನಿಮ್ಮ ಮಗ ಬಹಳ ಸೊಗಸಾಗಿ ಹಾಡುತ್ತಾನೆ, ಕಾವೇರಮ್ಮಾ! ಇನ್ನು ಮೇಲೆ ನೀವಿಬ್ಬರೂ ನನ್ನ ಮನೆಯಲ್ಲಿಯೇ ಇದ್ದು ಬಿಡಿ! ಎಂದು ಹೇಳಿದರು!

'ಅದಕ್ಕೆ ನಿಮ್ಮ ತಾಯಿ ಏನು ಹೇಳಿದರು?'

'ಸ್ವಾಮಿ, ನಾನು ನಿಮ್ಮ ಮನೆಯಲ್ಲಿ ಕೆಲಸ ಮಾಡಿಕೊಂಡಿರುವುದಕ್ಕೇ ಜನರೆಲ್ಲಾ ಏನೇನೋ ಅಂದುಕೊಳ್ಳುವರು, ಹಾಳು ದೇವರು ನಮ್ಮಂಥಾ ಭಿಕಾರಿಗಳಿಗೆ ಏಕೆ ರೂಪು ಕೊಟ್ಟಿರುವನೋ' ಎಂದು ಆಕೆಯು ಕಣ್ಣೀರು ಸುರಿಸಿದಳು.

'ನಿಮ್ಮ ಮಗನನ್ನಾದರೂ ನನ್ನ ಬಳಿಯಲ್ಲೇ ಬಿಟ್ಟಿರಿ. ನೀವು ಬೇಕಾ ದರೆ ಆಗಾಗ ಗುಡಿಸಿಲಿಗೆ ಹೋಗಿ' ಎಂದು ಭಾಗವತರು ನಮ್ಮ ತಾಯಿಗೆ ಹೇಳಿದರು. ಮುಂದೆ ಮಗ ಅಭಿವೃದ್ಧಿಗೆ ಬರುತ್ತಾನೆಂದುಕೊಂಡು ನನ್ನನ್ನು ಒಂದು ನಿಮಿಷವೂ ಬಿಟ್ಟಿರದೆ ಆಕೆ ಭಾಗವತರ ಬಳಿ ಬಿಟ್ಟಳು. ಭಾಗವತರು ನನಗೆ ಕ್ರಮವಾಗಿ ಸಂಗೀತ ಅಭ್ಯಾಸ ಮಾಡಿಸಿದರು. ಅವರು ಹೋಗು ತ್ತಿದ್ದ ಸಂಗೀತ ಕಚೇರಿಗಳಿಗೆಲ್ಲಾ ನನ್ನನ್ನು ಕರೆದುಕೊಂಡು ಹೋಗು ತ್ತಿದ್ದರು. ಹೀಗೆಯೇ ಮೂರು ವರ್ಷ ಕಳೆಯಿತು. ದೇವನಿಗೆ ನಮ್ಮನ್ನು ನೋಡಿ ಸಹನೆ ಬರಲಿಲ್ಲ! ಭಾಗವತರನ್ನು ಕೊಂಡೊಯ್ದನು!' ಎಂದು ಹೇಳಿ ಕಣ್ಣೀರು ಸುರಿಸಲು ಪ್ರಾರಂಭಿಸಿದನು.

'ಆಮೇಲೆ ನಿನ್ನ ಮತ್ತು ನಿನ್ನ ತಾಯಿಯ ಗತಿ?'

'ಇರುವ ಮನೆಯನ್ನೂ ಹೊಲಗದ್ದೆಗಳನ್ನೂ ಮಾರಿ, ತಮ್ಮ ತಾಯಿಯನ್ನು ಕರೆದುಕೊಂಡು ಭಾಗವತರ ಮಗ ಹೊರಟುಹೋದ. ಹೊಲವನ್ನು ಕೊಂಡವರು ನಮ್ಮ ಗತಿಯನ್ನು ಕಂಡು, 'ನೀವಿರುವ ತನಕ ಈ ಗುಡಿಸಿಲಿನಲ್ಲೇ ಇರಬಹುದು ' ಎಂದರು. ನಮ್ಮ ತಾಯಿ ಎಲ್ಲೆಲ್ಲೋ ಕೆಲಸ ಹುಡುಕಿದಳು. ನಿಷ್ಫಲ. ತಾನು ಭಾಗವತರ ಮನೆಯಲ್ಲಿ ಸಂಪಾದಿಸಿದುದನ್ನೆಲ್ಲಾ ಖರ್ಚು ಮಾಡುತ್ತಾ ಬಂದಳು. ಆರು ತಿಂಗಳಿಗೆ ಎಲ್ಲಾ ಮುಗಿಯಿತು. ಆಮೇಲೆ ಆಕೆಯು ಒಂದು ತಿಂಗಳು ಹೊರಗೆ ಹೋಗಿ ತಿರಿದು ತಂದು ನನಗೆ ಕೊಡಲು ಪ್ರಾರಂಭಿಸಿದಳು. ನನ್ನನ್ನು ಒಂದು ಕೆಲಸಕ್ಕೂ ಆಕೆ ಹೊರಗೆ ಕಳುಹಿಸುತ್ತಿರಲೇ ಇರಲಿಲ್ಲ. 'ಕಂದಾ ! ನೀನು ಕಷ್ಟಪಡುವುದನ್ನು ಕಣ್ಣಾರೆ ನೋಡಲಾರೆ' ಎನ್ನುತ್ತಿದ್ದಳು.

ತಂದ ತಿಂಡಿಯನ್ನೆಲ್ಲಾ ನನಗೇ ಕೊಡುತ್ತಿದ್ದಳು. 'ನಿನಗೂ ಅಮ್ಮಾ' ಎಂದು ನಾನು ಊಟಮಾಡುವಲ್ಲಿ ಕೇಳುತ್ತಿದ್ದರೆ 'ನನ್ನ ಊಟ ಆಗಲೇ ಆಯಿತು. ನೀನು ತಿನ್ನು ' ಎನ್ನುತ್ತಿದ್ದಳು. ನನಗೇನೋ ಸಂಶಯ ಅವಳು ಉಪವಾಸವಾಗಿಯೇ ಇರುವಳೆಂದು. ಆದರೂ ಏನು ಮಾಡಲಿ; ಏನಾದರೂ ಹೇಳಿದರೆ ಕಣ್ಣೀರು ಹಾಕುತ್ತಿದ್ದಳು. ಆದುದರಿಂದ ಸುಮ್ಮನಿರುತ್ತಿದ್ದೆ.

'ಹೀಗಿಯೇ ಕೆಲವು ದಿನಗಳು ಕಳೆಯಲು ಆಕೆಗೆ ಕ್ಷಯಕ್ಕೆ ಪ್ರಾರಂಭವಾಯಿತು. ಅವಳು ಹೊರಗೆ ಹೋಗುವುದೂ ನಿಂತಿತು. ನಾನೇ ಏನಾದರೂ ತಿರಿದು ತರಬೇಕಾಗಿತ್ತು. ಆ ಊರಲ್ಲಿ ಎಲ್ಲಾ ಸಂಗೀತಗಾರರೇ. ಅಲ್ಲಿ ಸಂಗೀತದಿಂದ ಸಂಪಾದಿಸುವ ಚೈತನ್ಯ ನನಗಿಲ್ಲ. ಯಾರಾದರೂ ಹಾಡುತ್ತಾ ಭಿಕ್ಷಕ್ಕೆ ಹೋದರೆ ಅವರಿಗೆ ಭಿಕ್ಷ ದೊರೆಯುವುದೂ ಆ ಊರಲ್ಲಿ ಕಷ್ಟ ! ಎಲ್ಲಾ ಸಂಗೀತಗಾರರೂ ಅಸೂಯಾಪರರು, ಸ್ವಾಮಿ ! ನನ್ನ ಕುಗ್ಗಿದ ಮುಖ ನೋಡಿ ಕೆಲವರು ಭಿಕ್ಷಹಾಕುತ್ತಿದ್ದರು. ತಂದ ಭಿಕ್ಷ ಒಬ್ಬರ ಹೊಟ್ಟೆತುಂಬ ಆಗುವುದೂ ಕಷ್ಟಕ್ಕೆ ಬಂತು. ಅದನ್ನು ತಂದರೂ ಅದರಲ್ಲಿ ಮುಕ್ಕಾಲನ್ನೆಲ್ಲಾ ನಾನೇ ತಿನ್ನುವವರೆಗೂ ನನ್ನ ತಾಯಿ ಒಂದು ತೃಣವನ್ನೂ ಮುಟ್ಟುತ್ತಿರಲಿಲ್ಲ. ಆಕೆಯ ಇಷ್ಟದಂತೆಯೇ ನಾನೇ ಭಿಕ್ಷದ ಬಹುಭಾಗವನ್ನು ತಿಂದು ಆಕೆಗೆ ಸ್ವಲ್ಪವೇ ಕೊಡುತ್ತಿದ್ದೆ.

'ಕೆಲವು ದಿನಗಳಾದಮೇಲೆ ಕಾವೇರಿಯ ಪ್ರವಾಹವು ಬಂತು. ಹಾಕಿದ್ದ ಪೈರುಗಳನ್ನೆಲ್ಲಾ ಕೊಚ್ಚಿಕೊಂಡು ಹೋಯಿತು. ಊರಿನವರೆಲ್ಲಾ ಭಯಪಟ್ಟು, 'ಮುಂದೆ ಕ್ಷಾಮ ಬರುತ್ತೆ ಎನ್ನುವುದಕ್ಕೆ ಸೂಚನೆ ಇದು!' ಎನ್ನುತ್ತ ಭಿಕ್ಷ ಹಾಕುವುದನ್ನೂ ನಿಲ್ಲಿಸಿದರು.'

'ನಿಮ್ಮ ಪಾಡು!'

'ಮೂರು ದಿನ ನಾವಿಬ್ಬರೂ ಉಪವಾಸ. ಆಮೇಲೆ ನಾನೇ ಎಲ್ಲಾದರೂ ಒಂದಷ್ಟು ಭಿಕ್ಷಬೇಡಿ ತರೋಣವೆಂದು ಹೊರಟೆ. ನಮ್ಮ ಗುಡಿಸಿಲಿಗೆ ಸ್ವಲ್ಪ ದೂರದಲ್ಲಿದ್ದ ಮತ್ತೊಂದು ಗುಡಿಸಿಲ ಬಳಿ ಹೋದೆ. ಅಲ್ಲಿಗೆ ಹೋಗುವ ವೇಳೆಗೆ ನನ್ನ ಶಕ್ತಿ ಉಡುಗಿತು. ಆಯಾಸ, ಉಪವಾಸ ಮತ್ತು ನೀರಡಿಕೆಯಿಂದ 'ಅಮ್ಮಾ' ಎನ್ನುತ್ತಾ ಕೆಳಗೆ ಬಿದ್ದೆ. ಆ ಗುಡಿಸಿಲಿನಲ್ಲಿದ್ದ ಮುದುಕಿಯು ಬಂದು ನನ್ನ ಸ್ಥಿತಿಯನ್ನು ನೋಡಿ ಕನಿಕರದಿಂದ ಕೈಹಿಡಿದುಕೊಂಡು ಗುಡಿಸಿಲಿನೊಳಕ್ಕೆ ಕರೆದುಕೊಂಡುಹೋಗಿ, ತಾನು ಮಾಡಿಟ್ಟಿದ್ದ ಅಡಿಗೆಯನ್ನು ಬಡಿಸಿದಳು. ನಾನು ಒಂದು ಹಾಸಿದ್ದ ಚಾಪೆಯ ಮೇಲೆ ಕುಳಿತೆ. ಹಾಗೆಯೇ ನಿದ್ದೆ ಬಂದಿತು. ಮಲಗಿದೆ. ನನ್ನ ತಾಯಿ ಕಾವೇರಿಯಲ್ಲಿ ಕೊಚ್ಚಿಕೊಂಡು ಹೋಗುತ್ತಿದ್ದಂತೆ ಕನಸಾಯಿತು. ಎದ್ದು ಆಶ್ಚರ್ಯದಿಂದ ಸುತ್ತುಲೂ ನೋಡಿದೆ. ಮುದಕಿಯು 'ಏನಪ್ಪಾ?' ಎಂದಳು.

'ನನ್ನ ಸ್ಥಿತಿಯನ್ನು ನೋಡಿ ನನಗೇ ಆಶ್ಚರ್ಯವಾಯಿತು. 'ಅಮ್ಮಾ, ನೀನು ನನ್ನ ಪ್ರಾಣವನ್ನೇನೋ ಕಾಪಾಡಿದೆ. ನನ್ನ ತಾಯಿ ಕಾವೇರೀ ತಡಿಯ ಗುಡಿಸಿಲಿನಲ್ಲಿ ಹಸಿವಿನಿಂದ ಸಾಯುತ್ತಿರುವಳು' ಎಂದೆ. ಮುದುಕಿಯ ಹೃದಯ ಕರಗಿತು. ಮರುಮಾತನ್ನು ಹೇಳದೆ ಮಿಕ್ಕಿದ್ದ ಅನ್ನವನ್ನು ನನ್ನ ಸಂಚಿಯಲ್ಲಿ ಹಾಕಿದರು.

'ಗುಡಿಸಿಲಿಗೆ ಬಂದೆ, ನನ್ನ ತಾಯಿ ತನ್ನ ಕಡೆಗಾಲದಲ್ಲಿದ್ದಳು. ನನ್ನನ್ನು ನೋಡುತ್ತಲೇ 'ಕಂದಾ! ಏನಾದೆಯೋ ಎಂದಿದ್ದೆ!' ಎಂದಳು. 'ಅಮ್ಮಾ, ತೆಗೆದುಕೊ ಎಂದು ತಂದಿದ್ದ ಅನ್ನವನ್ನು ಅವಳ ಮುಂದಿಟ್ಟೆ. ಅವಳ ಕಣ್ಣುಗಳಿಂದ ನೀರು ಹರಿಯಿತು. 'ಮಗೂ, ಮಹಾರಾಜಾ ಮುಮ್ಮಡಿ ಕೃಷ್ಣರಾಜ ಒಡೆಯರಿಂದ ಬಾಲ್ಯದಲ್ಲಿ ಪೋಷಿಸಲ್ಪಟ್ಟ ನನಗೆ ಈ ಭಿಕ್ಷಾನ್ನ ದೊರೆಯುವುದೂ ಕಷ್ಟಕ್ಕೆ ಬಂತು. ಕೃಷ್ಣಾ! ನಾನು ಈ ರಾತ್ರಿ ಇದ್ದರೆ ಜಾಸ್ತಿ.

ನಿನ್ನ ಪಾಡೇನೋ' ಎಂದು ನನ್ನ ಕೈಹಿಡಿದುಕೊಂಡು ಅಳುವುದಕ್ಕೆ ಪ್ರಾರಂಭಿಸಿದಳು.

'ಹೂ! ಮುಂದೆ' ಎಂದು ಕೃಷ್ಣದಾಸರು ಕೃಷ್ಣಪ್ರಿಯನಿಗೆ ತಿಳಿಯದಂತೆ ತಮ್ಮ ಕಣ್ಣನ್ನೊರೆಸಿಕೊಂಡು ಹೇಳಿದರು.

'ಅವಳು ಅಂದು ಊಟಮಾಡಲೇ ಇಲ್ಲ, ನನ್ನನ್ನೇ ಬಲಾತ್ಕಾರದಿಂದ ತಿನ್ನುವಂತೆ ಮಾಡಿದಳು.

'ರಾತ್ರಿಯಾಯಿತು. ಕಗ್ಗತ್ತಲು. ಪಕ್ಕದಲ್ಲಿ ಹರಿಯುತ್ತಿದ್ದ ಕಾವೇರಿಯ ಕಲರವವಲ್ಲದೆ ಮತ್ತೆ ಯಾವ ಶಬ್ದವೂ ಇಲ್ಲ. ನನ್ನ ತಾಯಿ ಎಡಗಡೆ ಬಲಗಡೆ ಹೊರಳಲು ಪ್ರಾರಂಭಿಸಿದಳು. ನನ್ನ ಕೈಹಿಡಿದುಕೊಂಡು 'ಕಂದಾ! ನಿನ್ನನ್ನು ಈ ಊರಲ್ಲಿ ಕೇಳುವವರೇ ಇಲ್ಲ. ಹಿಂದೆ ಸುಖದಿಂದ ಬೆಳೆದ ಮೈಸೂರಲ್ಲಿ ಈ ಹಾಳು ಮುಖವನ್ನು ಹೇಗೆ ತೋರಿಸಲಿ ಎಂದು ಬಹಳ ದಿನಗಳಿಂದ ಸುಮ್ಮನಿದ್ದೆ. ಮಗೂ, ನಾನು ಚಿಕ್ಕವಳಾಗಿರುವಲ್ಲಿ ಕೃಷ್ಣರಾಜ ಒಡೆಯರು ನಮ್ಮ ಮನೆಗೆ ಬಂದಾಗಲೆಲ್ಲ ನನಗೆ ಹಣ್ಣು ಹಂಪಲುಗಳನ್ನು ತರುತ್ತಿದ್ದರು. ನನ್ನನ್ನು ತಮ್ಮ ಮಗಳಂತೆ ಸಾಕಿ ಸಲಹಿದರು. ಮಹಾತ್ಮರು. ನೀನೂ ನಾಳೆಯೇ ಈ ಊರನ್ನು ಬಿಟ್ಟು ಹೊರಡು. ನಾನು ರಾತ್ರಿ ಇದ್ದರೆ ಜಾಸ್ತಿ. ನನಗೆ ಒಂದು ಕಡೆಯ ಸೇವೆಯನ್ನು ಮಾಡುವಿಯಾ' ಎಂದು ದೈನ್ಯದಿಂದ ಕೇಳಿದಳು. 'ಯಾವುದನ್ನಮ್ಮಾ!' ಎಂದೆ. 'ಕೃಷ್ಣಾ ನಮ್ಮ ತಂದೆ ಮಾಘಸ್ನಾನಮಾಡಿ ಕಾವೇರಿಯ ವರದಿಂದ ನನ್ನನ್ನು ಪಡೆದರು. ಅದಕ್ಕೇ ನನಗೆ ಕಾವೇರಿಯೆಂದು ಹೆಸರಿಟ್ಟರು. ನಾನು ಸತ್ತ ಮೇಲೂ ನನ್ನ ದೇಹವನ್ನು ಮುಂದೆ ಹರಿಯುವ ಕಾವೇರಿಯಲ್ಲಿ ಎಳೆದು ಬಿಡು' ಎಂದಳು.

'ಮುಂದೆ ಮಾತನಾಡುವುದು ಆಕೆಗೆ ನಿಂತಿತು. ಉರಿಯುತ್ತಿದ್ದ ದೀಪದ ಮುಂದೆ ನಾನು ಕುಳಿತಿದ್ದೆ. ರಾತ್ರಿ ಒಂದು ಗಂಟೆಯಿರಬಹುದು. ನನ್ನ ತೂಕಡಿಕೆ ಸ್ವಲ್ಪ ತೀರಿದಮೇಲೆ ತಾಯಿಯನ್ನು ಮುಟ್ಟಿ ನೋಡಿದೆ. ಮೈಯೆಲ್ಲಾ ತಣ್ಣಗಿತ್ತು!' ಎನ್ನುತ್ತಾ ಕೃಷ್ಣಪ್ರಿಯನು ಹಿಂದಿನ ದೃಶ್ಯಗಳನ್ನು ನೆನೆಯುತ್ತಾ, ಎಳೆಮಗುವಿನಂತೆ ಅಳಲು ಪ್ರಾರಂಭಿಸಿದನು.

'ಮಗೂ, ಆ ರಾತ್ರಿ ಆವೇಳೆಯಲ್ಲಿ ಮೃತಿಸಿದ ನಿಮ್ಮ ತಾಯಿಯೊಡನೆ ನೀನೊಬ್ಬನೇ ಇದ್ದೆಯಾ?'

'ಗುಡಿಸಿಲಿನೊಳಗೆ ಇದ್ದುದು ನಾನೊಬ್ಬನೇ, ಸ್ವಾಮಿ. ಬಹಳ ಹೊತ್ತು ಅತ್ತೆ. ನನ್ನ ಅಳುವನ್ನು ತಾನೇ ಆಗ ಕೇಳುವವರಾರು? ಆಮೇಲೆ ನನ್ನ ಮನಸ್ಸನ್ನು ಗಟ್ಟಿಮಾಡಿಕೊಂಡೆ. ನನ್ನ ತಾಯಿ ತನ್ನ ಕಡೆಗಾಲದಲ್ಲಿ ಹೇಳಿದ್ದ ಮಾತೆಲ್ಲಾ ಕಣ್ಣುಮುಂದೆ ನಿಂತಂತಾಯಿತು. ಅವಳ ಭಾರವಿಲ್ಲದ ದೇಹವನ್ನು ಹೆಗಲಮೇಲೆ ಎತ್ತಿಕೊಂಡು ಹರಿಯುತ್ತಿದ್ದ ಕಾವೇರಿಯ ಬಳಿಗೆ ಹೋದೆ.

'ಚಂದ್ರನು ಉದಯಿಸಿ ಸ್ವಲ್ಪ ಹೊತ್ತಾಗಿತ್ತು. ತುಂಬಿತುಳುಕುತ್ತಿದ್ದ ಕಾವೇರೀಮಹಾತಾಯಿಯು ಮರಗಳ ನಡುವೆ ನಿಧಾನವಾಗಿ ಹರಿಯು ತ್ತಿದ್ದಳು. ಚಂದ್ರಕಿರಣಗಳು ತಡಿಯಲ್ಲಿದ್ದ ಮರಗಳಿಂದ ತೂರಿಬಂದು ಬಿದ್ದೇಳುತ್ತಿದ್ದ ಅಲೆಗಳೊಡನೆ ಕುಣಿಯುತ್ತಿದ್ದುವು. ಎಲ್ಲೆಲ್ಲೂ ನಿಶ್ಶಬ್ದ! ಮೆಲ್ಲನೆ ನನ್ನ ತಾಯಿಯ ದೇಹವನ್ನು ನೀರಿನ ಮೇಲಿಟ್ಟೆ. ಶಾಂತವಾದ ಪ್ರವಾಹದಲ್ಲಿ ಅದು ತೇಲಿಕೊಂಡು ಹೋಯಿತು. ಕಣ್ಣಿಗೆ ಮರೆಯಾಗುವ ತನಕ ನೋಡಿದೆ.'

'ಆಮೇಲೆ?'

'ಅಂದೇ ಆ ಊರನ್ನು ಬಿಟ್ಟೆ. ಊರು ಊರು ಅಲೆಯುತ್ತಾ ಮೈಸೂರಿನ ಕಡೆ ಪ್ರಯಾಣ ಬೆಳಸಿದೆ. ದಾರಿಯಲ್ಲೆಲ್ಲಾ ಕಷ್ಟಪರಂಪರೆ ಗಳು. ಕೆಲವು ಕಡೆ ಭಿಕ್ಷ ದೊರೆಯಿತು. ಅನೇಕ ದಿನ ಉಪವಾಸ.

'ನಿನ್ನೆ ಬೆಳಿಗ್ಗೇ ತಾನೇ ಅರಮನೆಯ ಬಳಿಗೆ ಬಂದೆ. ನನ್ನ ಮನಸ್ಸು ಆಗ ಕೃಷ್ಣಪ್ರಭುಗಳನ್ನು ನೋಡಿಯೇ ನೋಡುವೆನೆನ್ನುತ್ತಿತ್ತು. ಅರ ಮನೆಯ ಬಳಿಗೆ ಹೋದಾಗ ಅಲ್ಲಿ ಒಬ್ಬ ಇಂಗ್ಲಿಷರವ ನಿಂತಿದ್ದ.'

'ಬಹುಶಃ ಆಗ ಬೆಳಿಗ್ಗೆ ಎಂಟು ಗಂಟೆಯಿರಬಹುದಲ್ಲವೆ?' ಎಂದು ಕೃಷ್ಣದಾಸರು ಕೃಷ್ಣಪ್ರಿಯನನ್ನು ಕೇಳಿದರು.

'ಹೌದು ಸ್ವಾಮಿ; ಆಗ ಸುಮಾರು ಎಂಟು ಗಂಟೆಯಿರಬಹುದು. ನನ್ನನ್ನು ನೋಡಿದೊಡನೆಯೇ ಆತ ತನ್ನ ಬಳಿ ಇದ್ದ ಆಳನ್ನು ನನ್ನ ಹತ್ತಿ ರಕ್ಕೆ ಕಳುಹಿಸಿದ. ಆಳು 'ನೀನು ಯಾರನ್ನು ನೋಡಲು ಬಂದೆ?' ಎಂದು

ಗದರಿಸಿ ನನ್ನನ್ನು ಕೇಳಿದ. 'ಶ್ರೀ ಕೃಷ್ಣರಾಜ ಒಡೆಯರನ್ನು' ಎಂದೆ. ಆ ಮಾತು ಕಿವಿಗೆ ಬಿದ್ದೊಡನೆಯೇ ಆ ಇಂಗ್ಲಿಷನವ ಉರಿದು ಬಿದ್ದು, 'ಅವರನ್ನು ನೋಡಲು ಬರುವವರೆಲ್ಲಾ ಸರಿಯೆ! ಇವನನ್ನು ನೋಡಿಸಲೂ ಒಂದು ಸಾವಿರವನ್ನು ಹಾಗೆ ಎಸೆಯುವರು' ಎಂದು ಗರ್ಜಿಸಿದ. ನನಗೆ ಭಾಗವತರು ಸ್ವಲ್ಪ ಮಟ್ಟಿಗೆ ಇಂಗ್ಲೀಷನ್ನು ಕಲಿಸಿದ್ದರು. ಆದರಿಂದ ಈ ಮಾತುಗಳೆಲ್ಲಾ ಅರ್ಥವಾದುವು. ಇಂಗ್ಲಿಷರವನು ಅಷ್ಟು ಹೇಳಿದ್ದೇ ಸಾಲದೆ 'ಅವರು ಇಲ್ಲವೆಂದು ಹೇಳಿ ಅವನನ್ನು ತಳ್ಳು' ಎಂದು ಆಳಿಗೆ ಹೇಳಿದ. ಆಳು ನನ್ನನ್ನು ಅರಮನೆಯ ಮುಂದಿನಿಂದ ತಳ್ಳಲು ಬಂದ. ನಾನೇ ಆ ಸ್ಥಳವನ್ನು ಬಿಟ್ಟು ಹೊರಟೆ.'

'ಆ ಇಂಗ್ಲಿಷರವನ ಹೆಸರೇನು ಬಲ್ಲೆಯಾ?'

'ಸಾಂಡರ್ಸ್ ಎಂದು ಆ ಆಳು ಹೇಳಿದಂತೆ ನೆನಪು'

'ಹೌದು. ಆತನು ಸ್ವಲ್ಪ ಮುಂಗೋಪಿ. ಈಗ ಆತನೇ ಈ ರಾಜ್ಯಕ್ಕೆ ಒಡೆಯ—ಕಮೀಷನರ್!'

'ರಾಜ್ಯಾಧಿಪತಿಗಳು ಕೃಷ್ಣಪ್ರಭುಗಳಲ್ಲವೆ, ಸ್ವಾಮಿ!' ಎಂದು ಕೃಷ್ಣಪ್ರಿಯ ಆಶ್ಚರ್ಯದಿಂದ ಕೇಳಿದನು. ಪಾಪ! ಆತನಿಗೇನು ಗೊತ್ತು ಮೈಸೂರಿನ ವಿಷಯ.

'ಅಲ್ಲ' ಎಂದು ಕೃಷ್ಣದಾಸರು ನಿಟ್ಟುಸಿರುಬಿಡುತ್ತಾ ಕೃಷ್ಣಪ್ರಿಯನಿಗೆ ಹೇಳಿ, 'ಮುಂದೇನು ಮಾಡಿದೆ ಹೇಳು?' ಎಂದರು.

'ಹಿಂದೆ ನಮ್ಮ ತಾಯಿ 'ಶ್ರೀಕೃಷ್ಣಪ್ರಭುಗಳು ಮಹಾತ್ಮರು; ಆರ್ತರ ಅರಿಕೆಗಳನ್ನು ಪಾಲಿಸುವವರು; ಸಂಗೀತಪ್ರಿಯರು ಮತ್ತು ಚಾಮುಂಡಾಂಬಿಕೆಯ ಭಕ್ತರು. ನಿತ್ಯ ಅರಣೋದಯಕ್ಕೆ ಮುಂಚೆಯೇ ಚಾಮುಂಡಿಯ ದರ್ಶನಕ್ಕೆ ಹೋಗುವರು' ಎಂದು ಆಗಾಗ ಹೇಳುತ್ತಿದ್ದಳು. ಅದು ನೆನಪಿಗೆ ಬಂದಿತು. ನಿನ್ನೆ ಸಂಜೆ ಬೆಟ್ಟ ಹತ್ತಿದೆ. ಬಸವಣ್ಣನ ಬಳಿಗೆ ಬರುವ ವೇಳೆಗೆ ಸೂರ್ಯಾಸ್ತಮಯವಾಯಿತು. ನನಗೂ ಸುಸ್ತಾಯಿತು. ಆಗ ನನಗೆ ಹಸಿವು ಬಾಯಾರಿಕೆ. ಮುಂದಿರುವ ಬಸವಣ್ಣನ ಮುಖ ನೋಡಿ ಅವೆಲ್ಲಾ ಸ್ವಲ್ಪ ಮರೆತವು. ಅಲ್ಲಿಂದ ಈ ಕಡೆ ನೋಡಿದೆ. ಸಂಜೆಯ ಪ್ರಕೃತಿ ಸೌಂದರ್ಯ ನನ್ನನ್ನಾಕರ್ಷಿಸಿತು. ಇನ್ನೂ ಚೆನ್ನಾಗಿ ನೋಡೋಣ

ವೆಂದು ಈ ಗುಡ್ಡಕ್ಕೆ ಬಂದೆ. ಪಕ್ಕದ ಮರದಲ್ಲಿದ್ದ ಸೀಬೆಯಕಾಯಿಗಳನ್ನು ಕಿತ್ತು ತಿಂದೆ. ಗುಡ್ಡದ ಮೇಲೆ ಕುಳಿತಿರುವಲ್ಲಿ ಬಹಳ ಆಯಾಸದಿಂದ ಬಳಲಿದ್ದುದರಿಂದಲೂ, ಹಸಿವು ಸ್ವಲ್ಪ ಶಮನವಾಗಿದ್ದುದರಿಂದಲೂ ಹಾಗೆಯೇ ನಿದ್ದೆ ಬಂದಿತು. ಮಲಗಿದೆ. ನಿಮ್ಮನ್ನು ನೋಡಲು ಸ್ವಲ್ಪ ಹೊತ್ತು ಮುಂದೆ ತಾನೇ ಎಚ್ಚರವಾಯಿತು. 'ಅಯ್ಯೋ ! ಇನ್ನು ಬೇಗ ಏಳಲಾಗಲಿಲ್ಲವಲ್ಲ. ಇಂದೂ ಶ್ರೀಕೃಷ್ಣಪ್ರಭುವನ್ನು ನೋಡುವ ಪುಣ್ಯ ಲಭಿಸಲಿಲ್ಲವಲ್ಲಾ !' ಎಂದುಕೊಂಡೆ. ಮುಂದೆ ಉದಯಿಸುತ್ತಿದ್ದ ಸೂರ್ಯದೇವನ ಕಡೆ ನೋಡಿದೊಡನೆಯೇ ಅವನ ಮಹಿಮೆಯನ್ನು ಕೊಂಡಾಡಿದ್ದ ದಾಸರ ಕೀರ್ತನೆ ನನ್ನ ಮುಂದೆ ನಿಂತಂತಾಗಲು ಹಾಡಿದೆ' ಎಂದು ತನ್ನ ಕತೆಯನ್ನು ಕೃಷ್ಣಪ್ರಿಯ ಮುಗಿಸಿದನು.

'ಮಗೂ, ಕೃಷ್ಣಪ್ರಭುವಿಗೆ ನಿನ್ನ ವಿಚಾರವನ್ನೆಲ್ಲಾ ಹೇಳುತ್ತೇನೆ. ಅವರು ಬೆಟ್ಟಕ್ಕೆ ಬಂದು ಎರಡು ದಿನಗಳಾದುವು. ಇನ್ನೂ ಮೈಸೂರಿಗೆ ಹೋಗಿಲ್ಲ. ನಾನು ಹೋಗಿ ನಿನ್ನ ವಿಷಯವನ್ನೆಲ್ಲಾ ಅವರಿಗೆ ತಿಳಿಸುತ್ತೇನೆ. ಖಂಡಿತವಾಗಿಯೂ ಅವರು ನಿನ್ನನ್ನು ಆದರಿಸುವರು.

'ನಿಜವಾಗಿಯೂ ಹೇಳುವಿರಾ ಸ್ವಾಮಿ ?' ಎಂದು ಕೃಷ್ಣಪ್ರಿಯನು ಕೃಷ್ಣದಾಸರ ಕೈಹಿಡಿದುಕೊಂಡು ದೈನ್ಯದಿಂದ ಕೇಳಿದನು.

'ನಿಜವಾಗಿಯೂ ಹೇಳುತ್ತೇನೆ, ಕಂದಾ' ಎಂದು ಕೃಷ್ಣದಾಸರು ಹೇಳಿ ಕೃಷ್ಣಪ್ರಿಯನನ್ನೇ ನೋಡುತ್ತಾ ಹೊರಟುಹೋದರು.

ಸ್ವಲ್ಪ ಹೊತ್ತಾದ ಮೇಲೆ ಅರಮನೆಯ ಭಕ್ಷಿಗಳು ಆಳೊಬ್ಬನ ಕೈಯಲ್ಲಿ ಬಟ್ಟೆಯೊಂದರಿಂದ ಮುಚ್ಚಲ್ಪಟ್ಟಿದ್ದ ತಟ್ಟೆಯನ್ನು ತೆಗೆಸಿಕೊಂಡು ಕೃಷ್ಣಪ್ರಿಯನ ಒಳಗೆ ಬಂದು, 'ಕೃಷ್ಣಪ್ರಿಯ ! ಈ ಬಹುಮಾನಗಳನ್ನು ಮಹಾರಾಜರು ಕಳುಹಿಸಿರುವರು. ತೆಗೆದುಕೋ' ಎಂದು ತಟ್ಟೆಯನ್ನು ಅವನ ಮುಂದಿಟ್ಟರು. ಕೃಷ್ಣಪ್ರಿಯನು ಆಶ್ಚರ್ಯದಿಂದ ಭಕ್ಷಿಯವರ ಕಡೆಗೆ ನೋಡಿದನು.'

ತಟ್ಟೆಯಲ್ಲಿ ಎಲ್ಲಾ ತರದ ಹಣ್ಣುಗಳೂ. ಒಂದು ಬೆಳ್ಳಿಯ ಲೋಟದಲ್ಲಿ ನೀರೂ ಮತ್ತೊಂದರಲ್ಲಿ ಹಾಲೂ ಒಂದು ಪಂಚೆ ಮತ್ತು ಶಾಲೂ ಇದ್ದುವು. ಕೃಷ್ಣಪ್ರಿಯ ಇವುಗಳಕಡೆ ನೋಡಿ ಬೆಪ್ಪಾಗಿ ನಿಂತನು. 'ಕೃಷ್ಣಪ್ರಿಯ,

ಮುಖ ತೊಳೆದುಕೊಂಡು ಹಣ್ಣುಗಳನ್ನು ತೆಗೆದುಕೋ. ನೀನು ಐದಾರು ದಿನಗಳಿಂದ ಉಪವಾಸವಂತೆ. ಮಹಾರಾಜರು ನಿನ್ನನ್ನು ಫಲಾಹಾರದಿಂದ ಉಪಚರಿಸಿದ ಮೇಲೆ ಬೆಟ್ಟದ ಮೇಲಕ್ಕೆ ಕರೆದುಕೊಂಡು ಬರಹೇಳಿದರು. ನಾಳೆ ಅವರು ತೀರ್ಥಯಾತ್ರೆ ಹೊರಡುವರು. ಬೆಳಗ್ಗೆ ಆರು ಘಂಟೆಗೇ ಅರಮನೆಯಲ್ಲಿ ಸಂಗೀತಕಚೇರಿ ಇದೆ. ಅಲ್ಲಿ ನಿನ್ನ ಹಾಡನ್ನು ಮಹಾರಾಜರು ಕೇಳುವರಂತೆ. ಅವರು ನಿನ್ನನ್ನು ನಾಳೆ ಅಲ್ಲಿಯೇ ನೋಡುವರು.' ಎಂದು ಭಕ್ಷಿಯುವರು ಕೃಷ್ಣಪ್ರಿಯನಿಗೆ ಹೇಳಿ, ಅವನ ಪಕ್ಕದಲ್ಲಿ ಕುಳಿತರು. ಅವನು ಫಲಾಹಾರವನ್ನು ಮುಗಿಸಿ ಸ್ವಲ್ಪ ಸುಧಾರಿಸಿಕೊಂಡ ಮೇಲೆ ಭಕ್ಷಿಗಳು ಅವನ ಕೈಹಿಡಿದುಕೊಂಡು ಬೆಟ್ಟದ ಮೇಲಕ್ಕೆ ಕರೆದುಕೊಂಡು ಹೋದರು.

* * * * *

ಮುಮ್ಮಡಿ ಕೃಷ್ಣರಾಜ ಒಡೆಯರು ಸ್ವಯಂ ಸಂಗೀತಗಾರರು. ಸಂಗೀತದ ಕೋಗಿಲೆಗಳಿಗವರು ಚೈತ್ರಮಾಸದಲ್ಲಿ ಎಳೆದಳಿರುಗಳಿಂದ ತುಂಬಿರುವ ರಸಾಲತರುವಿನಂತಿದ್ದರು. ಅನಾಥರನ್ನು ಕಂಡರೆ ಅವರಿಗೆ ಬಲು ಪ್ರೀತಿ, ಅವರು ದೈವಭಕ್ತರು; ಚಾಮುಂಡಾಂಬಿಕಾ ವರಪ್ರಸಾದಕರು.

ಬೆಳಗ್ಗೆ ಎಂಟುಗಂಟೆಗೆ ಅವರು ತೀರ್ಥಯಾತ್ರೆ ಹೊರಡಲು ಎಲ್ಲಾ ಅಣಿಯಾಗಿತ್ತು. ಅವರು ಎಲ್ಲಿಗಾದರೂ ಹೋಗುವುದಕ್ಕೆ ಮೊದಲು ಸಂಗೀತ ಕಚೇರಿಯೊಂದನ್ನು ಮಾಡಿಸುವುದು ಅವರ ಪದ್ಧತಿ.

ಇಂದು ಅರಮನೆಯಲ್ಲಿ ಭಾರಿ ಸಂಗೀತ ಕಚೇರಿ. ಮಹಾರಾಜರು ತೀರ್ಥಯಾತ್ರೆಯಿಂದ ಬರಲು ಒಂದು ವರ್ಷವಾಗುವುದು. ಸಂಗೀತಗಾರರೆಲ್ಲಾ ಅರಮನೆಯ ಸಂಗೀತ ಮಂದಿರವಲ್ಲಿ ನೆರೆದಿದ್ದರು.

ಬೆಳಗ್ಗೆ ಆರುಘಂಟೆಗೇನೇ ಕಚೇರಿ ಪ್ರಾರಂಭ. ಮಂದಿರವೆಲ್ಲಾ ಸೊಗಸಾಗಿ ಸಿಂಗರಿಸಲ್ಪಟ್ಟಿತ್ತು. ಎಲ್ಲೆಲ್ಲಿಯೂ ಸರಸ್ವತಿಯ ನರ್ತನ. ಲಕ್ಷ್ಮಿಯ ಬೆಡಗಿನ ನೆಲೆ! ಕೇಳಬೇಕೇ ಮೊದಲೇ ಅರಮನೆ!

ವಾದ್ಯಗಾರರೆಲ್ಲಾ ತಮ್ಮ ವಾದ್ಯಗಳನ್ನು ಸರಿಪಡಿಸುತ್ತಾ ಕುಳಿತರು. ಎಲ್ಲಾ ಚಿನ್ನಬೆಳ್ಳಿಯ ವಾದ್ಯಗಳೇ! ಆರುಗಂಟೆ ಹೊಡೆಯಿತು. ಮುಮ್ಮಡಿ ಕೃಷ್ಣರಾಜ ಒಡೆಯರು ಬಂದು ತಮ್ಮ ಸ್ಥಾನದಲ್ಲಿ ಕುಳಿತರು. ಸಂಗೀತ

ಗಾರರೆಲ್ಲಾ ಎದ್ದು ನಿಂತು ಮಹಾರಾಜರಿಗೆ ಕೈ ಮುಗಿದರು. ಅವರೂ ಇವರೆಲ್ಲರ ಕಡೆಗೂ ಒಂದು ಮುಗುಳುನಗೆಯನ್ನು ಎಸೆದರು.

ಅವರು ಅಂದು ಪ್ರಯಾಣದ ಉಡಿಗೆ ತೊಡಿಗೆಗಳಿಂದಿದ್ದರು. ಅವರ ಹಣೆಯಲ್ಲಿ ಶ್ರೀರಂಗನಾಥ ಸ್ವಾಮಿಯ ಪ್ರಸಾದ-ಕಸ್ತೂರಿತಿಲಕ. 'ಇನ್ನು ಸಂಗೀತವನ್ನಾರಂಭಿಸಬಹುದು.' ಎಂದು ಮಹಾರಾಜರು ಸಸುನಗುವಿನಿಂದ ಹೇಳಿದರು.

ದೇವತಾಪ್ರಾರ್ಥನೆಯಾಯಿತು. ಆ ಮೇಲೆ ಹೊಸದಾಗಿ ಕಲಿತಿದ್ದ ಪಾಂಡಿತ್ಯವನ್ನೆಲ್ಲಾ ಸಂಗೀತಗಾರರು ಬಿಚ್ಚಿದರು. ಅನಂತರ ಸಭೆಯೆಲ್ಲಾ ಸ್ವಲ್ಪಹೊತ್ತು ನಿಶ್ಶಬ್ದ!

ಮಹಾರಾಜರು ಎದ್ದುನಿಂತು, 'ಎಲ್ಲಿ; 'ನೀಮಾಯೆಯೊಳಗೊ ನಿನ್ನೊಳಗೆ ಮಾಯೆಯೊ' ಎನ್ನುವುದನ್ನು ಹಾಡಿ' ಎಂದರು. ಅವರು ಎಂದೂ ಇಂಥಾ ಹಾಡನ್ನು ಹಾಡಿ ಎಂದದ್ದೇ ಇಲ್ಲ. ಆದುದರಿಂದ ಅದನ್ನು ಕೇಳಿ ಸಂಗೀತಗಾರರೆಲ್ಲರಿಗೂ ಆಶ್ಚರ್ಯವಾಯಿತು. ಕೆಲವರು ಭಯದಿಂದ ನಡುಗಿದರು. ಚೆನ್ನಾಗಿ ಅದನ್ನು ಅಭ್ಯಾಸಿಸಿದ್ದ ಕೆಲವರಿಗೆ ಹೇಳಲು ಬಾಯೇ ಬರಲಿಲ್ಲ. ಹೆಸರುವಾಸಿಪಡೆದ ವಿದ್ವಾಂಸರೊಬ್ಬರು ಧೈರ್ಯಮಾಡಿ ಆ ಹಾಡಿನ ಆಲಾಪನೆಯನ್ನು ಮಾಡಿದರು. 'ಇರಲಿ; ನಾನು ಈ ಹಾಡನ್ನು ಉದಯರಾಗದಲ್ಲಿ ಕೇಳಬೇಕೆಂದಿದೇನೆ. ಯದುಕುಲಕಾಂಬೋಧಿಯಲ್ಲಿ ನೀವು ಹೇಗೆ ಹಾಡಿದರೂ ಅದು ಯದುಕುಲದವರಿಗೆ ಮೆಚ್ಚಿಗೆಯೇ!' ಎಂದು ಮಹಾರಾಜರು ಮುಗುಳುನಗೆಯಿಂದ ಹೇಳಿದರು. ಇದನ್ನು ಕೇಳಿಯಂತೂ ಸಂಗೀತಗಾರರೆಲ್ಲ ಅಚೇತನವಸ್ತುಗಳಂತಾದರು. ಎಲ್ಲರೂ ಆ ಹಾಡನ್ನು ಯದುಕುಲಕಾಂಬೋಧಿಯಲ್ಲಿಯೇ ಅಭ್ಯಾಸಿಸಿದ್ದರು. ಪ್ರತಿ ಹಾಡಿಗೂ ಇಂಪುಕೊಡುವ ರಾಗವೊಂದೇ ಒಂದು. ಸರಸ್ವತೀವರಪ್ರಸಾದಕರು ಯಾವ ರಾಗದಲ್ಲಿ ಹಾಡಿದರೂ ಹಾಡಬಹುದು. ಆಕೆ ಚಂಚಲೆ; ಪ್ರತಿಯೊಬ್ಬನನ್ನೂ ಒಂದೇ ರೀತಿಯಾಗಿ ಪ್ರೀತಿಸುವಳೇನು? ಸಂಗೀತಗಾರರಲ್ಲಿ ಕೆಲವರು ಕದಲದೆ ಕುಳಿತರು. ಹೆಸರುಪಡೆದಿದ್ದ ವಿದ್ವಾಂಸರಲ್ಲಿ ಕೆಲವರು ಉದಯರಾಗದಲ್ಲೇ ಹಾಡಿದರು. ಆದರೆ ಮಹಾರಾಜರ ಕಿವಿಗೆ ಇಂಪು ಕೊಡಲಿಲ್ಲ ಅವರ ಸ್ವರಗಳೆಲ್ಲ!

ಮಹಾರಾಜರ ಮುಖವನ್ನು ನೋಡಿ ಸಂಗೀತಗಾರರೆಲ್ಲ ನಡುಗಿದರು. ಅವರ ಸ್ಥಿತಿಯನ್ನೆಲ್ಲಾ ನೋಡಿ ಮಹಾರಾಜರಿಗೆ ರೇಗಿಹೋಯಿತು. 'ಇಷ್ಟೇನೇ ! ದಕ್ಷಿಣದೇಶದಲ್ಲೆಲ್ಲಾ ಹೆಸರುಪಡೆದ ಸಂಗೀತಗಾರರ ಪ್ರಭಾವ! ಸರಿಸರಿ!' ಎಂದು ರೋಷದಿಂದ ಕಣ್ಣುಗಳನ್ನು ಕೆಂಪಗೆ ಮಾಡಿಕೊಂಡು ಏಳಲುದ್ಯುಕ್ತರಾದರು. ಆಗ ಭಕ್ಷಿಯವರು ಬಂದು 'ಮಹಾಸ್ವಾಮಿ, ತಂಜಾವೂರಿನ ಸಂಗೀತಗಾರರೊಬ್ಬರು ಸ್ವಾಮಿಯವರ ದರ್ಶನಕ್ಕಾಗಿ ಕಾದಿದ್ದಾರೆ' ಎಂದರು. ಮಹಾರಾಜರ ಕೋಪವು ಸ್ವಲ್ಪ ಮಾಯವಾಯಿತು. 'ಆಗಲಿ, ಅವರ ಯೋಗ್ಯತೆಯನ್ನು ಪರೀಕ್ಷಿಸೋಣ' ಎಂದು ಹೇಳಿ, ಪುನಃ ಅವರು ಸಿಂಹಾಸನದಲ್ಲಿ ಕುಳಿತರು.

ಭಕ್ಷಿಯವರು ಸಂಗೀತಗಾರರನ್ನು ಕರೆದುಕೊಂಡು ಬಂದರು. ಕೃಷ್ಣಪ್ರಿಯ ! ನಿನ್ನೆ ಮಹಾರಾಜರು ಕಳುಹಿಸಿದ ಪಂಚೆಯನ್ನುಟ್ಟು ಶಾಲುವನ್ನು ಹೊದೆದಿದ್ದನು. ಅವನ ಕೈಯಲ್ಲಿ ಅದೇ ಕಬ್ಬಿಣದ ಕಟ್ಟಿನ ಬಡಕೋಲು ! ಸಂಗೀತದ ವಿದ್ವಾಂಸರೆಲ್ಲಾ ಇವನ ಕಡೆ ಆಶ್ಚರ್ಯದಿಂದ ನೋಡಿದರು, 'ಇದೇನು ಇಷ್ಟು ಸಣ್ಣ ಹುಡುಗ! ಮಹಾರಾಜರ ಮುಂದೆ !!' ಎಂದು ಕೆಲವರು ಅಂದುಕೊಂಡರು. 'ಮಹಾರಾಜರು ಬಹುಮಾನವಾಗಿ ಕೊಟ್ಟಿರುವ ಶಾಲುವಿನಂತಿದೆ ಇವರು ಹೊದೆದಿರುವುದು ! ' ಎಂದು ಇನ್ನು ಕೆಲವರು ಉಸುರಿಕೊಂಡರು.

ಮಹಾರಾಜರು ಕೃಷ್ಣಪ್ರಿಯನ ಕಡೆ ನೋಡುತ್ತಾ ಮುಗುಳ್ನಗೆಯನ್ನು ಮುಖದಲ್ಲಿ ಸೂಚಿಸಿದರು. ಕೃಷ್ಣಪ್ರಿಯನು ಅವರನ್ನು ದೃಷ್ಟಿಸಿ ನೋಡಿದನು. ನಡುಗಿದನು !

'ಮಗೂ ಕೃಷ್ಣಪ್ರಿಯಾ, ಭಯಪಡಬೇಡ ನಾನೇ ಶ್ರೀ ಕೃಷ್ಣನ ಪ್ರಿಯ ಸೇವಕ–ಕೃಷ್ಣದಾಸ' ಎಂದು ಮಹಾರಾಜರು ನಸುನಗುತ್ತಾ ಕೃಷ್ಣಪ್ರಿಯನಿಗೆ ಹೇಳಿದರು.

ಭಕ್ಷಿಯವರು ಕೃಷ್ಣಪ್ರಿಯನನ್ನು ಮಹಾರಾಜರ ಬಳಿಗೆ ಕರೆತಂದರು. ಮಹಾರಾಜರು 'ಮಗೂ ಎಲ್ಲಿ ನಿನ್ನೆ ಅರುಣೋದಯದಲ್ಲಿ ಹಾಡಿದ ಹಾಡನ್ನು ಈಗ ಹಾಡು' ಎಂದರು.

ಕೃಷ್ಣಪ್ರಿಯ ಕೊಳಲನ್ನು ಸರಿಪಡಿಸಿ, ' ನೀ ಮಾಯೆಯೊಳಗೊ.... ........' ಎನ್ನುವುದರ ಆಲಾಪನೆಯನ್ನು ಮಾಡಿ ಉದಯರಾಗದಲ್ಲಿ ಕೊಳಲಿನಲ್ಲಿ ಹಾಡಿದನು. ಆಮೇಲೆ ಬಾಯಲ್ಲೂ ಹಾಡಿದನು. ಸಂಗೀತಗಾರರೆಲ್ಲಾ ಇವನ ಕಂಠದ ಇಂಪನ್ನೂ ಇವನಿಗಿದ್ದ ಸ್ವರ ಮತ್ತು ತಾಳಜ್ಞಾನಗಳನ್ನು ಕಂಡು ಬೆರಗಾದರು. ' ಇವನೇನು ಹಿಂದೆ ತ್ಯಾಗರಾಜರ ಗರ್ವ ಮುರಿಯಲು ಬಂದ ಮುರಳೀಧರನೋ!' ಎಂದುಕೊಂಡು ಇವನನ್ನೇ ಅವರೆಲ್ಲಾ ದೃಷ್ಟಿಸಿ ನೋಡಿದರು.

'ಕೃಷ್ಣಪ್ರಿಯಾ! ಸೊಗಸಾಗಿ ಹಾಡಿದೆ. ಆದರೆ ನಿನ್ನೆಯಷ್ಟು ಮಧುರವಲ್ಲ!' ಎಂದು ಸಸುನಗೆಯಿಂದ ಮಹಾರಾಜರು ಕೃಷ್ಣಪ್ರಿಯನ ಬೆನ್ನು ತಟ್ಟಿ ಹೇಳಿದರು.

'ನಿನ್ನೆ ಹೃದಯದ ಹಕ್ಕಿ ದೇವದೇವನಲ್ಲಿ ತನ್ನಿಷ್ಟಕ್ಕೆ ತಾನೇ ಮೊರೆಯಿಟ್ಟಿತು. ಇಂದು ಕೃಷ್ಣಪ್ರಿಯ ಶ್ರೀಕೃಷ್ಣಸ್ವಾಮಿಯವರ ಬಳಿ ಹಾಡುತ್ತಿದ್ದಾನೆ. ಅಂದು ಬೈಲಲ್ಲಿ ಬಿಟ್ಟ ಕುಣಿಯುತ್ತಿದ್ದ ಹಕ್ಕಿಯದು! ಇಂದು ಪಂಜರದ ಹಕ್ಕಿ, ಮಹಾಪ್ರಭು!' ಎಂದು ಕೃಷ್ಣಪ್ರಿಯನು ಮಹಾರಾಜರ ಮೃದು ಮಾತುಗಳಿಂದ ಪಡೆದ ಧೈರ್ಯದಿಂದ ಅವರನ್ನೇ ದೃಷ್ಟಿಸಿ ನೋಡುತ್ತಾ ಹೇಳಿದನು.

'ಮಗೂ, ನಿನ್ನ ಉದಯರಾಗಕ್ಕೆ ನಾನು ಬೆರಗಾದೆ. ನಿನ್ನಂತೆ ಉದಯರಾಗದಲ್ಲಿ ಇಂಪಾಗಿ ಹಾಡುವವನು ನನ್ನ ಆಸ್ಥಾನದಲ್ಲಿ ಯಾರೂ ಇಲ್ಲ. ಇನ್ನು ಮೇಲೆ ನಿನಗೆ 'ಉದಯರಾಗ ರಸರತ್ನಾಕರ' ಎಂಬ ಬಿರುದು ಕೊಟ್ಟಿದ್ದೇನೆ' ಎಂದು ಮಹಾರಾಜರು ನಗುತ್ತಾ ಹೇಳಿ, ಭಕ್ಷಿಯವರ ಮೂಲಕ ತರಿಸಿದ ಪದಕವಿದ್ದ ಚಿನ್ನದ ಹಾರವನ್ನು ತಾವೇ ಕೃಷ್ಣಪ್ರಿಯನ ಕೊರಳಿಗೆ ಹಾಕಿ, ಚಿನ್ನದ ಕೊಳಲೊಂದನ್ನು ಕೊಟ್ಟು, ಕಾಶ್ಮೀರ ಶಾಲುವನ್ನು ಹೊದಿಸಿ, 'ಇವನಾರು ಬಲ್ಲಿರಾ?' ಎಂದು ಸಂಗೀತಗಾರರನ್ನೆಲ್ಲಾ ಕೇಳಿದರು.

'ಇಲ್ಲಾ ಪ್ರಭು!'

'ನಮ್ಮ ಆಸ್ಥಾನದಲ್ಲಿ ಕೊಳಲಿನ ಸುಬ್ಬಣ್ಣನವರಿದ್ದರು. ನೆನಪಿದೆಯೇ?'

'ನಮ್ಮಗಳೆಲ್ಲರ ಗುರುಗಳೇ, ಸ್ವಾಮಿ?'

'ಹೌದು! ಅವರ ಮೊಮ್ಮಗನೇ ಇವನು. ಹಿಂದೆ ಶ್ರೀರಂಗಪಟ್ಟಣ ದಲ್ಲಿ ಇದೇ ಹಾಡನ್ನು ಇದೇ ರಾಗದಲ್ಲಿ ಹಾಡಿದರಲ್ಲಾ ಗೋಪಾಲಕೃಷ್ಣ ಭಾಗವತರು ಅವರ ಶಿಷ್ಯ' ಎಂದು ನಸುನಗುತ್ತಾ ಕೃಷ್ಣರಾಜ ಒಡೆಯರು ಕೃಷ್ಣಪ್ರಿಯನ ಬೆನ್ನು ಮೇಲೆ ಕೈಯಿಟ್ಟು, ಅವನ ಮೇಲೆ ತಮ್ಮ ಕಟಾಕ್ಷ ವನ್ನು ಬೀರುತ್ತಾ ಹೇಳಿದರು.

'ಅದಕ್ಕೇ ಇಂತಹ ವಿದ್ಯಾವಂತನಾಗಿರುವುದು, ಮಹಾಪ್ರಭೂ!'

ಭಕ್ತಿಯವರು ಕೃಷ್ಣಪ್ರಿಯನ ಕಡೆಗೊಮ್ಮೆ ನೋಡಿ, ಮಹಾರಾಜರ ಕಡೆಗೊಮ್ಮೆ ದೃಷ್ಟಿಯನ್ನು ಬೀರಿ, 'ಕೃಷ್ಣಪ್ರಿಯಾ! ನೀನಿಂದು ಶ್ರೀಕೃಷ್ಣ ಪ್ರಿಯನಾದೆ!!' ಎಂದು ನಸುನಗೆಯಿಂದ ಹೇಳಿದರು. ಇದನ್ನು ಕೇಳಿ ಮಹಾರಾಜರೂ ಮುಖದಲ್ಲಿ ಮುಗುಳುನಗೆ ಸೂಸಿದರು!

ಕೃಷ್ಣಪ್ರಿಯನ ಕಣ್ಣಿನಲ್ಲಿ ನೀರು ಹರಿಯುತ್ತಿತ್ತು! ಶಾಂತವಾದ ಪ್ರವಾಹ. ಮಹಾರಾಜರು ಅದನ್ನು ಕಂಡು 'ಅನಾಥೆಯಾಗಿ ಮಡಿದ ತಾಯಿಗಾಗಿ ಕರುಳಿನಿಂದ ಹರಿಯುವ ಕಾಲುವೆಯಿದು!' ಎಂದುಕೊಂಡು ಏನನ್ನೋ ನೆನೆಯುತ್ತಾ, ತಾವು ತಮ್ಮ ಕಣ್ಣನೊರಿಸಿಕೊಂಡರು!



# ಡೇರ ಹೂ

ವರ್ಷ ಋತುವು ಬಹುದಿನಗಳವರೆಗೂ ತನ್ನ ಪ್ರಬಾವವನ್ನು ತೋರಿಸುತ್ತಿದ್ದುದರಿಂದ ಕಮಲೂಗೆ ಬಹಳ ವ್ಯಥೆ. ಹೂಗಳೆಂದರೆ ಅವಳಿಗೆ ಬಹಳ ಆಸೆ. ಅವಳು ಒಂದು ಕೈತೋಟದ ಒಡತಿಯಾಗಿದ್ದಳು. ಆದರಲ್ಲಿ ತಾನೇ ಹಲವು ಹೂಗಿಡಗಳನ್ನು ಬೆಳೆಸಿದ್ದಳು. ಆದುದರಿಂದಲೇ ಆಕೆ ಎಂದಿಗೆ ಈ ಸೋನೆ ಹೋಗಿ, ವಸಂತನು ತನ್ನ ಪ್ರಭಾವವನ್ನು ಬೀರುತ್ತಾನೆ ಎಂದುಕೊಳ್ಳುತ್ತಿದ್ದಳು.

ಒಂದು ದಿನ ಸಂಜೆ, ಕಮಲುವಿನ ತಂದೆ ಶ್ರೀನಿವಾಸರಾಯರು, ‘ಕಮಲೂ, ಈ ಗಡ್ಡೆ ತಂದಿದ್ದೇನೆ. ನೋಡು. ಇದನ್ನು ಸರಿಯಾಗಿ ಹೂತು ಬೆಳೆಯಿಸಬೇಕು’ ಎಂದು ಡೇರಗಡ್ಡೆಯೊಂದನ್ನು ಅವಳ ಕೈಗೆ ಕೊಟ್ಟರು.

ಕಮಲು ಕೈಯಲ್ಲಿರುವ ಗಡ್ಡೆಯನ್ನು ನೋಡುತ್ತಾ, ‘ಅಣ್ಣಾ, ಇದನ್ನು ಈಗ ಹೇಗೆ ಹೂಳಲಿ? ಮಳೆಯಿಂದ ಭೂಮಿಯೆಲ್ಲಾ ಕೊಳವಾಗಿ ಹೋಗಿದೆ. ಇನ್ನೂ ಒಂದು ತಿಂಗಳು ಈ ಸೋನೆ ಹೋಗುವುದಿಲ್ಲವೆಂದು ಅಮ್ಮ ಹೇಳಿದಳು’ ಎಂದಳು. ಅವಳು ಆದರ ವರೆಗೂ ಗಡ್ಡೆಯನ್ನು

---

[Hycint ಎನ್ನುವ ಫ್ರೇಂಚ ಹಳಿಯ ಕತೆಯೊಂದನ್ನು ನೋಡಿ ಬರೆದದ್ದು]

ನೋಡಿರಲಿಲ್ಲ. ಅದು ಹೂಮುಡಕೆಯಲ್ಲಿಯೂ ಗಾಜಿನ ಪಾತ್ರೆಗಳಲ್ಲಿಯೂ ಬೆಳೆಯುತ್ತದೆನ್ನುವುದು ಆಕೆಗೆ ಗೊತ್ತಿಲ್ಲ.

ಶ್ರೀನಿವಾಸರಾಯರು ಗೊಬ್ಬರದಿಂದ ಕೂಡಿದ ಮಣ್ಣಿನಿಂದ ತುಂಬಲ್ಪಟ್ಟ ಹೂಮುಡಕೆಯೊಂದನ್ನು ಕಮಲುವಿಗೆ ಕೊಟ್ಟರು. ಕಮಲು ಆ ಗಡ್ಡೆಯನ್ನು ಆ ಮಣ್ಣಿನಲ್ಲಿ ಹೂಳಿದಳು. ಶ್ರೀನಿವಾಸರಾಯರ ಕಡೆ ನೋಡುತ್ತಾ ಎಳನಗುವನ್ನು ಬೀರಿದಳು; ಅವಳಿಗೆ ಸಂಶಯ, ಅವರು ನಿಜ ಹೇಳುವರೋ ಇಲ್ಲ ಪರಿಹಾಸ್ಯಮಾಡುವರೋ ಎಂದು. ನೀಲಿಯ ಆಗಸವು ಆದರ ಹೂವಿನಮೇಲೆ ಮುಗುಳುನಗೆ ಬೀರುತ್ತಾ, ವಸಂತಮಾರುತನು ಆದರ ಮೇಲೆ ಮೆಲ್ಲನೆ ಬೀಸುತ್ತಾ ಇರುವುದನ್ನು ಆಕೆ ಅಂದು ಊಹಿಸಿದಳು. ಆ ಸೊಬಗೆಲ್ಲಾ ತನ್ನ ಕೈಗಳಿಂದ ನೆಡಲ್ಪಟ್ಟುದಕ್ಕೆ ಬರುವುದೇ ಎಂದುಕೊಂಡಳು.

ಕೆಲವು ದಿನಗಳ ಮೇಲೆ ಮಡಕೆಯಲ್ಲಿ ಮಣ್ಣು ಸ್ವಲ್ಪ ಉಬ್ಬಿಕೊಂಡಿತು. ಗಡ್ಡೆಯಮೇಲೆ ಕೆಲವು ಹಸರು ಎಲೆಗಳು ಕಾಣಿಸಿಕೊಂಡವು. ಅದನ್ನು ಕಂಡು ಕಮಲು ಹಿಗ್ಗಿದಳು. ಆ ಸಮಾಚಾರವನ್ನು ಶ್ರೀನಿವಾಸರಾಯರಿಗೂ ತಾಯಿಗೂ ಮತ್ತು ಮನೆಯವರೆಲ್ಲರಿಗೂ ತಿಳುಹಿಸಿದಳು.

ಶ್ರೀನಿವಾಸರಾಯರು ತಮ್ಮ ಹೆಂಡತಿಯ ಕಡೆ ಮುಗುಳುನಗೆ ಸೂಸಿ, 'ಕಮಲು ಅವಳ ಗಿಡವನ್ನು ಮಗುವಿನಂತೆ ಪ್ರೀತಿಯಿಂದ, ಉತ್ಸುಕತೆಯಿಂದ ನೋಡಿಕೊಳ್ಳುವುದನ್ನು ನಾವು ನೋಡಿ ನಲಿಯೋಣ. ಅವಳು ತನ್ನ ಹೂವನ್ನು ನೋಡಿ ನಲಿಯುವಂತೆ ನಾವು ಕಮಲುವನ್ನು ನೋಡಿ ನಲಿಯೋಣ' ಎಂದರು.

ಕಮಲು ಗಿಡಕ್ಕೆ ಜಾಗರೂಕತೆಯಿಂದ ನೀರೆರೆಯುತ್ತ ಅದರ ಬೆಳವಣಿಗೆಯನ್ನು ನೋಡಿ ಉತ್ಸಾಹದಿಂದ ಮುಗುಳುನಗೆ ಸೂಸಿದಳು. ಶ್ರೀನಿವಾಸರಾಯರು ಅವಳನ್ನು ನೋಡಿ, ಅವಳ ಕುರುಳನ್ನು ಸವರುತ್ತಾ 'ಒಳ್ಳೆಯದು ಮಗು! ಹಿಮ ಮತ್ತು ಮಳೆ ಬಂದಮೇಲೆ ಬಿಸಿಲು ಬರಲೇಬೇಕು. ಕೈಮಾಡುವ ಒಳ್ಳೆ ಕೆಲಸಗಳನ್ನು ನೋಡುವ ಕಣ್ಣು ಅವಕ್ಕೆ ಒಳ್ಳೆ ಬೆಲೆ ಕೊಡುತ್ತದೆ. ಕಮಲು, ನಿನ್ನ ಚಿಕ್ಕ ಗಿಡ ಚೆನ್ನಾಗಿ ವೃದ್ಧಿಯಾಗುತ್ತದೆ' ಎಂದರು.

ಎಲೆಗಳೆಲ್ಲ ಮಣ್ಣಿನಿಂದ ಮೇಲೆ ಬಂದು, ತಮ್ಮ ಹಸುರಿನಿಂದ ಮೆರೆದವು. ಆಗ ಕಮಲುವಿನ ಸಂತೋಷ ಹೆಚ್ಚಾಯಿತು. ಆಕೆ ಹೃದಯ ಪೂರ್ವಕವಾಗಿ ಉತ್ಸಾಹದಿಂದ 'ಓ! ಹೂ ಬಿಡದೆ ಹೋದರೂ ಕೆಡತು; ನಾನು ತೃಪ್ತಳು!' ಎಂದಳು. ಇವಳ ಉತ್ಸಾಹವನ್ನು ಕಂಡ ಶ್ರೀನಿವಾಸ ರಾಯರು, 'ಮಗು, ನೀನು ಬಯಸುವದಕ್ಕಿಂತ ಜಾಸ್ತಿಯಾಗಿಯೇ ನಿನಗೆ ಫಲ ಸಿಕ್ಕುತ್ತೆ. ಇದು ನಮ್ರತೆಗೆ ಬಹುಮಾನ' ಎಂದು, ಎಲೆಗಳ ನಡುವೆ ಮರೆಯಾಗಿದ್ದ ಹೂವಿನ ಮೊಗ್ಗನ್ನು ಅವಳಿಗೆ ತೋರಿಸಿದರು.

ಹೂ ಕ್ರಮೇಣ ಬೆಳೆಯುತ್ತಿದ್ದಷ್ಟೂ ದಿನದಿನಕ್ಕೂ ಕಮಲು ಅದನ್ನು ಬಹಳ ಪ್ರೀತಿ ಉತ್ಸಾಹಗಳಿಂದ ನೋಡಿಕೊಳ್ಳುತ್ತಿದ್ದಳು. ಅವಳು ತನ್ನ ಮೃದುಹಸ್ತಗಳಿಂದ ನೀರನ್ನು ಗಿಡಕ್ಕೆ ಚಿಮುಕಿಸಿ,'ನೀರು ಕಮ್ಮಿಯೆ, ಇಲ್ಲ ಜಾಸ್ತಿಯೆ' ಎಂದು ಮನೆಯಲ್ಲಿ ಎಲ್ಲರನ್ನೂ ಕೇಳುತ್ತಿದ್ದಳು. ಸೂರ್ಯ ರಶ್ಮಿಯು ಕಿಟಕಿಗಳಿಂದ ನುಸುಳಿವಾಗ, ಕಮಲು ಆ ಗಿಡವನ್ನು ಮೆಲ್ಲಗೆ ಅಲ್ಲಿಗೆ ಎತ್ತಿಕೊಂಡು ಹೋಗಿ, ಗಿಡದ ಮೇಲಿರುವ ಧೂಳು ಹೋಗಲು ಎಲೆ ಗಳ ಮೇಲೆ ಮೆಲ್ಲನೆ ತನ್ನ ಉಸಿರನ್ನು—ಗುಲಾಬಿಯ ಮೇಲೆ ಅರುಣೋ ದಯದಲ್ಲಿ ಮಂದಮಾರುತನು ಬೀಸುವ ಹಾಗೆ–ಬಿಟ್ಟಳು.

ಕಮಲುವಿನ ಸಂಜೆಯ ಕಟ್ಟಕಡೆಯ ಯೋಚನೆಯೂ, ಮತ್ತು ಅವಳ ಬೆಳಗಿನ ಮೊಟ್ಟಮೊದಲನೆಯ ಯೋಚನೆಯೂ ಆ ಹೂ. ಅನೇಕ ವೇಳೆ ಆಕೆ ಕನಸಿನಲ್ಲಿ ತನ್ನ ಡೇರಹೂ ಪೂರ್ಣವಾಗಿ ಅರಳಿರುವುದನ್ನು ನೋಡಿದಳು; ಆದರೆ ಬೆಳಗ್ಗೆ ಆಕೆ ಆ ವಿಷಯದಲ್ಲಿ ನಿರಾಶಳಾಗಲು, ಅದನ್ನು ಮನಸ್ಸಿಗೆ ಹಚ್ಚಿಕೊಳ್ಳದೆಯೇ 'ಇದು ಇನ್ನೂ ಹೂವಾಗಬಹುದು!' ಎಂದು ಮುಗುಳುನಗೆಯಿಂದ ಹೇಳಿದಳು.

ಕಟ್ಟಕಡೆಯಲ್ಲಿ ಹೂ ಅರಳಿತು. ಅರುಣೋದಯದಲ್ಲಿ ಐದು ಪಚ್ಚೆ ಹಸುರಿನ ಎಲೆಗಳ ನಡುವೆ ಹನ್ನೆರಡು ಮೊಗ್ಗಗಳು ಅರಳಿ, ಎಳೆತನದ ಸೊಗಸಿ ನಿಂದ ಮೆರೆದವು. ಅವುಗಳ ಬಣ್ಣವು ಅರುಣನ ಕಿರಣಗಳ ಹಾಗೆ, ಇಲ್ಲವೆ ಕಮಲುವಿನ ಕೆನ್ನೆಯ ಮೇಲಿನ ನವರಾಗದಂತೆ ಗುಲಾಬಿ ಬಣ್ಣ; ಪ್ರತಿ ಯೊಂದು ಹೂವಿನ ಸುತ್ತಲೂ ಸುವಾಸನೆ. ಕಮಲು ಇಷ್ಟು ಸೌಂದರ್ಯ ವನ್ನು ತಿಳಿದುಕೊಳ್ಳುವ ಹಾಗಿರಲಿಲ್ಲ. ಅವಳ ಸಂತೋಷ ನಿಶ್ಯಬ್ದತೆಯಿಂದ,

ಮಾತಿಲ್ಲದೆ ಇರುವುದರಿಂದ ವ್ಯಕ್ತವಾಗುತ್ತಿತ್ತು. ಅವಳು ಮೊಳಕಾಲೂರಿ, ಹೊಸದಾಗಿ ಅರಳಿರುವ ಹೂಗಳನ್ನು ಒಂದೇ ದೃಷ್ಟಿಯಿಂದ ನೋಡುತ್ತಿದ್ದಳು. ಆಗ ಶ್ರೀನಿವಾಸರಾಯರು ಅಲ್ಲಿಗೆ ಬಂದು, ಅವರ ಒಲವಿನ ಮಗುವನ್ನೂ ಅರಳಿದ ಡೇರ ಹೂವನ್ನೂ ನೋಡಿ, 'ಕಮಲು, ನಿನಗೆ ಡೇರ ಹೂ ಹೇಗೋ ನಮಗೆ ನೀನು ಹಾಗೆ' ಎಂದು ಮುಗುಳುನಗೆ ನೂಸಿ ಹೇಳಿದರು.

ಆ ಪುಟ್ಟ ಬಾಲೆ ಎದ್ದು ನಿಂತಳು. ಶ್ರೀನಿವಾಸರಾಯರು ಅವಳನ್ನು ಎರಡು ಕೈಗಳಿಂದಲೂ ಹಿಡಿದು ಎತ್ತಿಕೊಂಡು, ಎದೆಗಪ್ಪಿಕೊಂಡರು. ಆಗ ಕಮಲು ಮೆಲುನುಡಿಯಿಂದ, 'ಅಣ್ಣಾ, ಈ ಹೂವು ನನಗೆ ಕೊಡುವಷ್ಟು ಸಂತೋಷವನ್ನು ನಾನು ನಿಮಗೆ ಕೊಡಬಲ್ಲನೇ!' ಎಂದಳು. ಮಗಳ ಮುದ್ದಿನ ಮಾತನ್ನು ಕೇಳುತ್ತಾ, ಅವಳ ಮುಖವನ್ನು ಮುಗುಳುನಗೆಯಿಂದ ನೋಡುತ್ತಾ, ರಾಯರು ಕಮಲುವನ್ನು ಮುದ್ದಿಟ್ಟರು.

---

# ಬೇಡವಾದರೂ ಬೇಕಾಯಿತು!

೧

ಕೈಯಲ್ಲಿ ಪುಸ್ತಕಗಳನ್ನು ಹಿಡಿದುಕೊಂಡು ಸಗುಮುಖದಿಂದ ರಮಾಬಾಯಿಯು ಬೇಗ ಬೇಗ ಮನೆಗೆ ಬಂದಳು. ಲೋವರ್ ಸೆಕೆಂಡರಿಯಲ್ಲಿ ದೇಶಕ್ಕೆಲ್ಲಾ ಮೊದಲನೆಯವಳಾಗಿ ಉತ್ತೀರ್ಣಳಾಗಿರುವೆನೆಂದೂ ತನಗೆ ಮೆರಿಟ್ ಮತ್ತು ಪಾವರಿಟಿ ಸ್ಕಾಲರ್‌ಷಿಪ್‌ಗಳೆರಡೂ ಬಂದಿರುವುವೆಂದೂ ತಾಯಿಗೆ ತಿಳಿಸಬೇಕೆಂಬ ಆತುರ. ಕಡುಬಡವರು; ಕಷ್ಟಜೀವಿಗಳು. ಇನ್ನು ಮೇಲೆಯಾದರೂ ಬರುವ ಹತ್ತು ರೂಪಾಯಿಗಳಿಂದ ಸುಖಜೀವನಮಾಡಬಹುದೆಂಬುದೇ ಹುಡುಗಿಯ ಎಣಿಕೆ.

ಆಕೆ ಮನೆಯ ಮುಂಬಾಗಿಲನ್ನು ಸೂಕಿ ಒಳಹೊಕ್ಕಳು. ಅವಳ ತಾಯಿ ಪಾರ್ವತಿಬಾಯಿಯು ಕಣ್ಣೀರು ಸುರಿಸುತ್ತಾ, ಹತ್ತಿರ ಬಂದ ಮಗಳನ್ನು ನೋಡಿ, ‘ಕಂಗಾ, ನಿನ್ನ ಗತಿ ಹೀಗಾಯಿತೆ!’ ಎಂದು ಅಳಲು ಪ್ರಾರಂಭಿಸಿದಳು. ಸಂತೋಷದಿಂದ ಬೆಳಗುತ್ತಿದ್ದ ಹುಡುಗಿಯ ಮುಖವು ಮಂಕಾಯಿತು. ಏನೋ ಕೆಟ್ಟ ಸಮಾಚಾರವೆಂದು ಅವಳೂ ಅಳತೊಡಗಿದಳು. ‘ನಿನ್ನ ಒಳ್ಳೆಯ ಸ್ಥಿತಿಯಲ್ಲಿ ಸಂತೋಷಪಡಬೇಕೆಂದಿದ್ದೆ. ಅದು ನನ್ನ ಹಣೆಯಲ್ಲಿ ಬರೆದಿಲ್ಲ!’ ಎಂದಳು– ಪಾರ್ವತಿಬಾಯಿ.

' ಅಮ್ಮಾ ! ಸಮಾಚಾರವೇನು ?........' ಎಂದು ರಮಾಬಾಯಿಯು ಕೇಳಿ, ಸುಮ್ಮನೆ ಕಣ್ಣೀರು ಸುರಿಸುತ್ತಾ ತಾಯಿಯ ಕಡೆ ನೋಡಿದಳು.

' ನಿನ್ನ ಗಂಡನಿಗೆ ನೀನು ಬೇಕಿಲ್ಲವಂತೆ ಬೇರೆ ಮದುವೆ ಮಾಡಿಕೊಂಡಿದ್ದಾನೆಯಂತೆ ! '

' ಬೇರೆ ಮದುವೆ ಮಾಡಿಕೊಂಡರೇನಮ್ಮ ? ನಾವಿಬ್ಬರೂ ಅವರ ಹೆಂಡತಿಯರಾಗಿರುತ್ತೇವೆ.'

' ಒಬ್ಬಳನ್ನು ಸಾಕುವುದಕ್ಕೇ ಅವನಿಗೆ ಗತಿಯಿಲ್ಲ. ಎರಡು ವರ್ಷದಿಂದ ಅಲೆದರೂ ಹದಿನೈದು ರೂಪಾಯಿನ ಕೆಲಸ ಸಿಕ್ಕಲಿಲ್ಲ. ಇನ್ನು ಇಬ್ಬರನ್ನು ಬೇರೆ ಸಾಕಬೇಕು. ಮುಖ್ಯ ನನ್ನ ಮಾತನ್ನು ನೀನು ಕೇಳಲಿಲ್ಲ ' ಎಂದು ನಿಟ್ಟುಸಿರು ಬಿಟ್ಟಳು.

' ಯಾವಾಗಲಮ್ಮ ಕೇಳದಿದ್ದಿದ್ದು '

' ನಿಮ್ಮ ಯಜಮಾನರು ನೀನು-ಪರೀಕ್ಷೆಗೆ ಕಟ್ಟಕೂಡದೆಂದು ಹೇಳಿ ಕಳುಹಿಸಿದ್ದರು. ಆ ವಿಚಾರ ನಿನಗೆ ನಾನು ಹೇಳಿದರೂ ನೀನು ಕೇಳಲಿಲ್ಲ. ನಿನ್ನ ಗಂಡನಿಗೆ ಕನ್ನಡ ಲೋವರ್ ಸೆಕೆಂಡರಿ ಆಗಿದೆ. ನೀನು ಜಾಸ್ತಿ ಓದಿದರೆ ಅವರು ಸಹಿಸಿಯಾರೇ ? ಆದಕ್ಕೇ ಬೇರೆ ಮದುವೆ ಮಾಡಿಕೊಂಡಿದ್ದು. '

' ನಾನೇನು ಮಾಡಲಮ್ಮ. ಹೆಡ್ಮಿಷ್ಟ್ರೆಸ್ಸೇ ಹಣ ಕೊಟ್ಟು, ಪರೀಕ್ಷೆಗೆ ಕಟ್ಟಿಸಿದರು. ನಾನು ಬೇಡವೆಂದರೂ ಕೇಳಲಿಲ್ಲ ' ಎಂದು ಹುಡುಗಿಯೂ ಬಿಕ್ಕಿ ಬಿಕ್ಕಿ ಅತ್ತಳು.

ತಾಯಿಯು ಏನೂ ಮಾತನಾಡಲಿಲ್ಲ. ಹುಡುಗಿಯೇ ' ಅಮ್ಮ, ಇನ್ನುಮೇಲೆ ನಾನು ಸ್ಕೂಲಿಗೆ ಹೋಗುವುದಿಲ್ಲ. ಈ ದಿನ ಅವರ ಮನೆಗೆ ಹೋಗೋಣವೇ ? ' ಎಂದಳು.

' ಆಗಲಿ ತಾಯಿ, ನಿನ್ನ ಹಣೆಬರಹ ಹೇಗಿದೆಯೋ ! ' ಎಂದು ಪಾರ್ವತಿಬಾಯಿಯು ಹೇಳಿದಳು.

ಪಾರ್ವತಿಬಾಯಿಗೆ ಒಬ್ಬ ಮಗಳಲ್ಲದೆ ಮತ್ತೆ ಯಾರೂ ಇರಲಿಲ್ಲ. ಗಂಡ ಇನ್‌ಫ್ಲೂಯಂಜಾದಲ್ಲಿ ಎರಡು ವರ್ಷಗಳ ಹಿಂದೆಯೇ ತೀರಿ ಹೋಗಿದ್ದನು. ಅವಳಿಗಿದ್ದ ಆಸ್ತಿ ಅವರು ವಾಸಿಸುತ್ತಿದ್ದ ಮನೆ. ಗಂಡನ ಲೈಫ್ ಇನ್‌ಷ್ಯೂರೆನ್ಸ್ ಸಾವಿರ ರೂಪಾಯಿನಲ್ಲಿ ಅರ್ಧ ಮಗಳ ಮದುವೆಗಾಗಿ

ಖರ್ಚಾಗಿತ್ತು. ಉಳಿದ ಐನೂರು ಹಾಗೂ ಹೀಗೂ ಖರ್ಚಾಗುತ್ತಾ ಬಂದಿದ್ದಿತು. ಮಗಳು ಸುಖವಾಗಿರುವುದನ್ನು ನೋಡಿದರೆ ಸಾಕೆಂಬುದೇ ಅವಳ ಬಯಕೆ. ಹುಡುಗಿ ಬಲು ಬುದ್ಧಿವಂತಳು. ಇಂತಹವಳನ್ನು ಮುಂದೆ ಓದ ಬೇಡವೆಂದು ತಾನೆ ಹೇಗೆ ಹೇಳುವುದು ? ಹುಡುಗಿಯ ಗಂಡನ ಕಡೆಯವರು ಓದಬೇಡವೆಂದರೂ ಹಟಮಾರಿಯಾದ ಹುಡುಗಿ ಕೇಳಲಿಲ್ಲ. ಮುಖ್ಯ ಅವಳಿಗೆ ಶಾಲೆಯ ಮುಖ್ಯೋಪಾಧ್ಯಾಯಿನಿಯ ಬೆಂಬಲ. ಅಂತೂ ಈಗ ಸುಖಕ್ಕೆ ತಿಲಾಂಜಲಿಯನ್ನು ಕೊಡಲು ಸಿದ್ಧವಾಗಿರಬೇಕಾಯಿತು !

೨

ರಮಾಬಾಯಿಯೂ ಅವಳ ತಾಯಿಯೂ ಮನೆಗೆ ಬೀಗ ಹಾಕಿಕೊಂಡು ಜಾರ್ಜ್‌ಟೌನ್ ಕಡೆ ಹೊರಟರು. ಅಲ್ಲೇ ರಮೆಯ ಗಂಡ ಸೇತುರಾಯನಿದ್ದುದು. ಅದು ಇವರ ಮನೆಗೆ ಒಂದು ಮೈಲಿ ದೂರ ಮಾತ್ರ ಇತ್ತು. ಇಬ್ಬರೂ ಆ ಮನೆಯ ಹತ್ತಿರ ಬಂದರು. ಮುಂಬಾಗಿಲು ಹಾಕಿತ್ತು. ಪಾರ್ವತಿಬಾಯಿಯು 'ಅಮ್ಮ' ಎಂದು ಬಾಗಿಲ ತಟ್ಟಿದಳು.

'ಯಾರು ?' ಎಂಬ ಮುದುಕನೊಬ್ಬನ ಗರ್ಜನೆಯು ಒಳಗಿನಿಂದ ಬಂದಿತು. ದೇವರ ಧರ್ಮಕ್ಕೆ ಮುದುಕನ ತಂಗಿಯು ಮನೆಯಲ್ಲಿರಲಿಲ್ಲ.

'ನಾನು–ಪಾರ್ವತಿ' ಎಂದು ಹೇಳಿದಳು.

ಮುದುಕನು ಬಾಗಿಲನ್ನು ತೆಗೆದು, ಸೊಸೆಯ ಕಡೆ ನೋಡುತ್ತಾ, 'ನಿಮಗೂ ನಮಗೂ ಸಂಬಂಧವೇನು ?' ಎಂದು ಪಾರ್ವತಿಬಾಯನ್ನು ಕೇಳಿದನು.

ಹುಡುಗಿಯು ತಲೆ ಬಗ್ಗಿಸಿಕೊಂಡು ಕಣ್ಣೀರು ಸುರಿಸುತ್ತಿದ್ದಳು. ಸಂಜೆಯಿಂದ ಅವಳ ಮುಖದ ಮೇಲಿನ ನಗುವು ಎಲ್ಲಿಯೋ ಹೋಗಿತ್ತು; ಮುಖ ಸುಟ್ಟ ಬದನೆಕಾಯಿನಂತಿತ್ತು.

ಮುದುಕನ ಪ್ರಶ್ನೆಗೆ ಪಾರ್ವತಿಬಾಯಿ ಯಾವ ಉತ್ತರವನ್ನೂ ಕೊಡಲಿಲ್ಲ. ಹುಡುಗಿಗೆ ಬಲು ಕೋಪ ಬಂದಿತು. 'ನಿಮ್ಮ ಮಗನ ಕೈ ಹಿಡಿದಿದ್ದೇ ಸಂಬಂಧ' ಎಂದಳು.

'ಏನು ಮಾತುಗಾರಿಯೋ ! ಅಬ್ಬಬ್ಬಾ !! ನಾನು ಬೇರೆ ಮದುವೆ

ಮಾಡಿದ್ದೆ ಒಳ್ಳೇದಾಯ್ತು. ಓದಿದ ಹುಡುಗಿಯರ ಬಾಳೇ ಇದು. ನಿಮಗೆ ಇಲ್ಲೇನೂ ಕೆಲಸವಿಲ್ಲ ಹೊರಡಿ.'

'ಹುಡುಗಿ ಹೇಳಿದ್ದು ತಪ್ಪಾಯ್ತು. ಕ್ಷಮಿಸಿ. ತಾವು ತಿಳಿದವರು! ದೊಡ್ಡವರು' ಎಂದು ಪಾರ್ವತಿಬಾಯಿ ಹೇಳಿದಳು.

ಹುಡುಗಿಯು ತಾನು ಹದ್ದುಮೀರಿ ಮಾತನಾಡಿದ್ದು ತಪ್ಪೆಂದು ಕೊಳ್ಳುತ್ತಾ, ಮುದುಕನ ಕಾಲನ್ನು ಹಿಡಿದುಕೊಂಡು, 'ತಪ್ಪನ್ನು ಮನ್ನಿಸ ಬೇಕು' ಎಂದು ಕೇಳಿಕೊಂಡಳು. ಅವಳ ಒಂದೆರಡು ತೊಟ್ಟು ಕಣ್ಣೀರು ಅವನ ಕಾಲಿನ ಮೇಲೂ ಬಿತ್ತು. ಅವಳನ್ನು ಕಾಲಿನಿಂದ ಒದ್ದು 'ಹೊರಡಿ ಇಲ್ಲಿ ನಿಮಗೇನೂ ಕೆಲಸವಿಲ್ಲ' ಎಂದು ಹೇಳಿ, 'ಸೇತೂ' ಎಂದು ಮುದುಕ ಕೂಗಿದನು.

ಹೊಸ ಹೆಂಡತಿ ಉಮಾಬಾಯಿಯೊಡನೆ ಸರಸಸಲ್ಲಾಪದಿಂದಿದ್ದ ಸೇತುವು ಬಂದು ತಂದೆಯನ್ನು 'ಏನಪ್ಪಣೆ?' ಎಂದು ಕೇಳುವ ದೃಷ್ಟಿ ಯಿಂದ ನೋಡಿದನು. ಅವನಿಗೆ ಯಾವ ಕೆಲಸವೂ ಸಿಕ್ಕಿರಲಿಲ್ಲ. ಅಪ್ಪನ ಹದಿ ನೈದು ರೂಪಾಯಿ ಪೆನ್‌ಷನ್ನೇ ಮನೆಗೆ ಆಧಾರ. ಒಬ್ಬನೇ ಒಬ್ಬ ಮಗ. ಮತ್ತಾರೂ ಇರಲಿಲ್ಲ. ಇವನನ್ನು ಮುದುಕ ಮೊದಲಿನಿಂದಲೂ ತಾಯಿ ಯಿಲ್ಲದ ಮಗನನ್ನು ಬಲು ಪ್ರೀತಿಯಿಂದ ಸಾಕಿದ್ದನು. ತಂದೆ ಯಾವ ಮಾತನ್ನು ಹೇಳಿದರೂ ಮಗ ಮೀರುತ್ತಿರಲಿಲ್ಲ, ಮೀರುವ ಹಾಗೆಯೂ ಇರ ಲಿಲ್ಲ.

'ಇವರ ಕತ್ತು ಹಿಡಿದು ತಳ್ಳು' ಎಂದು ಮುದುಕ ಹೇಳಿದನು!

ಸೇತು ಹೆಂಡತಿಯ ಕಡೆ ನೋಡಿದನು. ಅವಳು ಹದಿಮೂರು ವರ್ಷದ ಹುಡುಗಿ; ಬಡವಳು; ಸಾಧಾರಣ ಉಡುಪನ್ನು ಉಟ್ಟಿದ್ದಳು. ಉಮಾ ಬಾಯಿಯಷ್ಟು ರೂಪವತಿಯಲ್ಲ. ಸಾಲದ್ದಕ್ಕೆ ಗಂಡನಿಗಿಂತ ಜಾಸ್ತಿಯಾಗಿ ಓದಿದ್ದಳು. ಸೇತುವಿಗೆ ಇದೊಂದು ಪ್ರಬಲವಾದ ಯೋಚನೆಯಾಗಿತ್ತು. ಆದುದರಿಂದ ಅವಳಮೇಲೆ ಕೋಪ. 'ಬಿಟ್ಟುಬಿಡುವುದೇ ಮೇಲು' ಎಂದು ಹಿಂದೆ ಅನೇಕ ಸಲ ಯೋಚಿಸಿದ್ದ ತಂದೆಯ ಮಾತನ್ನು ಕೇಳಿ 'ಹೊರಡಿ' ಎಂದನು. ಹುಡುಗಿಯು ತನ್ನ ದೈನ್ಯ ಕಟಾಕ್ಷವನ್ನು ಗಂಡನ ಮೇಲೆ ಬೀರಿದಳು. 'ಅಪ್ಪಾ! ಇನ್ನು ಮೇಲೆ ಶಾಲೆಗೆ ಕಳುಹಿಸುವುದಿಲ್ಲ.

ಮನೆಯಲ್ಲಿಟ್ಟುಕೊಳ್ಳಿ ' ಎಂದು ಕಣ್ಣೀರು ಸುರಿಸುತ್ತಾ ಪಾರ್ವತಿಬಾಯಿ ಹೇಳಿದಳು.

' ಇಂಥ ಮಿಲ್ಟ್ರೀರಿಗಳನ್ನು ನಾವು ಹೇಗೆ ಸಾಕೇವು ಹೊರಡಿ' ಎಂದು ಸೇತುರಾಮನು ಹೆಂಡತಿಯ–ಇಲ್ಲ ರಮೆಯ–ಕತ್ತುಹಿಡಿದು ನೂಕಿದನು. ಹುಡುಗಿಯು ಗಂಡನ ಕಾಲುಹಿಡಿದುಕೊಂಡು ' ಕಾಪಾಡಿ ! ' ಎಂದಳು.

'ಕಾಪಾಡುವವನು ನಾನಲ್ಲ, ದೇವರು. ಹೇಳುವುದು ನಿಮಗಲ್ಲವೇ ? ಹೊರಡಿ ' ಎಂದು ಮತ್ತೊಮ್ಮೆ ರಮೆಯನ್ನು ಕತ್ತುಹಿಡಿದು ಬೀದಿಗೆ ನೂಕಿ ಬಾಗಿಲು ಹಾಕಿಕೊಂಡನು.

ತಾಯಿಮಗಳು ಒಬ್ಬರನ್ನೊಬ್ಬರು ನೋಡಿಕೊಳ್ಳುತ್ತಾ, ಕಣ್ಣೀರು ಸುರಿಸುತ್ತಾ, ಏನೂ ಮಾತನಾಡದೆ ಮನೆಯನ್ನು ಸೇರಿದರು.

೩

ಮಗಳ ಗತಿಯನ್ನು ಕಂಡ ತಾಯಿಗೆ ಈ ಪ್ರಪಂಚವೇ ಬೇಡವಾಯಿತು. ರಾತ್ರಿ ಮಗಳು ಅನ್ನಮಾಡಿ ತಂದರೂ ಊಟಮಾಡದೆ ಹಾಗೆಯೇ ಮಲಗಿದಳು. ಅತ್ತು ಅತ್ತು ಕಣ್ಣುಗಳೆಲ್ಲಾ ಬಾತುಕೊಂಡಿದ್ದುವು.

ಹೀಗೆಯೇ ದಿನಗಳು ಕಳೆಯುತ್ತಾ ಬಂದುವು. ಪಾರ್ವತಿಬಾಯಿಯು ದುಃಖದಿಂದ ಕೃಶಳಾಗುತ್ತಾ ಹಾಸಿಗೆಯನ್ನು ಹಿಡಿದಳು. ರೋಗವು ವಿಪರೀತವಾಯಿತು. ಯಾವ ಔಷಧಿ ಕೊಟ್ಟರೂ ಮನೋರೋಗವು ವಾಸಿಯಾಗಲಿಲ್ಲ. ಅದಕ್ಕೆ ಮೊದಲು ಪಾರ್ವತಿಬಾಯಿಗೆ ಸರಿಯಾದ ಮದ್ದು ಕೊಡುವವರಾರು ? ಜ್ವರ ವಿಪರೀತವಾಯಿತು.

* * * * *

ಒಂದು ದಿನ ಹಾಸಿಗೆಯ ಪಕ್ಕದಲ್ಲಿ ರಮೆಯು ಕುಳಿತು, 'ಅಮ್ಮಾ ನನಗೆ ಮುಂದೆ ಗತಿಯಾರೆ ? ' ಎಂದು ಬಿಕ್ಕಿ ಬಿಕ್ಕಿ ಅಳತೊಡಗಿದಳು.

'ದೇವರಿದ್ದಾನೆ, ಕಂದಾ ! ಓದಿ ಯಾವದಾದರೂ ಕೆಲಸದಲ್ಲಿ ಸೇರು. ಅಷ್ಟೇ ನಿನ್ನ ಹಣೆಬರಹ. ವಂಶಕ್ಕೆ ಕೆಟ್ಟ ಹೆಸರು ತರದಿರು ' ಎಂದು ಮಗಳ ಮುಖವನ್ನು ನೋಡಿ ಕಣ್ಣೀರು ಸುರಿಸುತ್ತಾ ಪಾರ್ವತಿಬಾಯಿಯು ಹೇಳಿದಳು.

ಏನನ್ನು ಕೇಳಲು ಮಗಳಿಗೂ ಮನಸ್ಸಿಲ್ಲ. ಹೆಚ್ಚು ಹೇಳಲು ತಾಯಿಗೂ

ಇಷ್ಟವಿಲ್ಲ. ರಮೆ ಸುಮ್ಮನೆ ಅಳುತ್ತಾ ಕುಳಿತಳು. ಸಣ್ಣ ದೀಪವೊಂದು ಮಾತ್ರ ಉರಿಯುತ್ತಿತ್ತು. ಬಾಗಿಲ ಅಗಳಿ ಹಾಕಿತ್ತು. ಸ್ವಲ್ಪ ಹೊತ್ತಾದ ಮೇಲೆ ರಮೆ ಕುಳಿತಲ್ಲಿಯೇ ನಿದ್ದೆಹೋದಳು.

ಒಂದು ಹೊತ್ತಿನಲ್ಲಿ ರಮೆ ಎಚ್ಚತ್ತು ತಾಯಿಯನ್ನು ಮುಟ್ಟಿ ನೋಡಿದಳು. ಮೈ ತಣ್ಣಗಿತ್ತು! 'ಅಮ್ಮಾ!' ಎಂದು ಕೂಗಿ, 'ಗೊಳೋ' ಎಂದು ಅತ್ತಳು. ನೆರೆಹೊರೆಯವರೆಲ್ಲರೂ ಆ ಕತ್ತಲಲ್ಲಿಯೇ ಗಾಬರಿಯಿಂದ ಅಲ್ಲಿಗೆ ಬಂದರು. ಚಿಕ್ಕ ಹುಡುಗಿಯನ್ನು ಅನಾಥೆಯನ್ನಾಗಿ ಮಾಡಿಹೋದ ತಾಯಿಯ ಶವವನ್ನು ನೋಡಿ ಅವರೆಲ್ಲಾ ಮರುಗಿದರು.

ಬೆಳಗ್ಗೆ ಎಲ್ಲರ ಸಹಾಯದಿಂದಲೂ ಶವದ ದಹನ ಸಂಸ್ಕಾರವಾಯಿತು. ಯಾರೋ ತಂದೆಯ ಕಡೆಯ ದೂರದ ಬಂಧುಗಳು ಬಂದು ಕರ್ಮವನ್ನು ಮುಗಿಸಿದರು. ಅದಕ್ಕೆಲ್ಲಾ ಹಣ ಕೊಟ್ಟವಳು ರಮೆಯೇ. ಹನ್ನೆರಡನೆಯ ದಿನದ ಕರ್ಮವೂ ಪೂರೈಸಿತು. ಎಲ್ಲಾ ಬಂಧುಗಳೂ ಮನೆಬಿಟ್ಟು ಹೊರಟು ಹೋದರು. ಕೈಲಿದ್ದ ಹಣವೆಲ್ಲಾ ಖರ್ಚಾಗಿ ಹೋಯಿತು. ಈ ಕಾಲದಲ್ಲಿಯೂ ಕೂಡ ರಮೆ ಹೇಳಿಕಳುಹಿಸಿದ್ದರೂ ಸೇತುರಾಯನಾಗಲಿ, ಅವನ ತಂದೆಯಾಗಲಿ ಬರಲಿಲ್ಲ. ಎಂತಹ ಕಲ್ಲು ಮನಸ್ಸು ಅವರದು!

ಜೋಯಿಸರು ಧನಿಷ್ಠಾನಕ್ಷತ್ರವೆಂದೂ, ಮನೆಯನ್ನು ಮೂರು ವರ್ಷ ಬಿಡಬೇಕೆಂದೂ ಹೇಳಿದರು. ಹುಡುಗಿಯೊಬ್ಬಳೇ ಮನೆಯಲ್ಲಿರುವುದಕ್ಕೂ ಭಯ; ಏನು ಮಾಡಬೇಕೆಂದೂ ತೋಚದೆ ಸುಮ್ಮನೆ ಅಳುತ್ತಾ, ಯೋಚಿಸುತ್ತಾ, ಉರಿಯುತ್ತಿದ್ದ ಸಣ್ಣ ದೀಪದ ಮುಂದೆ ಅವಳು ಕುಳಿತಿದ್ದಳು. ಇದ್ದಕಿದ್ದಂತೆಯೇ ಅವಳ ಮನಸ್ಸಿನಲ್ಲೇನೋ ಹೊಳೆಯಿತು. ಅವಳು ದೀಪವನ್ನು ಆರಿಸಿ ಮನೆಗೆ ಬೀಗ ಹಾಕಿಕೊಂಡು ಹೊರಟಳು.

೪

ರಾತ್ರಿ. ಕಗ್ಗತ್ತಲು. ಬೀದಿಯಲ್ಲಿ ಎಲೆಕ್ಟ್ರಿಕ್ ದೀಪಗಳು ಇಲ್ಲೊಂದು ಅಲ್ಲೊಂದು ಮಿಣುಗುತ್ತಿದ್ದುವು. ಒಂಭತ್ತು ಗಂಟೆಯಲ್ಲಿ ತಿರುಪಲ್ಕೇಣಿಯ ದಾರಿಯಲ್ಲಿ ಹುಡುಗಿಯೊಬ್ಬಳೇ ಬರುತ್ತಿದ್ದಳು.

ಒಂದು ದೊಡ್ಡ ಬಂಗಲೆಯ ಬಳಿಗೆ ಬಂದು, ಗೇಟನ್ನು ತೆಗೆದು ಒಳ

ಹೊಕ್ಕಳು. ವಿಸ್ತಾರವಾದ ಮೈದಾನ. ನಡುವೆ ಬಂಗಲೆ. ಅದರ ಮುಂದೆ ಹೂವಿನ ಗಿಡಗಳು. ಇವಳನ್ನು ನೋಡಿ ಮನೆಯ ಮುಂದೆ ಕಟ್ಟಿದ್ದ ನಾಯಿಗಳು ಬಗುಳಲಾರಂಭಿಸಿದುವು. ಮನೆಯೊಳಗಿನಿಂದ ಇಂಗ್ಲೀಷರವನೊಬ್ಬನು ಬಂದು, ಮನೆಯ ಮುಂದಿನ ದೀಪದ ಸ್ವಿಚ್ ಹಾಕಿ ನೋಡಿದನು. ಹದಿಮೂರು ವರ್ಷದ ಹುಡುಗಿಯೊಬ್ಬಳು ಕಣ್ಣೀರು ಸುರಿಸುತ್ತಾ ನಿಂತಿದ್ದುದನ್ನು ಕಂಡು, ಮನೆಯೊಳಕ್ಕೆ ಹೋಗಿ ಹೆಂಡತಿಯನ್ನು ಕಳುಹಿಸಿದನು. ಆಂಗ್ಲರಮಣಿಯು ಬಂದು, ಅಳುತ್ತಾ ನಿಂತಿದ್ದ ಹುಡುಗಿಯನ್ನು ನೋಡಿ, 'ಏನು ರಮಾ! ಇಷ್ಟು ಹೊತ್ತಿನಲ್ಲಿ!' ಎಂದಳು.

ಹುಡುಗಿಯು ಏನೂ ಉತ್ತರಕೊಡದೆ ಮುಂದೆ ಬಂದು, ಆಂಗ್ಲ ರಮಣಿಗೆ ನಮಸ್ಕಾರ ಮಾಡಿ, 'ನೀವೇ ನನ್ನ ತಾಯಿ!' ಎಂದು ಕಣ್ಣೀರು ಸುರಿಸುತ್ತಾ ಹೇಳಿದಳು.

ಈ ಆಂಗ್ಲರಮಣಿಯೇ ಲೇಡಿ ವಿಲ್ಲಿಂಗ್‌ಟನ್ ಕಾಲೇಜಿನ ಪ್ರಿನ್ಸಿಪಾಲು-ಮಿಸೆಸ್ ರೋಜ್. ಬಲು ದಯಾಶಾಲಿನಿ. ಹಿಂದೂ ಹುಡುಗಿಯರನ್ನೂ ಸಹ ತನ್ನ ಮಕ್ಕಳಂತೆಯೇ ನೋಡುತ್ತಾ ಎಲ್ಲರ ದುಃಖವನ್ನೂ ಕೇಳುತ್ತಾ, ಸಹಾಯ ಮಾಡುತ್ತಿದ್ದಳು. ರಮೆಯು ಏನೂ ಹೇಳದೆ ಅಳುತ್ತಾ ಇದ್ದುದನ್ನು ನೋಡಿ, ಅವಳನ್ನು ಅಪ್ಪಿಕೊಂಡು ಮುದ್ದಿಟ್ಟು, 'ಹೇಳಮ್ಮ ಮರೆಮಾಚಬೇಡ ನಿನಗೆ ಎಷ್ಟು ಕಷ್ಟವಿದ್ದರೂ ಸಹಾಯ ಮಾಡುತ್ತೇನೆ. ಹದಿನೈದು ದಿನಗಳಿಂದ ಶಾಲೆಗೇಕೆ ಬರಲಿಲ್ಲ? ಹೇಳು ತಾಯಿ' ಎಂದಳು.

ಹುಡುಗಿಯು ಅಳುತ್ತಲೇ 'ತಾಯಿ! ನಾನು ಓದಿದ ಹುಡುಗಿಯೆಂದು ನನ್ನ ಕೈಹಿಡಿದ ಗಂಡ ಬಿಟ್ಟು ಎರಡನೆಯ ಮದುವೆ ಮಾಡಿಕೊಂಡರು. ತಂದೆ ಎರಡು ವರ್ಷಗಳ ಹಿಂದೆಯೇ ತೀರಿಹೋದ. ನನ್ನನ್ನು ಗಂಡನ ಮನೆಗೆ ಸೇರಿಸುವ ಆಶೆಯಿಂದ ತಾಯಿ ನನ್ನನ್ನು ಅವರ ಮನೆಗೆ ಕರೆದುಕೊಂಡು ಹೋದಳು. ಅವರು ನಮ್ಮನ್ನು ನಿರಾಕರಿಸಿ ಕತ್ತುಹಿಡಿದು ತಳ್ಳಿಬಿಟ್ಟರು. ಆ ದುಃಖದಿಂದಲೇ ಖಾಯಿಲೆ ಬಿದ್ದು ಅವಳು ಸತ್ತು ಹದಿಮೂರು ದಿನಗಳಾದುವು. ನನಗಾರೂ ದಿಕ್ಕಿಲ್ಲ. ನೀವೇ ಕಾಪಾಡಬೇಕು. ಅನಾಥೆ ನಾನು!' ಎಂದಳು.

'ನನ್ನ ಕಂದಾ! ಎಂಥ ಸಮಾಜವೇ ನಿಮ್ಮದು! ಓದಿದರೆ ಗಂಡ

ಬಿಡಬೇಕೆ? ನಿನ್ನಂಥ ಬುದ್ಧಿವಂತಳಾದ ಮಗಳು ನನಗಿದ್ದಿದ್ದರೆ ಎಷ್ಟು ಸಂತೋಷಪಡುತ್ತಿದ್ದೆನೋ! ನನ್ನ ಮಗಳೂ ಇದ್ದಾಳೆ. ಏನು ಪ್ರಯೋಜನ? ಅವಳ ಗಂಡ ಕೂಡ ಓದು ಓದು ಎಂದು ಎಷ್ಟು ಹೇಳಿದರೂ ಪ್ರಯೋಜನವಿಲ್ಲ. ನಿನ್ನಂತಹವಳು ಓದು ಬಿಟ್ಟರೆ ಶಾಲೆಗೆ ಕೀರ್ತಿ ಹೇಗೆ ಬರುತ್ತೆ? ಈ ದಿನ ಇಲ್ಲಿಯೇ ಇಟ್ಟುಕೊಂಡು ನಾಳೆ ಹಾಸ್ಟೆಲಿಗೆ ಕಳುಹುತ್ತೇನೆ. ನಿನಗೆ ಬೇಕಾದ ಸಹಾಯವನ್ನೆಲ್ಲಾ ಮಾಡುತ್ತೇನೆ. ನನ್ನನ್ನು ನಿನ್ನ ತಾಯಿಯೆಂದೇ ತಿಳಿ. ಬುದ್ಧಿವಂತೆಯಾಗಿ ಓದು' ಎಂದು ಕೈಹಿಡಿದು ಮನೆಯೊಳಕ್ಕೆ ಕರೆದುಕೊಂಡು ಹೋಗಿ, ತನ್ನ ಮಂಚದ ಮೇಲೆ ಕುಳ್ಳಿರಿಸಿದಳು.

ಆಕೆ ಸ್ವಲ್ಪ ಹೊತ್ತಾದ ಮೇಲೆ ಒಂದು ಬಟ್ಟಲಿನಲ್ಲಿ ಹಾಲನ್ನೂ ಕೆಲವು ಹಣ್ಣುಗಳನ್ನೂ ರಮೆಗೆ ತಂದುಕೊಟ್ಟಳು. 'ನಾನು ಊಟ ಮಾಡಿಯೇ ಇಲ್ಲಿಗೆ ಬಂದದ್ದು. ನನಗೇನೂ ಬೇಡ' ಎಂದು ರಮೆಯು ಹೇಳಿದಳು.

'ನೋಡಿದೆಯಾ ನಿನ್ನ ಬುದ್ಧಿ' ಎಂದು ಹೇಳಿ, ಕರುಣಾಕಟಾಕ್ಷದಿಂದ ರೋಜಳು ರಮೆಯನ್ನು ನೋಡಿದಳು.

'ನಿಮ್ಮ ಮನಸ್ಸನ್ನೇಕೆ ನೋಯಿಸಬೇಕು' ಎಂದು ಹೇಳಿ, ಹುಡುಗಿಯು ಕೆಲವು ಹಣ್ಣುಗಳನ್ನು ತಿಂದು ಹಾಲು ಕುಡಿದಳು. ರಾತ್ರಿಯಲ್ಲಿ ರೋಜಳು ರಮೆಯನ್ನು ತನ್ನ ಹಾಸಿಗೆಯ ಮೇಲೆಯೇ ಮಲಗಿಸಿಕೊಂಡು ಸಮಾಧಾನಪಡಿಸುತ್ತಿದ್ದಳು.

೫

ಸಂಜೆ ನಾಲ್ಕು ಗಂಟೆಯ ಸಮಯ ಮದರಾಸಿನ ವಿದ್ಯಾಭ್ಯಾಸದ ಇಲಾಖೆಯ ಡೆಪ್ಯುಟಿ ಇನ್‌ಸ್ಪೆಕ್ಟ್ರೆಸ್ ಆಫೀಸಿನ ಮುಂದೆ ಜವಾನನೊಬ್ಬನು ತೂಕಡಿಸುತ್ತಿದ್ದನು. ಐವತ್ತು ವರ್ಷದ ಮುದಿ ಗುಮಾಸ್ತನೊಬ್ಬನು ಹೊಸದಾಗಿ ಬಂದು, ಆರು ದಿನಗಳ ಹಿಂದೆ ಕೆಲಸ ವಹಿಸಿದ ಇನ್‌ಸ್ಪೆಕ್ಟ್ರೆಸ್ ಬಳಿ ಸಹಿ ಮಾಡಿಸಲು ಕೆಲವು ಕಾಗದಗಳನ್ನು ತಂದು ಮೇಜಿನ ಮೇಲಿಟ್ಟು ಸ್ವಲ್ಪ ದೂರದಲ್ಲಿ ನಿಂತನು. ಇನ್‌ಸ್ಪೆಕ್ಟ್ರೆಸ್—ಅಲ್ಲ ಸಾಹೇಬಳು ಪೂರ್ತ ಇಂಗ್ಲಿಷು ಉಡುಪಿನಲ್ಲಿಯೇ ಇದ್ದಳು. ಆಕೆ ನೋಡಲು ಇಂಗ್ಲಿಷಳೊ

ಇಲ್ಲವೆ ಆಂಗ್ಲೊಇಂಡಿಯನ್ನೋ ಎಂದೇ ಹೇಳಬಹುದಾಗಿತ್ತು; ಪ್ರತಿ ಕಾಗದಕ್ಕೂ ರುಜು ಹಾಕುತ್ತಿದ್ದಳು.

ಜವಾನನು ಬಂದು ನಮಸ್ಕರಿಸಿ, 'ತಾಯಿಯವರನ್ನು ನೋಡಲು ಯಾರೋ ಸೇತುರಾಯರು ಬಂದಿದ್ದಾರೆ' ಎಂದನು.

'ಅವರನ್ನು ಬರಹೇಳು'

ಇನ್‌ಸ್ಪೆಕ್ಟ್ರಸ್ಸು ಸ್ವಲ್ಪ ದೂರದಲ್ಲಿದ್ದ ಕುರ್ಚಿಯೊಂದನ್ನು ಮೇಜಿನ ಬಳಿ ಎಳೆದು ರುಜು ಹಾಕುವದನ್ನು ನಿಲ್ಲಿಸಿ ಮೇಜಿನ ಬಳಿ ನಿಂತಳು.

ಸಂಸಾರದ ಕಷ್ಟದಿಂದ ಬಳಲಿದ್ದ ಸೇತುರಾಯನು ನೆಟ್ಟಗೆ ಬಂದು, ಸಾಹೇಬಳ ಕಾಲಿಗೆ ಅಡ್ಡಲಾಗಿ ಬಿದ್ದು, 'ತಾಯಿ! ಕಾಪಾಡಬೇಕು' ಎಂದು ಕಣ್ಣೀರು ಸುರಿಸುತ್ತಾ ಹೇಳಿದನು. ಸಾಹೇಬಳು ಅವನಿಗೂ ನಮಸ್ಕರಿಸಿ, ಅವನ ಕೈಹಿಡಿದು ಮೇಲಕ್ಕೆತ್ತಿ, 'ಕುಳಿತುಕೊಳ್ಳಿ' ಎಂದು ಕುರ್ಚಿಯನ್ನು ತೋರಿಸಿದಳು. ಈ ದೃಶ್ಯವನ್ನು ನೋಡುತ್ತಿದ್ದ ಗುಮಾಸ್ತನಿಗೆ ಆಶ್ಚರ್ಯವಾಯಿತು. 'ಎಂತೆಂತಹ ದೊಡ್ಡ ಮನುಷ್ಯರನ್ನೋ ಲಕ್ಷಿಸದೆ ಈಕೆ ಈ ಬಡಬ್ರಾಹ್ಮಣನನ್ನೇಕೆ ಇಷ್ಟು ಗೌರವದಿಂದ ನೋಡುವಳು' ಎಂದುಕೊಂಡನು.

ಸೇತುರಾಯನು ಕಣ್ಣೀರು ಸುರಿಸುತ್ತಲೇ, ಕೈಜೋಡಿಸಿಕೊಂಡು, 'ತಾಯಿ....'

'ತಾಯಿ ಎನ್ನಬೇಡಿ. ಸುಮ್ಮನೆ ಹೇಳಿ'

'ಅಮ್ಮ! ನಾನು ದೊಡ್ಡ ಸಂಸಾರಿ. ನಾಲ್ಕು ಜನ ಹೆಣ್ಣುಮಕ್ಕಳು. ಮುದಿ ತಂದೆಯೊಬ್ಬ. ಹೆಂಡತಿ. ಬರುವುದು ೧೫ ರೂಪಾಯಿ. ದೊಡ್ಡ ಮಗಳಿಗೆ ಹತ್ತು ವರ್ಷ. ಮದುವೆ ಮಾಡಬೇಕು............'

'ಪುನಃ 'ಅಮ್ಮ' ಹೋಗಲಿ. ಏನಾದರೂ ಹೇಳಿಕೊಳ್ಳಲಿ' ಎಂದುಕೊಂಡು, 'ನಿಮ್ಮ ದೊಡ್ಡ ಹುಡುಗಿ ಲೋವರ್ ಸೆಕೆಂಡರಿಯಲ್ಲಿ ಓದುತ್ತಿರುವ ಸಾವಿತ್ರಿಯಲ್ಲವೇ? ಎಂದು ಕೇಳಿದಳು.'

'ಹೌದು ತಾಯಿ; ಅವಳೇ!' ಎಂದು ದೈನ್ಯದಿಂದ ಹೇಳಿದನು.

'ಅವಳು ಬಲು ಬುದ್ಧಿವಂತೆ. ಏನು ರಾಯರೇ! ನೀವೂ ಮಗಳನ್ನು ಅಷ್ಟರ ವರೆಗೂ ಓದಿಸಿದಿರಾ?'

'ಯಾಕೆ; ಓದಿಸಬಾರದೆ, ತಾಯಿ ?'

'ಈಗಲಾದರೂ ಹುಡುಗಿಯು ಓದಿದರೆ ಒಳ್ಳೆಯದೆಂಬುದನ್ನು ತಿಳಿದು ಕೊಂಡಿದ್ದೀರಲ್ಲಾ ? ಎಂದು ಹೇಳಿ ಆಕೆ ಸ್ವಲ್ಪ ನಕ್ಕಳು.

'ಮೊದಲಿನಿಂದಲೂ ತಿಳಿದುಕೊಂಡಿದ್ದೇನೆ.'

'ಹಾಗಾದರೆ ನಿಮ್ಮ ಮೊದಲನೆಯ ಹೆಂಡತಿಯನ್ನು ಯಾಕೆ ಬಿಟ್ಟಿರಿ ?'

ರಾಯನು ಏನೂ ಉತ್ತರ ಕೊಡಲಿಲ್ಲ; ಬೆಪ್ಪಾಗಿ ನಿಂತನು. ದಾಸ ಮಾತೆಯಬಳಿ ಬೇಡುವಿಕೆಯ ಕಟಾಕ್ಷದಿಂದಲೂ ತನ್ನ ಎಲ್ಲಾ ವಿಷಯ ಗಳೂ ಆಕೆಗೆ ಹೇಗೆ ತಿಳಿಯಿತೆಂಬ ಆಶ್ಚರ್ಯದಿಂದಲೂ ಇದ್ದವನಂತೆ:

'ಅದೆಲ್ಲಾ ಆಗಿಹೋಯಿತು. ಅವಳ ಪುರಾಕೃತ ಕರ್ಮಫಲವದು. ಆ ಮಾತು ಈಗ ಏಕೆ ತಾಯಿ ? ನನಗೆ ಬರುವ ಹಣ ಹದಿನೈದು ದಿನಕ್ಕೂ ಆಗುವುದಿಲ್ಲ. ಐದು ದಿನದಿಂದ ಮನೆಯವರೆಲ್ಲರೂ ಉಪವಾಸ. ತಾಯಿ, ಪ್ರಮೋಷನ್ ಕೊಡಬೇಕು.'

'ನಿಮಗಿಂತಲೂ ಸೀನಿಯರ್ಸ್ ಎಷ್ಟೋ ಜನರಿದ್ದಾರೆ' ಎಂದು ದರ್ಪ ದಿಂದ ಆಕೆ ಹೇಳಿದಳು.

'ಇದ್ದಾರೆಂದು ಬಲ್ಲೆ ತಾಯಿ. ಅದನ್ನು ತಿಳಿದೇ ಬರಬಾರದೆಂದಿದ್ದೆ. ಈ ದಿನ ಬೆಳಿಗ್ಗೆ ನನ್ನ ಹೆಂಡತಿ 'ಯಾರೋ ದಯಾಳುವಾದ ಇನ್‌ಸ್ಪೆಕ್ಟರು ಬಂದಿದ್ದಾರೆಂದು ನಮ್ಮ ಸಾವಿತ್ರಿ ಹೇಳಿದಳು. ಆಕೆಗೆ ಹೋಗಿ ನಮ್ಮ ಕಷ್ಟವನ್ನೆಲ್ಲಾ ಹೇಳಿ. ಅರ್ಧ ಹೊಟ್ಟೆಗಾದರೂ ಅನ್ನ ಹಾಕುವಂತೆ ಮಾಡು ತ್ತಾಳೆ. ಆ ಮಹಾ ತಾಯಿ '. ಎಂದಳು. ನಿರ್ವಾಹವಿಲ್ಲದೆ ಬಂದೆ. ಬದುಕಿಸು ವುದು ನಿಮ್ಮ ಕೈಯಲ್ಲಿದೆ, ತಾಯಿ ' ಎಂದು ಮತ್ತೊಮ್ಮೆ ಅಡ್ಡಬಿದ್ದು ನಮಸ್ಕಾರ ಮಾಡಿದನು.

ಸಾಹೇಬಳು ಸ್ವಲ್ಪ ಹಿಂದಕ್ಕೆ ಸರಿದು, 'ಏಳಿ ರಾಯರೆ; ನಿಮಗೆ ಅರ್ಧ ಹೊಟ್ಟೆಗಾದರೂ ಇದ್ದುಕೊಂಡೇ ಹೀಗೆ ಒದ್ದಾಡುತ್ತಿದ್ದೀರಲ್ಲಾ ! ಹೊಟ್ಟೆ ಗಿಲ್ಲದೆ ಎಲ್ಲರೂ ಕೈಬಿಟ್ಟ ರಮಾ, ಅವಳ ತಾಯಿ ಇವರ ಗತಿ ತಿಳಿದೂ ಅವರಿಗೆ ಆಗ ಸಹಾಯ ಮಾಡಲು ಮನಸ್ಸು ಬಾರದ ನಿಮ್ಮಂಥ ಕಠಿಣ ಹೃದಯರಿಗೆ ಸಹಾಯಮಾಡಲು ಯಾರಿಗೆ ತಾನೆ ಮನಸ್ಸು ಬರುತ್ತೆ ?'

ಎಂದು ನೀರು ತುಂಬಿದ ಕಣ್ಣಿನಿಂದ ಸೇತುರಾಯನನ್ನು ದೃಷ್ಟಿಸಿ ನೋಡುತ್ತಾ ಗದ್ಗದ ಸ್ವರದಿಂದ ಹೇಳಿದಳು.

'ರಮಾ! ನಿಮಗೆ ಗೊತ್ತೆ ತಾಯಿ?'

'ಎಲ್ಲಾ ಗೊತ್ತು. ಅವಳ ತಾಯಿ, ಮಗಳ ಗೋಳನ್ನು ನೋಡಿ ಪ್ರಾಣ ಬಿಟ್ಟಳು. ಅವಳೂ ಅನಾಥೆ ಏನಾದಳೊ! ಯಾರಿಗಾದರೂ ಸಹಾಯ ಮಾಡಬಲ್ಲೆ. ಆದರೆ ನಿಮಗೆ ಮಾಡಲು ಮನಸೊಲ್ಲದು. ಹೊರಡಿ.'

ಸೇತುರಾಯನು ಕದಲಲಿಲ್ಲ; 'ತಾಯಿ, ತಪ್ಪಾಯಿತು! ಹೇಗಾದರೂ ಅನ್ನ ಹಾಕಿ ಕಾಪಾಡಬೇಕು' ಎಂದು ಕೈಮುಗಿದು ಕಣ್ಣೀರು ಸುರಿಸಿದನು

'ನಿಮಗೆ ಸಹಾಯ ಮಾಡಲಾರೆ ಹೊರಡಿ. ಇನ್ನು ಆಳನ್ನು ಕೂಗ ಬೇಕಾಗುತ್ತೆ' ಎಂದು ಆಕೆ ಕೋಪದಿಂದ ಹೇಳಿದಳು.

'ದೇವರು ಕೈಬಿಟ್ಟಾಗ ಎಲ್ಲರೂ ಕೈಬಿಡುವರು ತಾಯಿ.'

'ಹೌದು. ಯಾರಿಲ್ಲವೆಂದರು? ಅಂತಹ ವೇಳೆಯಲ್ಲಿ ತಮ್ಮ ಕೈಯನ್ನು ತಾವೇ ಹಿಡಿದುಕೊಳ್ಳಬೇಕು.'

ಸೇತೂರಾಯನು ಏನೂ ಮಾತನಾಡದೆ ಕಣ್ಣೀರು ಸುರಿಸುತ್ತಾ ಹೊರಟು ಹೋದನು.

ಸಾಹೇಬಳು ಕುರ್ಚಿಯಮೇಲೆ ಕುಳಿತು ಕಾಗದಗಳಿಗೆ ರುಜುಮಾಡಲು ಮೊದಲು ಮಾಡಿದಳು. ಕಣ್ಣೀರ ತೊಟ್ಟುಗಳು ಕಾಗದದ ಮೇಲೆ ಬೀಳಲು ಪ್ರಾರಂಭವಾದವು. ಆಕೆಗೆ ಸರಿಯಾಗಿ ರುಜುಮಾಡಲೂ ಸಹ ಆಗಲಿಲ್ಲ. ಆಕೆ ಪೆನ್ನನ್ನು ಮೇಜಿನ ಮೇಲಿಟ್ಟು, 'ಉಸ್ಸಪ್ಪ!' ಎಂದು ನಿಟ್ಟುಸಿರು ಬಿಟ್ಟಳು.

'ಏನು ತಾಯಿ! ಸೇತುರಾಯರ ಬಡತನ ನೋಡಿ ಏಕೆ ಹೀಗೆ ವ್ಯಥೆ. ಪಡುತ್ತೀರಿ? ಅವರಿಗಿಂತಲೂ ಎಷ್ಟೋ ಬಡವರಾಗಿದ್ದಾರೆ, ಎಂದು ಗುಮಾಸ್ತನು ಹೇಳಿದನು.

'ಇದ್ದಾರೆ. ರಾಮರಾಯರೇ ನೀವು ಮೈಲಾಪುರದಲ್ಲಿ ಈಗ ಹನ್ನೊಂದು ವರ್ಷಗಳ ಕೆಳಗಿದ್ದಿಲ್ಲವೇ?'

'ಹೌದು ತಾಯಿ!'

'ಸುಖವಾಗಿರಿಪ್ಪ!' ಎಂದು ಕಣ್ಣೀರು ಸುರಿಸುತ್ತಾ ಆಕೆ ಹೇಳಿದಳು.

'ಸೇತೂರಾಯರ ಹರಕಲು ಬಟ್ಟೆಯನ್ನು ನೋಡಿ ನಿಮಗೇಕೆ ಹೀಗೆ ಕಣ್ಣೀರು ಸುರಿಯುತ್ತಿದೆರಮ್ಮ?

ಅವಳು 'ಯಾಕೂ ಇಲ್ಲ. ನನ್ನ ರಮಾ ನೆನಪಾಯಿತು' ಎಂದಳು.

ಮುಂದೆ ಪ್ರಶ್ನೆ ಮಾಡಲು ಗುಮಾಸ್ತನಿಗೆ ಧೈರ್ಯವಿಲ್ಲ. ಅವನು ಸುಮ್ಮನಾದನು.

'ನನಗೆ ಮೈ ಸ್ವಸ್ಥವಿಲ್ಲ. ನಾಳೆ ಆಫೀಸಿಗೆ ಬರುವುದಿಲ್ಲ. ನಾಳೆ ಸಂಜೆ ಆರು ಗಂಟೆ ಹೊತ್ತಿಗೆ ಮನೆ ಹತ್ತಿರಕ್ಕೆ ಬರುತ್ತೀರಾ? ಆಳನ್ನು ಕಳುಹಿಸುತ್ತೇನೆ' ಎಂದು ಇನ್‌ಸ್ಪೆಕ್ಟ್ರೆಸ್ ಹೇಳಿದಳು.

'ಅಪ್ಪಣೆಯಂತೆ, ಆಗಲಿ ತಾಯಿ' ಎಂದು ನಮಸ್ಕರಿಸಿ, ಕಾಗದಗಳನ್ನು ತೆಗೆದುಕೊಂಡು ರಾಮರಾಯನು ಹೋದನು.

೬

ಮಾರನೆಯ ದಿನ ಸಂಜೆ ಆರುಗಂಟೆಯಲ್ಲಿ ಗುಮಾಸ್ತ ರಾಮರಾಯನು ಇನ್‌ಸ್ಪೆಕ್ಟ್ರೆಸ್ ಮನೆಯೊಳಕ್ಕೆ ಬಂದನು. ಅವನು ಆ ಮನೆಯನ್ನು ನೋಡಿದ್ದು ಅದೇ ಮೊದಲನೆಯ ದಿನ. ಬಹುಶಃ ಕ್ರಿಸ್ತರ ಮನೆ ಇರಬಹುದೆಂದುಕೊಂಡಿದ್ದನು. ಆದರೆ ಈ ದಿನ ಸಾಹೇಬಳು ಅಮ್ಮನವರಾಗಿದ್ದಳು. ಆಕೆ ರೇಷ್ಮೆಯ ಜರತಾರಿ ಹಸುರು ಸೀರೆಯುಟ್ಟಿದ್ದಳು; ಹಸುರು ಜಾಕೀಟು ತೊಟ್ಟಿದ್ದಳು. ಕೈಗೆ ಎರಡೆರಡು ಚಿನ್ನದ ಬೊಂಬಾಯಿ ಬಳೆಗಳು. ಕಿವಿಯಲ್ಲಿ ಹಿಂದಿನ ದಿನದ ಲೋಲಾಕೆ. ಕತ್ತಿನಲ್ಲಿ ಚಿನ್ನದ ಚೈನು. ಕಾಲಲ್ಲಿ ಬೂಟ್ಸಿಲ್ಲ. ಹಣೆಯಲ್ಲಿ ಕುಂಕುಮವಿತ್ತು! ಅಂತು ಈ ದಿನ ೨೫ ವರ್ಷದ ಹಿಂದೂ ರಮಣಿಯಾಗಿದ್ದಳು!

ಈಕೆಯನ್ನು ನೋಡಿ ರಾಮರಾಯನಿಗೆ ಆಶ್ಚರ್ಯವಾಯಿತು. 'ಎಷ್ಟು ಬೇಗನೆ ಉಡುಪು ಜಾತಿ ಬದಲಾಯಿಸುವುದು!' ಎಂದುಕೊಂಡನು. ಏನನ್ನು ವಿಚಾರಿಸಲೂ ಧೈರ್ಯವಿಲ್ಲ. ಇವನ ಮುಖವನ್ನು ನೋಡಿ ನಸುನಗೆಯಿಂದ, 'ನನ್ನ ಹಿಂದಿನ ನೆನಪಾವುದಾದರೂ ಇದೆಯೇ?' ಎಂದು ಆಕೆ ಕೇಳಿದಳು.

'ಈಕೆ ರಮೆಯಲ್ಲವಂತೆ. ಅವಳ ಸ್ನೇಹಿತೆಯಂತೆ. ಯಾರೋ !' ಎಂದು ಕೊಂಡು, 'ನೆನಪಿಲ್ಲ ತಾಯಿ' ಎಂದು ರಾಮರಾಯನು ಹೇಳಿದನು.

'ನೀವು ಒಮ್ಮೆ ಕಷ್ಟಕಾಲದಲ್ಲಿ ನನಗೆ ಸಹಾಯ ಮಾಡಿದ್ದೀರಿ, ರಾಮ ರಾಯರೇ.'

'ನನಗೆ ಅದಾವುದೂ ನೆನಪಿಲ್ಲ; ಇದೂ ಅಲ್ಲದೆ ನಾನು ಯಾರಿಗೂ ಸಹಾಯ ಮಾಡಿಲ್ಲವಮ್ಮ.'

'ಮುಂದೆ ಎಲ್ಲಾ ನಿಮಗೇ ತಿಳಿಯುತ್ತೆ. ಈಗ ಸೇತುರಾಯರ ಮನೆಗೆ ಹೋಗಬೇಕು.'

'ಅಪ್ಪಣೆ ತಾಯಿ'

ರಾಯರೂ ಅಮ್ಮನವರೂ ವಿಕ್ಟೋರಿಯಾದಲ್ಲಿ ಕುಳಿತರು. 'ರಾತ್ರಿ ಬಂದುಬಿಡುತ್ತೇನೆ' ಎಂದು ಮನೆಯ ಅಡಿಗೆಯವಳಿಗೆ ಆಕೆ ಹೇಳಿದಳು.

ವಿಕ್ಟೋರಿಯಾ ಹೊರಟು ಸೇತುರಾಯನ ಮನೆಯ ಮುಂದೆ ನಿಂತಿತು. ಮನೆಯ ಮುಂದೆ ನಿಂತಿದ್ದ ಸಾವಿತ್ರಿ ಇವಳನ್ನು ನೋಡಿ, ಮನೆಯೊಳಕ್ಕೆ ಹೋಗಿ, 'ಅಮ್ಮಾ ಇನ್‌ಸ್ಪೆಕ್ಟರು!' ಎಂದಳು. ಮನೆಯೊಳಗಿನಿಂದ ಉಮಾ ಬಾಯಿ ಬಂದು, ವಿಕ್ಟೋರಿಯಾದಿಂದ ಇಳಿದ ರಮಣಿಗೆ ನಮಸ್ಕರಿಸಿ, 'ತಮ್ಮ ಪಾದಧೂಳಿಯಿಂದ ನಮ್ಮ ಮನೆ ಪವಿತ್ರವಾಯಿತು. ಬಡವರ ಮನೆಗೆ ತಾವು ಬಂದುದೇ ಆಶ್ಚರ್ಯ. ಬನ್ನಿ ತಾಯಿ' ಎಂದು ಕೈಜೋಡಿಸಿಕೊಂಡು ಹೇಳಿದಳು; ಇಬ್ಬರೂ ಮನೆಯೊಳಕ್ಕೆ ಹೋದರು. ಸಾವಿತ್ರಿ 'ನಮಸ್ಕಾರ ಮ್ಯಾಡಮ್!' ಎಂದಳು.

'ನಮಸ್ಕಾರವಮ್ಮ, ನಿನ್ನ ಮುದ್ದು ಮುಖ ನೋಡಿಯೇ ಈ ಮನೆಗೆ ಬಂದೆ' ಎಂದು ನಗುತ್ತಾ, ಸಾವಿತ್ರಿಯ ತಲೆ ಸವರುತ್ತಾ ಆಕೆ ಹೇಳಿದಳು.

ಸೇತೂರಾಯನು ಒಳಗಿನ ಕೊಟಡಿಯಿಂದ ಬಂದು, ಈಕೆಯ ಮುಖ ವನ್ನು ನೋಡಿ ಬೆಪ್ಪಾಗಿ ನಿಂತನು. ಆದರೆ ನಮಸ್ಕಾರ ಮಾಡಲಿಲ್ಲ! ಸಾವಿತ್ರಿ ತನ್ನ ತಾತನನ್ನು ಕರೆದುಕೊಂಡು ಬಂದು 'ಇವರೇ ನಮ್ಮ ಇನ್‌ಸ್ಪೆಕ್ಟರು' ಎಂದಳು.

ಇನ್‌ಸ್ಪೆಕ್ಟರನ್ನು ಮುದುಕನ ಕಾಲುಮುಟ್ಟಿ ನಮಸ್ಕಾರ ಮಾಡಿದಳು. 'ನಿಮ್ಮನ್ನು ದೇವರು ಒಳ್ಳೆಯ ಸ್ಥಿತಿಯಲ್ಲಿಟ್ಟಿರಬೇಕಮ್ಮ. ನಮ್ಮ

ಸೇತುವಿಗೆ ೧೦ ರೂಪಾಯಿ ಪ್ರಮೋಷನ್ ಕೊಟ್ಟು ನಮಗೆ ಅನ್ನ ಹಾಕಿದ ತಾಯಿ ನೀವು. ಎದುರಾಗಿ ಬೈದರೂ ನಿಮ್ಮ ಹೃದಯ ಒಳ್ಳೆಯದು' ಎಂದು ಮುದಕ ಆಕೆಯನ್ನು ಹರಿಸಿ ಹೇಳಿದನು.

'ನಿಮ್ಮ ಹೃದಯ ಬಲು ಕೆಟ್ಟದ್ದಲ್ಲವೆ?' ನಸುನಗುತ್ತಾ ಆಕೆ ಕೇಳಿದಳು.

ಮುದುಕ ಹಾಗೆಯೇ ಆಕೆಯನ್ನು ದೃಷ್ಟಿಸಿ ನೋಡಿದನು. ಸೇತುವು ಮುದಕನ ಬಳಿ ಬಂದು ನಿಂತನು. 'ನಾನು ಯಾರಿಗೂ ಕೆಟ್ಟದ್ದು ಮಾಡಿಲ್ಲ ವಮ್ಮ' ಎಂದು ಮುದುಕ ಹೇಳಿದನು.

'ಅಯ್ಯೋ ಪಾಪ ಇಲ್ಲವೇ? ನಿಮ್ಮ ಸೊಸೆ ರಮೆಗೆ?'

'ನನ್ನ ಸೊಸೆ ರಮೆಗೆ!'

'ಹೌದು'

ಮುದುಕ ಅವಳನ್ನು ಚೆನ್ನಾಗಿ ದೃಷ್ಟಿಸಿನೋಡಿ, 'ನೀವು ಅವಳಂತೆಯೇ ಇದ್ದೀರಿ!' ಎಂದನು.

'ಆಗಿನ ಆ ಅನಾಥೆಯೇ, ಆ ರಮೆಯೇ, ನಾನು'

ಮುದುಕ, ರಾಮರಾಯ ಮೊದಲಾದವರೆಲ್ಲರೂ ಆಶ್ಚರ್ಯಪಟ್ಟರು. ಸೇತೂರಾಯನು ಲಜ್ಜೆ ಯಿಂದ ತಲೆ ಬಗ್ಗಿಸಿಕೊಂಡಿದ್ದನು!

'ರಾಮರಾಯರು ಮಹಾತ್ಮರು. ನಮ್ಮ ತಾಯಿ ಸತ್ತಾಗ ಅನ್ನ ಮೊದಲಾದವನ್ನು ಕೊಟ್ಟು ಸಹಾಯಮಾಡಿದರು. ಆಮೇಲೆ ಮಿಸೆಸ್ ರೋಜ್ ವಿದ್ಯೆಗೆ ಸಹಾಯಮಾಡಿ ಸೀಮೆಗೆ ಕಳುಹಿಸಿದರು; ಅಲ್ಲಿ ಎಂ. ಎ, ಎಂ, ಇಡಿ. ಮಾಡಿಕೊಂಡು ಬಂದೆ. ಕೈ ಹಿಡಿದವರಿಗಿಂತಲೂ ಪರಕೀಯರೇ ಎಷ್ಟೋ ಮೇಲು' ಎಂದು ಕಣ್ಣೀರು ಸುರಿಸುತ್ತಾ ಆಕೆ ಹೇಳಿದಳು. ಸೇತೂರಾಯನು ಕಣ್ಣೀರು ಸುರಿಸುತ್ತಾ ನಿಂತನು. ಉಮಾಬಾಯಿ ಆಶ್ಚರ್ಯದಿಂದ ಬೆಪ್ಪಾಗಿ ನಿಂತಳು.

'ನೀವು ಕರುಣಾಶಾಲಿ. ಇನ್ನೂ ಯಾರಾದರೂ ಆಗಿದ್ದರೆ ಇವರು ಕೊಟ್ಟಿರುವ ಕಷ್ಟಕ್ಕೆ ಈ ಮನೆಯನ್ನೇ ತುಳಿಯುತಿರಲಿಲ್ಲ. ನೀವು ಇವರಿಗೆ ಬೇಡದಿದ್ದರೂ ನಿಮ್ಮಿಂದ ಇವರಿಗೆ ಸಹಾಯ ಬೇಕಾಯಿತು. ನೀವು ಬಂದ

ದಿನವೇ ನಿಮ್ಮನ್ನು ನೋಡಿದಾಗ ರಮಾಬಾಯಿಯ ನೆನಪು ಬಂತು. ಆದರೆ ಆಕೆ ಅಲ್ಲದಿರಬಹುದೆಂದುಕೊಂಡಿದ್ದೆ ' ಎಂದು ರಾಮರಾಯನು ಹೇಳಿದನು.

' ಇವರಿಗಾಗಿ ನಾವು ಬರಲಿಲ್ಲ ರಾಮರಾಯರೆ. ಸಾವಿತ್ರಿಯ ಮುದ್ದಿನ ಮುಖ ನೋಡಿ ಬಂದೆ. ಅವಳಿಗೋಸ್ಕರವೇ ಇವರಿಗೆ ಸಹಾಯ ಮಾಡಿದ್ದು. ಮೊನ್ನೆ ಶಾಲೆಯಲ್ಲಿ ಇವಳ ಬುದ್ಧಿಯನ್ನು ನೋಡಿ ಮೆಚ್ಚಿದೆ. ಆಕಾರದಲ್ಲಿ ನನ್ನ ತಾಯಿಯೇ! ಬಹುಶಃ ತಾಯಿಯೇ ಇವರು ಕಷ್ಟಪಡುವದನ್ನು ನೋಡಿ ಸಂತೋಷಪಡುವದಕ್ಕಾಗಿ ಈ ಮನೆಯಲ್ಲಿ ಹುಟ್ಟಿದಳೋ ಏನೋ? ಇವಳನ್ನು ಕಂಡರೆ ನನ್ನ ಸ್ವಂತ ಮಗಳೆಂಬ ಪ್ರೀತಿಹುಟ್ಟಿದೆ. ನನ್ನೊಡನೆ ಬರುತ್ತೀಯಾ ಸಾವಿತ್ರಿ?' ಎಂದು ಸಾವಿತ್ರಿಯ ತಲೆ ಸವರುತ್ತ, ಉಮಾಬಾಯಿಯ ಕಡೆ ನೋಡುತ್ತಾ ಹೇಳಿದಳು.

ಸಾವಿತ್ರಿ ತಾಯಿತಂದೆಗಳ ಕಡೆ ನೋಡಿದಳು.

' ನಾನು ಅನ್ಯಳಲ್ಲ, ನಿನ್ನ ದೊಡ್ಡಮ್ಮ. ಬಾಮ್ಮ. ಈ ಜನ್ಮದಲ್ಲಿ ಯಂತೂ ಸುಖ ನನ್ನ ಹಣೆಯಲ್ಲಿ ಬರೆದಿಲ್ಲ. ನೀನಾದರೂ ಸುಖವಾಗಿದ್ದರೆ ನೋಡಿ ಸಂತೋಷಪಡುತ್ತೇನೆ. ನಿನ್ನ ತಂಗಿಯರೆಲ್ಲರಿಗೂ ಸಹಾಯ ಮಾಡುತ್ತೇನೆ ' ಎಂದು ಕಣ್ಣೀರು ಸುರಿಸುತ್ತಾ ಆಕೆ ಕೇಳಿದಳು. ಸೀತಾರಾಯನೂ ಅವನ ಹೆಂಡತಿಯೂ ಮಗಳನ್ನು ರಮಾಬಾಯಿಯೊಡನೆ ಕಳುಹಲು ಒಪ್ಪಿದರು.

ರಮಾಬಾಯಿಯು ಮಕ್ಕಳಿಗಾಗಿ ತಂದಿದ್ದ ಬಟ್ಟೆ ಹಣ್ಣುಗಳನ್ನು ೫೦ ರೂಪಾಯಿಗಳನ್ನೂ ಉಮಾಬಾಯಿಗೆ ಕೊಟ್ಟು ಅರಿಸಿನ ಕುಂಕುಮ ವೀಳೆಯೆದೆಲೆಯನ್ನು ತೆಗೆದುಕೊಂಡು, ಸಾವಿತ್ರಿಯೊಡನೆ ಹೊರಟು ಹೋದಳು.

ಎಷ್ಟಾದರೂ ರಮೆ ಶಾಂತಮೂರ್ತಿಯಾದ ನಿರ್ಭಾಗ್ಯ ಲಕ್ಷ್ಮಿ!



# ದುರಂತ ನಾಟಕ

'ಹಾವು! ಮಗೂ!! ಶಾಮೂ!!' ಎಂದು ಕೃಷ್ಣಮ್ಮನವರು ಕೂಗಿಕೊಂಡರು.

'ಎಲ್ಲಮ್ಮ!' ಎಂದು ಅಂಗಳದಲ್ಲಿ ಆಡಿಕೊಂಡಿದ್ದ ಶಾಮು-ಆರು ವರ್ಷದ ಎಳೆಗುವರ. ವರಾಂಡದೊಳಕ್ಕೆ ಬಂದು, ತಾಯಿಯು ಮಲಗಿದ್ದ ಸೋಪಾದ ಬಳಿ ನಿಂತು ಕೇಳಿದನು. ನಿದ್ದೆಗಣ್ಣನ್ನೊರಸಿಕೊಳ್ಳುತ್ತಾ ಎದ್ದು ಕುಳಿತು, ಕೃಷ್ಣಮ್ಮನವರು ಎದುರಿಗೆ ನಿಂತಿದ್ದ ತಮ್ಮ ಮುದ್ದು ಮಗನನ್ನಪ್ಪಿ ಮುದ್ದಿಟ್ಟು, 'ಕನಸು ಕಂಡಾ! ಏನೂ ಇಲ್ಲ ಚಿರಂಜೀವಿಯಾಗಿ ಸುಖವಾಗಿರಪ್ಪ!' ಎಂದು ತೊಡೆಯ ಮೇಲೆ ಅವನನ್ನು ಕುಳ್ಳಿರಿಸಿಕೊಂಡು ತಲೆಯನ್ನು ಸವರುತ್ತಾ ಹೇಳಿದರು.

ಆತ ತಾಯಿಗೆ 'ಅಮ್ಮ ನನಗೆ ಬರುತ್ತೆ ಆ ಶ್ರೀರಾಘವಂ....' ಎಂದು ಹೇಳಿದನು.

'ಎಲ್ಲಿ ಹೇಳು ಮಗು!' ಎಂದು ತಾಯಿಯು ಮಗನನ್ನು ಕೇಳಿದಳು.

ಮಗು ತೊದಲು ನುಡಿಯಲ್ಲಿ ಹಾಡಿದನು. ಹಾಡನ್ನು ಕೇಳುತ್ತಿದ್ದ ತಾಯಿಯ ಮುಖದಲ್ಲಿ ಎಳನಗುವು ಹರಿಯುತ್ತಿತ್ತು. ಆಗ ಅಲ್ಲಿಗೆ ಬಂದ ರಂಗಾಚಾರ್ಯರು, ತಾಯಿಯ ತೊಡೆಯ ಮೇಲೆ ಕುಳಿತು ಹಾಡುತ್ತಿದ್ದ ಮಗನನ್ನು ಎತ್ತಿಕೊಂಡು ಮುದ್ದಿಟ್ಟು, 'ಎಷ್ಟು ಚೆನ್ನಾಗಿ ಹಾಡುತ್ತೀ,

ಕಂದಾ ! ' ಎಂದು ಹೇಳಿ, 'ಎಲ್ಲಾ ನಿನ್ನ ತಯಾರಿಕೆ, ಕೃಷ್ಣಾ ' ಎಂದು ತಮ್ಮ ಹೆಂಡತಿಗೆ ಮೆಚ್ಚಿಗೆಯನ್ನಿತ್ತರು.

'ಇನ್ನೇನು ಮಾಡುವುದು ಅಕ್ಷರವನ್ನು ತಿದ್ದುಹಾಕಿದರಂತೂ ಅವನು ತಿದ್ದುವ ಹಾಗಿಲ್ಲ. ಇದಾದರೂ ಬರಲಿ ಎಂದು ಹೇಳಿಕೊಡುತ್ತೇನೆ. ಅದೆಷ್ಟು ಬೇಗನೆ ಕಲಿಯುತ್ತಾನೆ ಈ ಹಾಡುಗಳನ್ನು ! ಒಂದು ಸಲ ಹೇಳಿಕೊಟ್ಟರೆ ಸಾಕು. ಚಾ ಚೂ ತಪ್ಪದೆ ಹಾಗೆಯೇ ಹೇಳುತ್ತಾನೆ' ಎಂದು ಕೃಷ್ಣಮ್ಮ ನವರು ಆಚಾರ್ಯರಿಗೆ ಹೇಳಿದರು.

ಆಗ ಪಕ್ಕದ ಮನೆ ರಾಮು 'ಶಾಮೂ ! ಶಾಮೂ ! ' ಎಂದು ಕರೆದನು. ಶಾಮು ತಂದೆಯ ಕೈಯಿಂದ ಬಿಡಿಸಿಕೊಂಡು, 'ಅಣ್ಣಾ ನಾನು ಹೋಗುತ್ತೇನೆ ' ಎಂದು ಹೊರಟುಹೋದನು. ಮಗು ಹೊರಗೆ ಹೋಗ ವಲ್ಲಿ ಅವನ ತಂದೆ ತಾಯಿಗಳಿಬ್ಬರೂ ಅವನ ಕಡೆಯೇ ಎವೆಯಿಕ್ಕದೆ ನೋಡ ತೊಡಗಿದರು.

'ಪರವಾ ಇಲ್ಲ. ಇವನಿಗೂ ನಾಟ್ಯಕಲೆಯಲ್ಲಿ ಅಭಿರುಚಿ ಇರುವ ಹಾಗಿದೆ' ಎಂದು ರಂಗಾಚಾರ್ಯರು ಕೃಷ್ಣಮ್ಮನವರಿಗೆ ಹೇಳಿದರು.

'ಹೂ! ಅದೊಂದರಲ್ಲಿ ನಿಮ್ಮ ಹಾಗೆ ಇದ್ದಾನೆ. ನಿಮ್ಮನ್ನು ಮೀರಿಸಲೂ ಬಹುದು. ಆದರೆ....'

ಇನಿಯಳ ಮಾತು ಕೇಳಿ ರಂಗಾಚಾರ್ಯರು ಆಕೆಯ ಕೆನ್ನೆಯ ಮೇಲೆ ಮೆಲ್ಲನೊಂದು ಏಟು ಕೊಟ್ಟು, 'ನನ್ನನ್ನು ಮೀರಿಸುವಂತೆ ನನ್ನ ಹೆಸರು ಮುಂದಕ್ಕೆ ಬರುವಂತೆ ಅವನು ಮಾಡಿದರೆ ಸಂತೋಷವಲ್ಲವೇ ನಮ್ಮಿಬ್ಬರಿಗೂ ' ಎಂದರು.

'ತಂದೆಯ ಹೆಸರನ್ನು ಪ್ರಸಿದ್ಧಿಗೆ ತರುವ ಅಂತಹ ಮಗನನ್ನು ಕೊಡೆಂದೇ ಅಶ್ವತ್ಥನಾರಾಯಣನಿಗೆ ಮೂರು ವರ್ಷ ಪ್ರದಕ್ಷಿಣೆ ಮಾಡಿ ಶಾಮುವನ್ನು ಹಡೆದದ್ದು' ಎಂದು ಕೃಷ್ಣಮ್ಮನವರು ಆಚಾರ್ಯರಿಗೆ ನಗುತ್ತಾ ಹೇಳಿ, 'ಆದರೆ ನಿಮ್ಮ ಹಾಗೆ ವಿಶ್ವವಿದ್ಯಾನಿಲಯದ ಪದವೀಧರ ನಾಗುವ ಪುಣ್ಯ ಅವನಿಗಿಲ್ಲದ ಹಾಗೆ ಕಾಣುತ್ತೆ ! ' ಎಂದು ನಿರಾಶರಾಗಿ ಹೇಳಿದರು.

'ಯಾಕೆ ಕೃಷ್ಣ ಹಾಗೆ ಹೇಳುತ್ತೀ ? '

'ಒಂದಕ್ಷರವನ್ನೂ ತಿದ್ದುವುದಿಲ್ಲ.ಆಗರೆ ಒಂದು ಹಾಡು ಹೇಳಿಕೊಡಿ; ಅದನ್ನು ಸದಾ ಎಲ್ಲ ವಿಧದ ನಟನೆಯಿಂದಲೂ ಮುಂದೆ ಹಾಡುತ್ತಾನೆ.'

'ಇರಲಿ ಬಿಡು ಕೃಷ್ಣಾ. ಅವನನ್ನು ಬುದ್ಧಿವಂತನಾಗುವಂತೆ ಮಾಡೋಣ. ನೀನಿದ್ದೀಯಲ್ಲ ಮನೇ ಮೇಷ್ಟ್ರು ಅವನನ್ನು ಮುಂದಕ್ಕೆ ತರುವುದಕ್ಕೆ' ಎಂದು ಆಚಾರ್ಯರು ತಮ್ಮ ಹೆಂಡತಿಗೆ ಶಹಬಾಸ್‌ಗಿರಿಯನ್ನು ಕೊಟ್ಟು, 'ನಿನ್ನೆ ನಾಟಕ ಹೇಗಿತ್ತು?' ಎಂದು ಆಕೆಯನ್ನು ಕೇಳಿದರು.

'ಚೆನ್ನಾಗಿತ್ತು; ಅದರಲ್ಲೂ ನೀವು ಮಾಡಿದ ಕಿಂಗ್‌ಲಿಯರಿನ ಪಾತ್ರ ಬಹು ಸೊಗಸಾಗಿತ್ತು. ನಾನು ನಾಟಕವನ್ನು ಓದುವಲ್ಲಿ ನಿಜವಾಗಿಯೂ ಲಿಯರಿನ ಪಾತ್ರವನ್ನು ತೃಪ್ತಿಕರವಾಗಿ ಮಾಡುವವರಿದ್ದಾರೆಯೋ ಅಂದು ಕೊಂಡಿದ್ದೆ.'

'ಅಷ್ಟುಮಾತ್ರವಾದರೂ ಮಾಡಿದೆನಲ್ಲವಲ್ಲಾ ಎಂದೋ ಏನೋ, ಇಲ್ಲವೆ ನನ್ನ ಮೇಲಿನ ಅಭಿಮಾನದಿಂದಲೋ ಪ್ರಿನ್ಸಿಪಾಲರು ಹಾಗೆ ಹೇಳಿದ್ದು.'

'ಇಲ್ಲ; ಅವರು ಹೇಳಿದ್ದು ಸರಿಯೇ. ಅವರು ಅಗ್ರಾಸನಾಧಿಪತಿಗಳಾಗಿ ತಮ್ಮ ಪರಿಚಯವನ್ನು ಸಭೆಯವರಿಗೆ ಚೆನ್ನಾಗಿಯೇ ಮಾಡಿಕೊಟ್ಟರು. ಅವರು ಹೇಳಿದ ಹಾಗೆಯೇ ಕಿಂಗ್‌ಲಿಯರಿನ ಪಾತ್ರವನ್ನು ತೃಪ್ತಿಕರವಾಗಿ ಮಾಡಿದಿರಿ. ವಕೀಲರನ್ನು ನಾಟ್ಯಸ್ತ್ರೀಯು ಹೇಗೆ ಒಲಿದಳೋ!' ಎಂದು ಹಾಸ್ಯಧ್ವನಿಯಿಂದ ಕೃಷ್ಣಮ್ಮನವರು ಆಚಾರ್ಯರಿಗೆ ಹೇಳಿದರು.

'ಕೃಷ್ಣೆಯು ರಂಗನಾಥನನ್ನು ಒಲಿದ ಹಾಗೆ' ಎಂದು ಆಚಾರ್ಯರು ಅದೇ ಧ್ವನಿಯಿಂದ ಆಕೆಗೆ ಪ್ರತ್ಯುತ್ತರವನ್ನು ಕೊಟ್ಟರು!

ರಂಗಾಚಾರ್ಯರೊಬ್ಬ ಸುಪ್ರಸಿದ್ಧ ನಟರು. ಅವರು ಹೆಸರುವಾಸಿಯಾದ ಆಂಧ್ರನಾಟಕ ಕರ್ತೃಗಳೂ ಆಗಿದ್ದರು. ಅವರಿಗೆ ಆಂಧ್ರದಲ್ಲಿ 'ಆಂಧ್ರ ನಾಟಕಾವತಂಸ' ಎನ್ನುವ ಬಿರುದೂ ಬಂದಿದ್ದಿತು. ಸಾಲದ್ದಕ್ಕೆ ವಿಶ್ವವಿದ್ಯಾನಿಲಯದ ಎರಡು ಪದವಿಗಳನ್ನೂ—ಬಿ. ಎ., ಬಿ. ಎಲ್.—ಪಡೆದು ಮದರಾಸಿನಲ್ಲಿ ಪ್ರಸಿದ್ಧರಾದ ಹೈಕೋರ್ಟು ವಕೀಲರೂ ಆಗಿದ್ದರು. ತಮ್ಮ

ಹೆಂಡತಿಯೂ ರಕ್ತಕ್ಷೀಣತೆಯಿಂದ ನರಳುತ್ತಿದ್ದುದರಿಂದ, ತಮ್ಮ ಜತೆಯಲ್ಲಿ ಕೆಲಸ ಮಾಡುತ್ತಿದ್ದ ಶಾಮಾಚಾರ್ಯರಿಗೆ ವಕೀಲಿಯ ಕೆಲಸವನ್ನೆಲ್ಲಾ ಒಪ್ಪಿಸಿ, ಬೆಂಗಳೂರಿನ ಮಲ್ಲೇಶ್ವರದಲ್ಲಿ ಸ್ವಂತ ಮನೆಯೊಂದನ್ನು ಮಾಡಿ ನೆಲಸಿದರು. ಭಾರಿ ಕೇಸುಗಳ ಆರ್ಗ್ಯುಮೆಂಟಿಗೆ ಮಾತ್ರ ಅವರು ಮದರಾಸಿಗೆ ಹೋಗುತ್ತಿದ್ದರು. ಅವರು ಬೆಂಗಳೂರಿಗೆ ಬಂದು ಒಂದು ವರ್ಷವಾಗಿತ್ತು. ಅಮ್ಮನವರೂ ಬೆಂಗಳೂರಿನ ಹವದಿಂದ ಸ್ವಲ್ಪ ಸ್ವಲ್ಪವಾಗಿ ಗುಣಹೊಂದುತ್ತಿದ್ದರು. ಬೆಂಗಳೂರಿನಲ್ಲಿ ಆಚಾರ್ಯರು ಆಗಾಗ ತಮ್ಮ ನಟನಾಪ್ರಭಾವವನ್ನು ತೋರಿಸುತ್ತಿದ್ದರು. ಷೇಕ್ಸ್‌ಪಿಯರ್ ಕವಿಯ ದುರಂತ ಪಾತ್ರಗಳನ್ನು ವಹಿಸುವುದೆಂದರೆ ಅವರಿಗೆ ಬಹಳ ಇಷ್ಟ. ಅದರಲ್ಲೂ ತಮ್ಮ ಜೀವನದಲ್ಲಿ ಬಹುಕಾಲವನ್ನು ಕಿಂಗ್‌ಲಿಯರಿನ ಪಾತ್ರವನ್ನು ಮನವೊಪ್ಪುವಂತೆ—ನಾಟ್ಯಲೋಕವು ಮೆಚ್ಚುವಂತೆ—ಮಾಡಬೇಕೆಂದು ಅದರ ಅಭ್ಯಾಸದಲ್ಲಿ ಕಳೆದರು.

ಆಂಧ್ರ ಮತ್ತು ಕನ್ನಡದಲ್ಲಿ ದುರಂತನಾಟಕಗಳನ್ನು ಆಡಿಸಬೇಕೆಂಬುದು ಬಹುದಿನಗಳಿಂದಲೂ ಅವರ ಮನಸ್ಸಿನಲ್ಲಿತ್ತು. ಆದರೆ ಕೃಷ್ಣಮ್ಮನವರೂ ಸಂಪೂರ್ಣವಾಗಿ ಪುರಾತನ ನಾಟಕಕರ್ತೃಗಳ ಮನಸ್ಸಿನವರು; ದುರಂತ ನಾಟಕಗಳೆಂದರೆ ಅವರಿಗಾಗದು. 'ಜೀವನ ಸುಖದಲ್ಲಿ ಕೊನೆಗಂಡರೇನೇ ಜಗವೆಲ್ಲಾ ಚೆನ್ನಾಗಿ ಬಾಳಲು ಪ್ರಯತ್ನಿಸುವುದು' ಎಂದು ಆಕೆ ಗಂಡನಿಗೆ ಸದಾ ಹೇಳುತ್ತಿದ್ದರು.

ಆಚಾರ್ಯರ ಅಂದಿನ ಹಾಸ್ಯದ ಪ್ರತ್ಯುತ್ತರವನ್ನು ಕೇಳಿ ಅಮ್ಮನವರು 'ನಿಮ್ಮ ನಟನೆಗೆ ಬೆರಗಾಗಿ ನಾನು ವರಿಸಲಿಲ್ಲ. ನಿಮ್ಮ ವಿದ್ಯೆ, ನಡತೆ.... ಗಳನ್ನು ನೋಡಿಯೇ ನಿಮ್ಮನ್ನು ವರಿಸಿದ್ದು. ಆದರೆ ನಿಮ್ಮ ಮಗ ಇದ್ದಾನೆ ನೋಡಿ ಶುದ್ಧ ಶುಂಠಕಾಯಿಯಾಗಿ' ಎಂದರು..

'ಕೃಷ್ಣಾ! ಅವನನ್ನು ಸುಪ್ರಸಿದ್ಧ ನಟನನ್ನಾಗಿ ಮಾಡುತ್ತೇನೆ.'

'ಸರಿಯೇ.........!' ಎಂದು ಆಕೆ ನಿಟ್ಟುಸಿರನ್ನು ಬಿಟ್ಟರು.

ಕೃಷ್ಣಮ್ಮನವರು ಮಗನ ವಿಚಾರವಾಗಿ ಯೋಚಿಸುತ್ತಾ ಮೌನವಾಗಿರುವುದನ್ನು ನೋಡಿ ರಾಯರು, 'ಕೃಷ್ಣಾ! ನಮ್ಮಲ್ಲಿಯೂ ನಾಟಕ ಬರೆಯಲು ಎಂತಹ ದುರಂತ ವಸ್ತುಗಳಿವೆ. ಹರಿಶ್ಚಂದ್ರ! ಅವನನ್ನು ಎಂತಹ ದುರಂತ ನಾಯಕನನ್ನಾಗಿ ಮಾಡಲಾಗುವುದಿಲ್ಲ! ಶಕುಂತಲ! ಅದನ್ನೂ

ದುರಂತ ನಾಟಕವನ್ನಾಗಿ ಬರೆಯಬಹುದು. ಆಮೇಲೆ ಸೀತಾ ಪರಿತ್ಯಾಗ ........' ಎಂದರು.

ಕೃಷ್ಣಮ್ಮನವರು ಆಚಾರ್ಯರ ಮಾತಿನ ಪ್ರವಾಹವನ್ನು ಅಲ್ಲಿಗೇ ತಡೆದು ನಿಲ್ಲಿಸಿ, ' ಸಾಕು ಸುಮ್ಮನಿರಿ ! ನಿಮಗೆ ಪಾಗ ಚಿರಂಜೀವಿಗಳು ಯಾರೂ ಸಿಕ್ಕಲಿಲ್ಲವೇ ದುರಂತ ನಾಯಕರಾಗಿ ! ' ಎಂದು ಹಂಗಿಸುವ ಧ್ವನಿ ಯಿಂದ ಕೇಳಿದರು.

' ಕೃಷ್ಣಾ ! ಅವರೂ ಇದ್ದಾರೆ ! ಅಶ್ವತ್ಥಾಮ, ವಿಭೀಷಣ, ಪರಶು ರಾಮ. '

' ಮಿಕ್ಕ ನಾಲ್ಕು ಜನರನ್ನೇಕೆ ಬಿಟ್ಟು ಬಿಟ್ಟಿರಿ. ಅವರು ಬಹುಶಃ ನಿಜವಾದ ಚಿರಂಜೀವಿಗಳೇ ಆಗಿರಬೇಕಲ್ಲವೇ '

' ಅವರು ದುರಂತ ನಾಯಕರಾಗಲು ಅರ್ಹರಲ್ಲ. '

' ತಾವು ಸುಮ್ಮನೆ ಇರಿ ದಮ್ಮಯ್ಯ. ಅಂತಹ ನಾಟಕಗಳನ್ನು ಮಾತ್ರ ಬರೆಯಬೇಡಿ. ' ಎಂದು ದೈನ್ಯದಿಂದ ಕೃಷ್ಣಮ್ಮನವರು ಗಂಡನಿಗೆ ಹೇಳಿದರು.

ಹೆಂಡತಿಯ ಮನಸ್ಸಿನ ಭಾವನೆಯನ್ನು ನೋಡಿ ಆಚಾರ್ಯರು ಮುಗುಳು ನಗೆಯಿಂದ ' ಕೃಷ್ಣಾ ! ಶಾಮುವಿಗೆ ಚೆನ್ನಾಗಿ ಸಂಗೀತ ವನ್ನಾದರೂ ಹೇಳಿಕೊಡು. ಮಿಕ್ಕ ವಿದ್ಯೆಗಳನ್ನು ನಾನು ಕಲಿಸಿ ಕೊಡು ತ್ತೇನೆ ಅವನಿಗೆ. ಅವನನ್ನು ಸುಪ್ರಸಿದ್ಧ ಬಾಲನಟನನ್ನಾಗಿ ಮಾಡಬೇಕೆಂದು ನನ್ನ ಆಸೆ ' ಎಂದರು.

' ಎಷ್ಟಾದರೂ ನಿಮ್ಮ ಮಗು ಅವನು. ನಿಮ್ಮಿಷ್ಟದಂತೆಯೇ ಮಾಡು ತ್ತೇನೆ ' ಎಂದು ಕೃಷ್ಣಮ್ಮನವರು ದೈನ್ಯದಿಂದ ಗಂಡನ ಮುಖವನ್ನು ನೋಡುತ್ತಾ ಹೇಳಿದರು.

' ಹಾಗಿರಬೇಕು, ಕೃಷ್ಣಾ ! ' ಎಂದು ಆಚಾರ್ಯರು ಮುಗುಳು ನಗೆ ಯನ್ನು ಮುಖದಲ್ಲಿ ಬೀರಿ ಹೆಂಡತಿಗೆ ಹೇಳಿದರು.

೨

ಮೂರು ವರ್ಷಗಳು ಕಳೆದುವು. ಭಾರತದ ನಾಟಕ ಪ್ರಪಂಚದಲ್ಲಿ ಮಾಸ್ಟರ್ ಶಾಮುವು ಸುಪ್ರಸಿದ್ಧ ಬಾಲನಟನಾಗಿ ಹೆಸರುಪಡೆದನು !

ಅವನಿಂದ ಆಚಾರ್ಯರ ಕೀರ್ತಿಯು ಎಲ್ಲೆಲ್ಲಿಯೂ ಹಬ್ಬಿತು. 'ಧ್ರುವ, ಕೃಷ್ಣ, ಅಭಿಮನ್ಯು, ಲವ, ಲೋಹಿತಾಶ್ವ ಇವರ ಪಾತ್ರಗಳನ್ನು ನೋಡಬೇಕಾದರೆ ಮಾಸ್ಟರ್ ಶಾಮು ನಟಿಸಿದಾಗ ನೋಡಬೇಕು ' ಎಂದು ದೇಶವೇ ಹೇಳು ತ್ತಿತ್ತು. ತಾಯಿಯು ನಿರೀಕ್ಷಿಸಿದ ಹಾಗೆ ಆತ ನಾಟ್ಯಕಲಾ ಸಾಮ್ರಾಜ್ಯ ವನ್ನು ಬಿಟ್ಟು ಬೇರೆ ಪ್ರಪಂಚದಲ್ಲಿ ಸುಳಿಯಲಿಲ್ಲ. ಓದುವುದೆಂದರೆ ಆತನಿ ಗಾಗದು; ಬರೆಯಬೇಕೆಂದರೆ ಆತ ಬಲು ಸೋಮಾರಿ!

ಮೂರು ದಿನಗಳ ಹಿಂದೆ ಅಶಕ್ತ ಪೋಷಕ ಸಭೆ ಸಹಾಯನಿಮಿತ್ತ ಧನಕ್ಕಾಗಿ ಧ್ರುವ ನಾಟಕವನ್ನು ರತ್ನಾವಳಿ ನಾಟಕ ಮಂದಿರದಲ್ಲಿ ರಂಗಾ ಚಾರ್ಯರ ಕಂಪನಿಯವರು ಹಾಕಿದ್ದರು. ಅಂದು ಸಂಸ್ಥಾನದ ಪ್ರಥಮ ಸಚಿವರು ಅಗ್ರಾಸನವನ್ನು ವಹಿಸಿದ್ದರು.

ಮಾಸ್ಟರ್ ಶಾಮುವಿನ ಧ್ರುವನ ಪಾತ್ರಕ್ಕೆ ಎಲ್ಲರ ಮೆಚ್ಚಿಗೆಯೂ ದೊರೆಯಿತು. ನಾಟ್ಯಾಂತದಲ್ಲಿ ಪ್ರಥಮ ಸಚಿವರು ಸುವರ್ಣಪದಕವೊಂದನ್ನು ಅವನಿಗೆ ಬಹುಮಾನವಾಗಿ ಕೊಟ್ಟರು!

ಇದಾದ ಮಾರನೆಯ ದಿನ ಬೆಳಗ್ಗೆ ಎಲ್ಲರ ಬಾಯಿಯಲ್ಲಿಯೂ ಶಾಮು ವಿನ ನಾಟ್ಯಕಲಾಕೌಶಲದ ವರ್ಣನೆಯೇ; 'ಅಬ್ಬಾ! ಅವನು ಪಾಶ್ಚಿಮಾತ್ಯ ದೇಶಗಳಲ್ಲಿ ಹುಟ್ಟಿದ್ದಿದ್ದರೆ ಪ್ರಸಿದ್ಧ ಚಿತ್ರಕಲಾ ನಟನಾಗಿ ಕುಬೇರನಾಗು ತ್ತಿದ್ದನು!' ಎನ್ನುತ್ತಿದ್ದರು.

ಅದೇ ದಿನ ಸಂಜೆ ಆಚಾರ್ಯರು ತಮ್ಮ ಮನೆಯ ವರಾಂಡದಲ್ಲಿ ಕೃಷ್ಣಮ್ಮನವರು ಕುಳಿತಿದ್ದ ಸೋಪಾಕ್ಕೆ ಎದುರಿಗಿದ್ದ ಸೋಪಾದಲ್ಲಿ ಕುಳಿ ತಿದ್ದರು. ಮಗನ ಕೀರ್ತಿಯನ್ನು ಕೇಳಿ ಸಂತೋಷಸಾಗರದಲ್ಲಿ ಮುಳುಗಿದ್ದ ಕೃಷ್ಣಮ್ಮನವರು, ' ಶಾಮು, ಧ್ರುವನ ಪಾತ್ರವನ್ನು ಎಷ್ಟು ಚೆನ್ನಾಗಿ ಮಾಡಿದ! ಎಂದು ಆಚಾರ್ಯರಿಗೆ ಹೇಳಿದರು.

' ಹೌದು; ನನಗೂ ಕೀರ್ತಿ ತಂದ. ನನ್ನ ಹೆಸರೂ ಸಹ ಅವನಿಂದ ದೇಶದ ಮೇಲೆ ಬಹುಬೇಗ ಹರಡುತ್ತಿದೆ. ನಾವು ಪುಣ್ಯವಂತರು, ಕೃಷ್ಣಾ! ಒಂಬತ್ತು ವರ್ಷದ ಮಗು ಏನು ಸೂಟಿಯಾಗಿದ್ದಾನೆ.'

' ಆದರೆ—ಓದಿಲ್ಲ!' ಎಂದು ಕೃಷ್ಣಮ್ಮನವರು ನಿಟ್ಟುಸಿರು ಬಿಟ್ಟು ನಿಧಾನವಾಗಿ ಹೇಳಿದರು.

'ಹೋಗಲಿ ಬಿಡು. ಅವನ ಹಣೆಯ ಬರಹ ಹೇಗಿದೆಯೋ! ಮೈಸೂರಿನ ಅನಾಥಾಲಯದವರು ಸಹಾಯನಿಮಿತ್ತ ನಾಟಕವೊಂದನ್ನು ಕೇಳಿರುತ್ತಾರೆ. ಇನ್ನೆಂಟು ದಿನಕ್ಕೆ ಬರುವ ಶಿವರಾತ್ರಿದಿನ ಆಡುವ ಹರಿಶ್ಚಂದ್ರ ನಾಟಕದ ಉತ್ಪತ್ತಿಯನ್ನು ಅವರಿಗೆ ಕೊಡುವುದಾಗಿ ಹೇಳಿದ್ದೇನೆ. ಹೈದರಾಬಾದಿನ ದಿವಾನರು ಇಲ್ಲಿಗೆ ಬಂದಿದ್ದಾರೆ. ಅವರೇ ಆ ದಿನ ಅಗ್ರಾಸನವನ್ನು ವಹಿಸಲು ಒಪ್ಪಿರುವರಂತೆ. ಶಾಮುಗೆ ಸ್ವಲ್ಪ ಆ ಲೋಹಿತಾಶ್ವನ ಹಾಡುಗಳನ್ನು ಚೆನ್ನಾಗಿ ಹೇಳಿಕೊಡು. ಮಾತು ಮತ್ತು ನಟನೆಯಲ್ಲಿ ಅವನಿಗೆ ಸರಿಸಮಾನರೇ ಇಲ್ಲ. ಆದರೆ ಹಾಡುವಿಕೆಯಲ್ಲಿ ಸ್ವಲ್ಪ....'

'ನಾನು ನಿತ್ಯ ಹೇಳಿಕೊಡುತ್ತಿದ್ದೇನೆ. ಪಾಪ! ಅಂತಹ ಸಂಸ್ಥೆಗಳಾದರೂ ಮುಂದಕ್ಕೆ ಬರಲಿ. ಅವರೆಲ್ಲರ ಆಶೀರ್ವಾದಗಳೂ ನಮ್ಮ ಶಾಮುವನ್ನು ಚಿರಂಜೀವಿಯಾಗಿ ಮಾಡಿದರೆ ಸಾಕು.'

'ಕೃಷ್ಣಾ! ಹಾಗೆ ಯಾಕೆ ಸುಮ್ಮನೆ ಶಾಮುವಿನ ವಿಷಯದಲ್ಲಿ ಹೇಳುತ್ತೀ?'

'ಏನೂ ಇಲ್ಲ. ಒಬ್ಬನೇ ಮಗ. ನಮ್ಮ ರತ್ನ ಅವನು. ಅದೇನೋ ರಾತ್ರಿ ಹಾಳು ಕನಸುಗಳು; ಅವನು ನಮ್ಮನ್ನು ಬಿಟ್ಟು ಹೋದ ಹಾಗೆ' ಎಂದು ಅಮ್ಮನವರು ಆಚಾರ್ಯರಿಗೆ ಗದ್ಗದ ಸ್ವರದಿಂದ ಹೇಳಿದರು.

'ಕನಸಿನಲ್ಲೇನಿದೆ ಬಿಡು. ಅದೆಲ್ಲಾ ಸುಳ್ಳು. ವಿದ್ಯಾವತಿಯಾದ ನೀನೂ ಈ ಕನಸುಗಳಲ್ಲಿ ನಂಬುತ್ತೀಯಲ್ಲಾ!'

'ದೇವರು ನಿಮ್ಮ ಮಾತೇ ಶಾಶ್ವತವಾಗಿರುವ ಹಾಗೆ ಮಾಡಲಿ; ಸ್ವಾಮಿಗೆ ಈಗ ಉರಿಯುತ್ತಿರುವ ನಂದಾದೀಪವನ್ನು ನಂದದ ಹಾಗೆ ನೋಡಿಕೊಳ್ಳುತ್ತೇನೆ' ಎಂದು ಕೃಷ್ಣಮ್ಮನವರು ಆಚಾರ್ಯರಿಗೆ ಚಿಂತಾಕ್ರಾಂತರಾಗಿ ಹೇಳಿದರು.

ಹೆಂಡತಿಯ ಮೂಢ ಭಾವನೆಯನ್ನು ನೋಡಿ ರಂಗಾಚಾರ್ಯರು ತಮ್ಮ ಮುಖದಲ್ಲಿ ಮುಗುಳುನಗೆ ಸೂಸಿದರು!

೩

ಇಂದು ಶಿವರಾತ್ರಿ. ರತ್ನಾವಳಿ ನಾಟಕ ಮಂದಿರದಲ್ಲಿ ರಂಗಾಚಾರ್ಯರ ಕಂಪನಿಯವರು ಅನಾಥಾಲಯದ ನಿಧಿಗಾಗಿ ಕನ್ನಡದಲ್ಲಿ ಹರಿಶ್ಚಂದ್ರ

ನಾಟಕವನ್ನು ಆಡುವರು. ನಾಟಕ ಮಂದಿರದ ಮುಂಭಾಗವು ತಳಿರು ತೋರಣಗಳಿಂದ ಅಲಂಕರಿಸಲ್ಪಟ್ಟಿದೆ. ಇಂದು ಹೈದರಾಬಾದಿನ ದಿವಾನರು ಅಗ್ರಾಸನವನ್ನು ವಹಿಸುತ್ತಾರೆ. ಮಾಸ್ಟರ್ ಶಾಮುವೇ ಲೋಹಿತಾಶ್ವ! 'ಆಂಧ್ರನಾಟಕಾವತಂಸ' ರಂಗಾಚಾರ್ಯರು ಹರಿಶ್ಚಂದ್ರನ ಪಾತ್ರವನ್ನು ವಹಿಸುತ್ತಾರೆ. ಜನ ನಾಟಕಮಂದಿರದಲ್ಲಿ ಕಿಕ್ಕಿರಿದು ಹೋಗಿದೆ. ಅನೇಕರು ಟಿಕೆಟ್ಟು ದೊರೆಯದೆ ಹೊರಟೂ ಹೋದರು!

ಒಂಬತ್ತು ಗಂಟೆಯಾಯಿತು. ಮೊದಲು ಅಧ್ಯಕ್ಷರ ಭಾಷಣದ ಅವತರಣಿಕೆಯಾಯಿತು. ಅವರು ರಂಗಾಚಾರ್ಯರ ನಟನಾ ಕೌಶಲ್ಯವನ್ನೂ,ತಾವು ಕೇಳಿದ್ದ ಮಾಸ್ಟರ್ ಶಾಮುವಿನ ಕೀರ್ತಿಯನ್ನೂ ಹೇಳಿ, ಅಂದು ತಾವೇ ಅವರೆಲ್ಲರ ಅಭಿನಯವನ್ನೂ ನೋಡುವ ಪುಣ್ಯವನ್ನು ದೊರಕಿಸಿ ಕೊಟ್ಟುದಕ್ಕಾಗಿ ಸಂಚಾಲಕರನ್ನು ವಂದಿಸಿದರು.

ನಾಟಕವು ಆರಂಭವಾಯಿತು. ಅಂದಿನ ಪಾತ್ರಗಳಲ್ಲೆಲ್ಲಾ ಶಾಮುವಿನ ಪಾತ್ರವೇ ಬಹು ಸ್ತೋತ್ರಾರ್ಹವಾಗಿತ್ತು. ಕಾಲಕೌಶಿಕನು ಲೋಹಿತಾಶ್ವನನ್ನು ಕಾಡಿಸಿ, ಅವನನ್ನು ಸಮಿತ್ತು ಮತ್ತು ದರ್ಭೆ ತರಲು ತಿಂಡಿ ನೀರಿಲ್ಲದೆಯೇ ಕಾಡಿಗೆ ಕಳುಹಿಸುವ ದೃಶ್ಯವು ಬಂದಿತು. ಅಲ್ಲಿ ಎಲ್ಲರ ಹೃದಯವನ್ನೂ ಕರಗಿಸುವಂತೆ ಶಾಮು—ರಾಜಪುತ್ರನ ಪಾತ್ರವನ್ನು ವಹಿಸಿದ್ದ ಶಾಮು—ಬಹು ಅದ್ಭುತವಾಗಿ ಮಾಡಿದನು. ಲೋಹಿತಾಶ್ವನನ್ನು ಹಾವು ಕಡಿದು ಆತ ಅನಾಥನಂತೆ ಸಾಯುವ ದೃಶ್ಯವನ್ನಂತೂ ಶಾಮು ನೈಜ ರೀತಿಯಲ್ಲಿ ಹೃದಯ ಕರಗುವಂತೆ ಮಾಡಿದನು. ಆ ದೃಶ್ಯವನ್ನು ಕಂಡು ಅನೇಕರು ಕಣ್ಣೀರುಗರೆದರು!

ಆ ದೃಶ್ಯವು ಮುಗಿಯಿತು. ಶಾಮು ಗ್ರೀನ್ ರೂಮಿಗೆ ಬಂದವನು ನಾಟಕಮಂದಿರದ ಹೊರಗೆ ಕೈಕಾಲು ತೊಳೆದುಕೊಂಡುಬರಲು ಹೋದನು. ಗ್ರೀನ್ ರೂಮಿನ ಹೊರಗಡೆ ಅನಾದಿಯಿಂದಲೂ ಬೆಳೆದುಬಂದಿದ್ದ ಹುತ್ತುವೊಂದಿತ್ತು. ಶಾಮು ಅದರ ಬಳಿ ಕಾಲಿಟ್ಟೊಡನೆಯೇ 'ಅಯ್ಯೋ ಹಾವು!' ಎಂದು ಕಿರಿಚಿ ಕೆಳಗೆ ದೊಪ್ಪನೆ ಬಿದ್ದನು!

ಶಾಮುವಿನ ಆರ್ತದನಿಯನ್ನು ಕೇಳಿ ರಂಗದ ಅಧಿಕಾರಿ ಶ್ರೀಕಂಠಯ್ಯನವರೂ ಮತ್ತು ನಾಲ್ಕೈದು ಜನ ಚಿಲ್ಲರೆ ಪಾತ್ರದವರೂ ಕೈಯಲ್ಲಿ

ದೀಪಗಳನ್ನು ಹಿಡಿದು ಶಾಮುವಲ್ಲಿಗೆ ಬಂದು ನೋಡಿದರು. ಹಾವು ಆಗ ತಾನೇ ಹುತ್ತವನ್ನು ಸೇರುತ್ತಿತ್ತು. ಶಾಮು ಯಾವ ಮಾತೂ ಆಡದೆ ವಿಷದಬೇಗೆಯಿಂದ ಹೊರಳಾಡುತ್ತಿದ್ದನು !

ಶಾಮುವನ್ನು ತಂದು ಗ್ರೀನ್ ರೂಮಿನಲ್ಲಿ ಹಾಕಿದರು. ಕೆಲವು ಆಳುಗಳು ಆಗಲೇ ಹುತ್ತವನ್ನು ಅಗೆದು ಅದರಲ್ಲಿದ್ದ—ಶಾಮುವನ್ನು ಕಚ್ಚಿದ—ನಾಗರಹಾವನ್ನು ಹೊಡೆದು ಕೊಂದುಹಾಕಿದರು.

ರಂಗಾಚಾರ್ಯರು ಈ ದೃಶ್ಯವನ್ನು ನೋಡಿ ಬಿಸುಸುಯ್ದರು ! 'ಶ್ರೀಕಂಠ ನಾಟಕ ನಡೆಯಲಿ ' ಎಂದರು.

'ಲೋಹಿ..ತಾಶ್ವ......! ' ಎಂಬ ಶ್ರೀಕಂಠಯ್ಯನ ಮಾತು ಮುಗಿಸಲೇ ಆಗಲಿಲ್ಲ !

'ಹೂ! ದುರಂತ ನಾಟಕ. ಚಂದ್ರಮತಿಯೂ ನಾಟಕದಲ್ಲಿ ಸಾಯಲಿ.... ಹರಿಶ್ಚಂದ್ರನೂ ಸಾಯಲಿ. ನಾಟಕದಲ್ಲಿ ಆ ಹಾಳು ದೇವತೆಗಳ ಪ್ರತ್ಯಕ್ಷ ಬೇಡ ! '

ಶ್ರೀಕಂಠಯ್ಯ ಮರುಮಾತನ್ನಾಡಲಿಲ್ಲ. ಅಂದು ರಂಗಾಚಾರ್ಯರು ಹೇಳಿದ ಹಾಗೆ, ಹಿಂದೆ ಒಮ್ಮೆ ಅಭ್ಯಾಸಿಸಿದ್ದ ಹಾಗೆ ನಾಟಕ ದುರಂತವಾಗಿಯೇ ಮುಗಿಯಿತು. ನಾಟಕದ ಹೊಸ ರೀತಿಯನ್ನು ಕಂಡು ಮಂದಿ ತಮಗೆ ತೋರಿದಂತೆ ಮಾತನಾಡಿಕೊಂಡರು !

ಕಟ್ಟಕಡೆಯಲ್ಲಿ ಅಧ್ಯಕ್ಷರ ಭಾಷಣವೂ ಆಯಿತು. ಅವರು 'ನಾಟಕವು ಉತ್ತಮ ವರ್ಗದ್ದು; ಹೊಸತರಹದಲ್ಲಿ ಅಭಿನಯಿಸಲ್ಪಟ್ಟ ಹಳೆಯ ನಾಟಕ. ಮಾಸ್ಟರ್ ಶಾಮು ನಟನಾಸಾಮ್ರಾಜ್ಯದಲ್ಲಿ ಅಮೌಲ್ಯ ರತ್ನ ' ಎಂದು ಹೇಳಿ, ಹಾರದಲ್ಲಿ ಮೆರೆಯುತ್ತಿದ್ದ ಸ್ವರ್ಣ ಪದಕವನ್ನು ಕೈಗೆ ತೆಗೆದು ಕೊಂಡು 'ಮಾಸ್ಟರ್ ಶಾಮು ! ' ಎಂದು ಕರೆದರು.

ದುಃಖದ ಬೇಗೆಯಿಂದ ಬೇಯುತ್ತಿದ್ದ ಆಚಾರ್ಯರು 'ಮಗು ಈಗ ಬರುವ ಸ್ಥಿತಿಯಲ್ಲಿಲ್ಲ ! ' ಎಂದು ಆತನ ಪರವಾಗಿ ತಾವೇ ಅದನ್ನು ಸ್ವೀಕರಿಸಿ, ಎರಡು ಮಾತಿನಲ್ಲಿ ಧನ್ಯವಾದಗಳನ್ನರ್ಪಿಸಿದರು.

ರಾತ್ರಿ ಎರಡು ಗಂಟೆ.ಊರಿನ ಭಾರಿ ಡಾಕ್ಟರುಗಳೆಲ್ಲಾ ಬಂದು ನೋಡಿ ಎಷ್ಟು ಔಷಧಿ ಮತ್ತು ಇಂಜೆಕ್ಷನ್ ಕೊಟ್ಟರೂ ಶಾಮುವಿನ ಮೈ ತಣ್ಣ

ನಾಯಿತು ! ಸಟರೆಲ್ಲಾ ಅತ್ತರು. ಆದರೆ ಆಚಾರ್ಯರ ಕಣ್ಣಿನಲ್ಲಿ ನೀರಿಲ್ಲ! ಕೆಂಪನೆ ಕೆಂಡದಂತಿತ್ತು !! ದುಃಖ ಅವರನ್ನೆಲ್ಲಿ ಈ ಲೋಕವನ್ನು ಬಿಡಿಸು ತ್ತದೆಯೋ ಎನ್ನುವ ಹಾಗೆ ಅವರೆದೆಯಲ್ಲಿಯೇ ಕುದಿಯುತ್ತಿತ್ತು ! ಅವರು ತಮ್ಮ ವೇಷವನ್ನು ಕೂಡ ತೆಗೆಯದೆ ಸ್ಮಶಾನವಾಸಿಯಾದ—ದುರಂತ ನಾಯಕನಾದ—ವೀರದಾಸನಂತೆ ದೊಣ್ಣೆಯನ್ನೂರಿಕೊಂಡು, ದುಃಖಿತವದನ ರಾಗಿ ನಿಂತಿದ್ದರು.

* * * * *

ಬೆಳಗ್ಗೆ ಆರು ಗಂಟೆ. ಕೃಷ್ಣಮ್ಮನವರು ನಾಟಕ ಮಂದಿರದ ಗ್ರೀನ್ ರೂಮಿನಲ್ಲಿ ಮಗನ ಶವವನ್ನು ತೊಡೆಯ ಮೇಲಿಟ್ಟುಕೊಂಡು, ಕಣ್ಣೀರು ಗರೆಯುತ್ತಾ, ಒಂದು ಕೈಯನ್ನು ಅವನ ಎದೆಯ ಮೇಲಿಟ್ಟು, 'ದೇವಾ ನಿನಗೆ ಕಣ್ಣಿಲ್ಲವೇ ! ಕಂದಾ ! ನನ್ನ ರತ್ನಾ ! ನನ್ನ ಬೆಳಕೇ, ಏನಾದೆ ?' 'ಏಳೆನ್ನಾನಂದಾಮೃತ ಶರಧಿ; ಏಳಖಿಳಗುಣಾರ್ಣವ ಕಳಾನಿಧಿ ! ಏಳು. ಮಗು ! ಮಗು !! ನನ್ನನ್ನೂ ಕರೆದುಕೊಂಡು ಹೋಗು. ಶಾಮೂ ನೀನಿಲ್ಲದ ಈ ಪ್ರಪಂಚದಲ್ಲಿ ನನಗೇನಿದೆ ! ಎಲ್ಲಮ್ಮ ಒಂದು ಮಾತನ್ನಾಡು. ನಾನು—ನಿನ್ನಮ್ಮ ಬಂದಿದ್ದೇನೆ. ಕಂದಾ ! ಶಾಮು !! ನಿಮ್ಮಣ್ಣನನ್ನು ನೋಡು. ಹೋಗು. ಅವರ ಕಣ್ಣೊರಸು. ನಿಂತಿದ್ದಾರೆ ನೋಡು. ಹಾ! ಇನ್ನುಮೇಲಾದರೂ ಈ ನಾಟಕ ಬಿಡಿ ದಮ್ಮಯ್ಯಾ ! ಹಾಳು ನಾಟಕ ಬೇಡ ಬೇಡ ಅಂದೆ. ಹಾವು ! ಹಾಳದು ಕಡಿದಾಗ ಹಾ ಎಂದೊರಲಿದೆಯಾ, ಶಾಮು ! ಅದು ನನ್ನನ್ನಾದರೂ ಕಡಿಯಬಾರದಾಗಿತ್ತೆ. ಹಿಂದೆ ಕನಸು.... ಹಾ..ಹಾವು ! ದುರಂತ ನಾಟಕ....ಅಯ್ಯೋ....ಮಗು..ಮ....! ' ಎಂದು ಚೀರಿದರು ! ಆಕೆಯ ತಲೆ ತೊಡೆಯ ಮೇಲಿದ್ದ ಮಗನ ಶವದ ಮೇಲೆ ಬಿದ್ದಿತು. ಶಾಮುವಿನ ಬಹುಮಾನದ ಪದಕದಿಂದೊಡಗೂಡಿದ ಹಾರವು ಅವನ ಪಾದಗಳ ಬಳಿ ಬಿದ್ದಿದ್ದಿತು. ಅದರ ಬಳಿ ಸತ್ತ ಹಾವು !

ಡಾಕ್ಟರು ಅವರನ್ನು ಮತ್ತೆ ಕುಳ್ಳಿರಿಸಲು ಮುಟ್ಟಿ ನೋಡಿದರು. ಆಕೆಯ ನಾಡಿ ನಿಂತಿತ್ತು ! 'ಅಯ್ಯೋ ದೇವರೇ ! ಹಾರ್ಟ್ ಫೈಲ್ಯೂರ್ !! ' ಎಂದು ಆವರೂ ನಿಟ್ಟುಸಿರನ್ನು ಬಿಟ್ಟರು !

ನಿಂತಿದ್ದ ಆಚಾರ್ಯರು ದೊಪ್ಪನೆ ಕೆಳಗೆ ಬಿದ್ದರು! ಅವರು ಹೆಂಡತಿ ಮತ್ತು ಮಗನ ಶವದ ಮೇಲೆ ಬಿದ್ದು ರೋದಿಸುತ್ತಾ ಹೊರಳಾಡಿದರು. ಎಲ್ಲರೂ ಅವರ ಕೈಕಾಲು ಹಿಡಿದುಕೊಂಡು ಅವರನ್ನು ಸಂತೈಸತೊಡಗಿದರು.

'ಅಯ್ಯೋ! ಆಚಾರ್ಯರ ಸಂಸಾರ ಒಂದು ದುರಂತ ನಾಟಕ!' ಎಂದು ಕಣ್ಣೀರೊರಸಿಕೊಳ್ಳುತ್ತಾ ಶ್ರೀಕಂಠಯ್ಯನವರು ಹೇಳಿದರು!

---

# ವಿಶ್ವಾಂಬರಿ

‘ ವೇಗವತೀ ! ವೇದವತೀ !! ’

‘ ನಮಸ್ಕಾರ, ನಾರಾಯಣ ಪಿಳ್ಳೆಯವರಿಗೆ. ’

‘ ನಮಸ್ಕಾರ ತಾಯಿ. ಏನು ಬಹಳ ದಿನಗಳಿಂದ ಈ ಊರಲ್ಲಿಯೇ ಇರುವಂತೆ ತೋರುವುದಿಲ್ಲ. ’

‘ನವರಾತ್ರಿಗೆ ಮೈಸೂರಿಗೆ ಹೋಗಿದ್ದೆ. ’

‘ ಊ; ಮಹಾರಾಜರು ತಮ್ಮ ವೀಣೆಗೆ ಮೆಚ್ಚಿ ಸುವರ್ಣ ಪದಕ ವನ್ನೂ, ಜರತಾರಿಯ ಸೀರೆಯೊಂದನ್ನೂ ಬಹುಮಾನವಾಗಿ ಕೊಟ್ಟಿದ್ದೇ ಅಲ್ಲದೆ ‘ಅಭಿನವ ಸರಸ್ವತಿ’ ಎನ್ನುವ ಬಿರುದನ್ನೂ ದಯಪಾಲಿಸಿದರೆಂಬು ದನ್ನು ಕೇಳಿದ್ದೇನೆ. ’

‘ ಇವೆಲ್ಲಾ ದೊರೆತುದೂ ನಿಮ್ಮಂತಹ ಸೋದರರ ವಿಶ್ವಾಸದ ಫಲ.’

‘ ಏನು ತಾಯಿ ಬಹಳ ದಿನ ಅಲ್ಲಿ ನಿಂತುಬಿಟ್ಟಿರಿ ? ’

‘ ಅಲ್ಲಿಗೆ ಹೋಗಿ ಆರು ವರ್ಷಗಳಾಗಿದ್ದವು. ನಮ್ಮ ಸೋದರತ್ತೆ ಇನ್ನೂ ಕೆಲವು ದಿನವಿರೆಂದು ಬಲಾತ್ಕರಿಸಿದಳು; ಮತ್ತು ನಮ್ಮ ಗುರುಗಳೂ ಸಹ ‘ ಇನ್ನೂ ಕೆಲವು ದಿನವಿದ್ದು ಹೋಗಮ್ಮ ’ ಎಂದರು. ಅವರುಗಳ ಮಾತು ಮೀರದೆ ಇರಬೇಕಾಗಿ ಬಂದಿತು. ಇದೂ ಅಲ್ಲದೆ ಮೈಸೂರೆಂದರೆ ನನಗೆ ಪ್ರಾಣ. ನಾನು ಹುಟ್ಟಿದ ನಾಡದು; ಸಂಗೀತವು ಕುಣಿಯುತ್ತಿರುವ

ಬೀಡದು. ಎಲ್ಲಕ್ಕೂ ಸರಿಯಾಗಿ ವಿದ್ಯಾವಂತರಿಗೆ ಕಲ್ಪವೃಕ್ಷದಂತಿರುವ ಮುಮ್ಮಡಿ ಕೃಷ್ಣಪ್ರಭುಗಳ ಆಶ್ರಯವೊಂದು. ಇವೆಲ್ಲವನ್ನೂ ಬಿಟ್ಟು ಸಂಗೀತಗಾರರ ಪ್ರಸಿದ್ಧ ಭೂಮಿಯಾದ ಇಲ್ಲಿಗೆ ಬರಲೂ ಸಹ ಬೇಸರಿಕೆ ಯಾಗುವುದು.'

'ಅಂತೂ ಇಲ್ಲಿಗೆ ಬಂದೆಯಲ್ಲ, ತಾಯಿ!'

'ಇಲ್ಲಿ ಮತ್ತೆ ಯಾವುದು ಇಲ್ಲದಿದ್ದರೂ ವರದ ಸ್ವಾಮಿಯು ಎಲ್ಲರ ಮನವನ್ನೂ ಆಕರ್ಷಿಸುತ್ತಾನೆ. ಆ ಸ್ವಾಮಿಯ ಗರುಡೋತ್ಸವಕ್ಕೆ ಬಾರದ ಕಂಚಿಯ ನಿವಾಸಿಗಳು ಪಾಪಾತ್ಮರಲ್ಲವೇ? ಇದೂ ಅಲ್ಲದೆ ನಮ್ಮ ಗುರು ಗಳನ್ನು ಇಲ್ಲಿಗೆ ಬಹು ವರ್ಷಗಳಿಂದ 'ಬನ್ನಿ, ಬನ್ನಿ' ಎಂದು ಕರೆಯು ತ್ತಿದ್ದೆ. ಅವರಿಗೂ ಈ ವರ್ಷ ಮನಸ್ಸು ಬಂದಿತು. ಶಿಷ್ಯಳ ಮೇಲೆ ವಿಶ್ವಾಸ ವಿಟ್ಟು ಬಿಡುವು ಮಾಡಿಕೊಂಡು ಬಂದರು.'

'ಹೋ! ಆ ಮೆಳ್ಳಗಣ್ಣಿನ ಮುದುಕರೋ!' ಎಂದು ನಾರಾಯಣ ಪಿಳ್ಳೆ ಒಂದು ತರದ ಅಲಕ್ಷ್ಯ ಧ್ವನಿಯಿಂದ ವೇದವತಿಯನ್ನು ನೋಡಿ ಹೇಳಿದನು.

ಮುಂದೆ ನಿಂತಿದ್ದ ವೇದವತಿಗೆ ತನ್ನ ಗುರುವನ್ನು ಅವಿಶ್ವಾಸದಿಂದ ಮಾತನಾಡುವ ಪಿಳ್ಳೆಯ ಮಾತು ಕೇಳಿದೊಡನೆಯೇ ಅವಳ ಎದೆ ಝಲ್ಲೆಂದಿತು. ಅವನ ಕಡೆ ದಿಟ್ಟಿಸಿ ನೋಡಿದಳು. 'ಹೌದು ಪಿಳ್ಳೆಯವರೇ' ಎಂದಳು.

'ಪರವಾ ಇಲ್ಲ; ಮುದುಕನಾದರೂ ಆತನ ಶಾರೀರ ಚೆನ್ನಾಗಿದೆ.'

'ವಿದ್ಯೆಯೋ?'

'ಸುಮಾರಾಗಿದೆ. ಅಷ್ಟೇನೂ ವಿದ್ಯಾವಂತನಲ್ಲ. ಹೂ! ಇವರೆಲ್ಲಾ ಮೈಸೂರಿನಲ್ಲಿ ಆಸ್ಥಾನದ ಮಹಾವಿದ್ವಾಂಸರು!'

'ನಿಮಗೂ ಮೈಸೂರಿನಲ್ಲಿ ವಿದ್ವಾಂಸಗಿರಿ ದೊರೆಯಿತಲ್ಲ.'

'ಅಲ್ಲಿ ಕೀರ್ತಿ ತೆಗೆದುಕೊಳ್ಳುವುದೇನು ಹೆಚ್ಚು ತಾಯಿ. ಭಾರತದ ಸಂಗೀತಗಾರರೆಲ್ಲಾ ಇಲ್ಲಿ ಉತ್ಸವಕಾಲದಲ್ಲಿ ಭಲಾ ಎನ್ನುವವನಿಗೆ ಅಲ್ಲಿ ಮೆಚ್ಚಿಗೆ ದೊರೆಯುವುದೇನು ಕಷ್ಟ.'

'ಪಿಳ್ಳೆಯವರೇ, ಸ್ವಲ್ಪ ನಿಧಾನ ಮಾತನಾಡಿ. ನೀವು ವಿದ್ವಾಂಸರೇನೋ ಹೌದು. ಸಂಗೀತದ ಆಚಾರ್ಯರಾದ ತ್ಯಾಗರಾಜರನ್ನು ನೆನೆಯಿರಿ; ಅವರ ಜೀವನದ ಕಡೆ ನೋಡಿರಿ.'

'ಅವರನ್ನೇನೋ ನೆನೆಯುತ್ತೇನೆ. ಅವರ ಕೀರ್ತನೆಗಳಿಗೆ ಮಣಿಯುತ್ತೇನೆ. ಆದರೆ ಜನರಾಡುವರಲ್ಲ ಆ ಕಟ್ಟುಕತೆ; ಅದನ್ನು ನಂಬುವುದಿಲ್ಲ; ಮತ್ತು ನಾನು ಅಭ್ಯಾಸಿಸಿದ್ದರೂ ಆ ಕೀರ್ತನೆಯೊಂದನ್ನು ಹಾಡುವುದೂ ಇಲ್ಲ. ಹೊತ್ತಾಯಿತು, ತಾಯಿ! ಇನ್ನು ಒಂದು ಗಂಟೆಗೆ ದೇವರಿಗೆ ಮಂಗಳಾರತಿ. ಮನೆಗೆ ಹೋಗಿ ಬರುತ್ತೇನೆ, ನಮಸ್ಕಾರ, ತಾಯಿ' ಎಂದು ಹೇಳಿ, ತಾನು ನಿಂತಿದ್ದ ದೇವಾಲಯದ ಮಹಾದ್ವಾರವನ್ನು ಬಿಟ್ಟು ನಾರಾಯಣ ಪಿಳ್ಳೆ ಹೊರಟುಹೋದನು.

ವೇದವತಿಯ ಮುಖದಲ್ಲಿದ್ದ ಕಳೆ ಕುಂದಿತು. ಕಣ್ಣುಗಳು ನೀರಿನಿಂದ ತುಂಬಲ್ಪಟ್ಟವು. ಎದೆಯಲ್ಲಿ ಒಂದು ವಿಧವಾಗಿ ಆಗುತ್ತಿದ್ದ ಸಂಕಟವು ಮುಖದಲ್ಲಿ ಕಂಡುಬಂದಿತು. ಕಣ್ಣನ್ನು ಕರವಸ್ತ್ರದಿಂದ ಒರೆಸಿಕೊಂಡು, ನಿಟ್ಟುಸಿರು ಬಿಡುತ್ತಾ, ಅಲಂಕಾರದಿಂದ ಮೆರೆಯುತ್ತಿದ್ದ ಕಂಚಿವರದನ ಕಡೆ ಗೊಮ್ಮೆ ನೋಡಿ, ಧೈರ್ಯದಿಂದ ಆತನಿಗೆ ಕೈಮುಗಿದು, ಯೋಚನೆಯಿಂದ ಮೆಲ್ಲಮೆಲ್ಲನೆ ನಡೆಯುತ್ತಾ ತೇರುಬೀದಿಯಲ್ಲಿದ್ದ ತನ್ನ ಮನೆಯ ಕಡೆ ಹೊರಟಳು.

೨

ವೇದವತಿ ಮನೆಗೆ ಬಂದಳು. ಮುಂದಿನ ಕೊಠಡಿಯಲ್ಲಿ ಅವಳ ಗುರು ವಿರಲಿಲ್ಲ. 'ಲಕ್ಷ್ಮೀ! ಗುರುಗಳೆಲ್ಲಿ?' ಎಂದು ಅಂಗಳದಲ್ಲಿ ನಿಂತಿದ್ದ ದಾಸಿಯನ್ನು ಕೇಳಿದಳು.

'ತಾಯಿ, ಸ್ವಲ್ಪ ಹೊತ್ತಿನ ಹಿಂದೆ ಯಾರೋ ಅವರ ಸ್ನೇಹಿತರೊಬ್ಬರು ಮೈಸೂರಿನವರಿರುವರಂತಲ್ಲಾ ಅವರನ್ನು ನೋಡಲು ಹೋಗಿರುವರು.'

'ಹೂ' ಎಂದು ಯೋಚಿಸುತ್ತಾ ವೇದವತಿ ಹೇಳಿದಳು. ಅಲ್ಲಿಯೇ ಸ್ವಲ್ಪ ನಿಂತಳು. ಯೋಚನೆಯಿಂದಲೂ ದುಃಖದಿಂದಲೂ ಕೂಡಿದ ಅವಳ ಮನಸ್ಸಿಗೆ ಮುಂದೆ ಏನು ಮಾಡಬೇಕೆಂಬುದೇ ತೋರಲಿಲ್ಲ. ಮೆಲ್ಲನೆ

ಯೋಚನೆಯಿಂದ ಹೆಜ್ಜೆಗಳನ್ನಿಡುತ್ತಾ ಮಹಡಿಯ ಮೆಟ್ಟಲು ಒಂದೊಂದ ನ್ನಾಗಿ ಎಣಿಸುತ್ತಾ ಹತ್ತುತ್ತಿರುವಳೋ ಎನ್ನುವಂತೆ ಹತ್ತಿದಳು. ಮಹ ಡಿಯ ಮೇಲೆ ಬಂದಳು.

ವಿಸ್ತಾರವಾದ ಮಹಡಿ. ಒಂದು ದೊಡ್ಡ ಹಾಲೆಂದೇ ಹೇಳಬಹುದು. ಅಷ್ಟಕ್ಕೂ ರತ್ನಕಂಬಳಿ ಹಾಸಿತ್ತು. ಗೋಡೆಗಳೆಲ್ಲಾ ಭಾರತದ ಪ್ರಸಿದ್ಧ ಚಿತ್ರಕಲಾಕೋವಿದರಿಂದ ಬರೆಯಲ್ಪಟ್ಟ ಚಿತ್ರಗಳಿಂದ ಮೆರೆಯುತ್ತಿದ್ದುವು. ಹಾಲಿನ ನಡುವೆ ಒಂದು ಚಕ್ರಾಕಾರದ ಮೇಜು. ಅದು ರೇಷ್ಮೆ ಬಟ್ಟೆ ಯಿಂದ ಮುಚ್ಚಲ್ಪಟ್ಟಿತ್ತು. ಅದರ ಮೇಲಿದ್ದ ಗಾಜಿನ ಪಾತ್ರೆಯಲ್ಲಿ ದೊಡ್ಡ ಹೂಗೊಂಚಲೊಂದಿತ್ತು. ಹಾಲಿನ ಪೂರ್ವ ಭಾಗದಲ್ಲಿ ಒಂದು ದೊಡ್ಡ ಮಂದಾಸನ. ಅದು ಸೊಗಸಾಗಿ ಮುತ್ತಿನಿಂದ ಅಲಂಕರಿಸಲ್ಪ ಟ್ಟಿತ್ತು. ಅದರೊಳಗೆ ಸೊಬಗನ್ನೆಲ್ಲಾ ಎರಕಹೊಯ್ದು ಮಾಡಿದ ವರದ ಸ್ವಾಮಿಯ ಪ್ರತಿಮೆ. ದೇವನಿಗೂ ಆತನ ದೇಗುಲಕ್ಕೂ ಮಾಡಿರುವ ಅಲಂಕಾರವನ್ನು ನೋಡಿದರೇನೇ ಅವನ್ನು ಅಲಂಕರಿಸಿದವರಿಗೆ ಅವೇ ಮೊದಲ ಜೀವಗಳೆನ್ನುವಂತೆ ತೋರುತ್ತಿದ್ದುವು. ವೇದವತಿಯ ಪ್ರಾಣವೆಲ್ಲಾ ಆ ದೇವನ ಮೇಲೆ. ತನ್ನ ಸರ್ವಸ್ವವನ್ನೂ ಅಲ್ಲಿ ತುಂಬುತ್ತಿದ್ದಳು. ತನ್ನ ಬಹು ಮಾನಗಳನ್ನೆಲ್ಲಾ ಮೊದಲು ದೇವನಿಗರ್ಪಿಸಿ ಆಮೇಲೆ ಆತನ ಪ್ರಸಾದವನ್ನು ತಾನು ಸ್ವೀಕರಿಸುತ್ತಿದ್ದಳು. ಎಷ್ಟಾದರೂ ಆಕೆ ದೇವನ ದಾಸಿ!

ಆಕೆಯ ವಂಶೀಯರು ಎರಡು ಮೂರು ತಲೆಗಳಿಂದ ಸಂಸಾರಿಗಳಾಗಿ ದ್ದರು. ಅವರೆಲ್ಲಾ ದೇವನ ಉತ್ಸವಕ್ಕೆ ಸಹಾಯಕರಾಗಿರುವರು; ಉತ್ಸವ ಕಾಲದಲ್ಲಿ ಅಲ್ಲಿ ಹಾಡುವರು.

ವೇದವತಿ ದೇವದಾಸಿಯ ಕುಲದಲ್ಲಿ ಹುಟ್ಟಿದ್ದರೂ ಸಹ ಅವಳ ಮುಖದಲ್ಲಿ ಸರಸ್ವತಿಯ ಓಜಸ್ಸು ತೇಜಸ್ಸುಗಳಿದ್ದುವು. ಆಕೆಯ ತಂದೆ ತಾಯಿಗಳು ತಮ್ಮ ವಂಶಾನುಸಾರವಾಗಿ ಬಂದ ತಮ್ಮ ಹಿರಿಯರ ಹೆಸರಾದ 'ನೀಲ' ಎನ್ನುವ ಹೆಸರನ್ನಿಟ್ಟಿದ್ದರು.

ಎಂಟು ವರ್ಷದ ಹುಡುಗಿಯಾದ ಆಕೆಯನ್ನು ಅವಳ ಸೋದರತ್ತೆ ಸಾಕಲು ಮೈಸೂರಿಗೆ ಕರೆದುಕೊಂಡು ಹೋದಳು. ಆಕೆಗೆ ಮಕ್ಕಳಿಲ್ಲ. ಗಂಡ ಆಸ್ಥಾನದಲ್ಲಿ ಸಂಗೀತ ವಿದ್ವಾಂಸ. ಸೋದರಸೊಸೆಯ ರೂಪ,

ಬುದ್ಧಿಯ ಸೂಟಿ ಇವುಗಳನ್ನು ನೋಡಿ, ಅವಳಿಗೆ ಚೆನ್ನಾಗಿ ಸಂಗೀತ ಕಲಿಸಿ ಒಳ್ಳೆಯ ವರನೊಬ್ಬನಿಗೆ ಕೊಟ್ಟು ಮದುವೆ ಮಾಡಬೇಕೆಂಬುದೇ ಆಕೆಯ ಆಸೆಯಾಗಿತ್ತು. ತನ್ನ ಗಂಡನ ಹತ್ತಿರ ಸಂಗೀತ ಹೇಳಿಸಿದರೆ ಆಕೆ ಭಯ ಭಕ್ತಿಗಳಿಂದ ಹೇಳಿಸಿಕೊಳ್ಳುವುದಿಲ್ಲವೆಂದು ಸುಪ್ರಸಿದ್ಧ ಸಂಗೀತಗಾರರಾದ ಸಂಗೀತಮಹಾವಿದ್ವಾನ್ ಅಶ್ವತ್ಥನಾರಾಯಣರಾಯರಿಂದ ಹೇಳಿಸ ಬೇಕೆಂದು ಮನಸ್ಸು ಮಾಡಿದಳು. ಆ ಸಮಾಚಾರವನ್ನು ಗಂಡನಿಗೂ ತಿಳಿಸಿದಳು. ವಿದ್ವಾನ್ ಚಂದ್ರಶೇಖರಯ್ಯನವರೂ ಹೆಂಡತಿಯ ಮಾತಿಗೆ ಒಪ್ಪಿದರು. ಅವರಿಗೂ ನೀಲಳನ್ನು ಕಂಡರೆ ಬಹುಪ್ರೀತಿ. ಅವರು ಎಲ್ಲಿ ಹೋದರೂ ನೀಲಳನ್ನು ಜತೆಯಲ್ಲಿಯೇ ಕರೆದುಕೊಂಡು ಹೋಗುತ್ತಿದ್ದರು. ಒಮ್ಮೆ ಆಸ್ಥಾನಕ್ಕೂ ಕರೆದುಕೊಂಡು ಹೋದರು.

ಅಂದು ಅಲ್ಲಿ ಸಂಗೀತ ಕಚೇರಿ. ತಂಜಾವೂರಿನ ಕೃಷ್ಣಭಾಗವತರು ತ್ಯಾಗರಾಜರ ಕೃತಿಯೊಂದನ್ನು ಹಾಡುತ್ತಿದ್ದರು. ಹುಡುಗಿ ನಗುಮುಖ ದಿಂದ ಯಾರಿಗೂ ಕೇಳಿಸದಂತೆ ಕೈಯಲ್ಲಿ ತಾಳಹಾಕುತ್ತಿತ್ತು. ಸಂಗೀತ ಗಾರರ ಕಡೆಗೇ ನೋಡುವಂತಿದ್ದ ಶ್ರೀಕೃಷ್ಣ ಪ್ರಭುಗಳು ಹುಡುಗಿಯ ಕಡೆ ಗೊಮ್ಮೆ ತಮ್ಮ ದೃಷ್ಟಿಯನ್ನು ಬೀರಿ, ತಮ್ಮ ಆಸನದಿಂದ ಎದ್ದುಬಂದು, ಹುಡುಗಿಯನ್ನು ಎತ್ತಿಕೊಂಡು ಮುದ್ದಿಟ್ಟು, 'ಕಂದಾ, ನಿನ್ನ ಹೆಸರೇನು?' ಎಂದು ನಸುನಗೆಯಿಂದ ಕೇಳಿದರು. 'ನೀಲ' ಎಂದು ಹುಡುಗಿಯು ಸ್ವಲ್ಪ ಭಯದಿಂದ ಮಹಾರಾಜರ ಗಿಜ್ಞಾವಿಲಾಸೆಯ ಕಡೆ ನೋಡಿ ಹೇಳಿದಳು. ಮಹಾರಾಜರು ಸಂತೋಷದಿಂದ 'ಚಂದ್ರಶೇಖರಯ್ಯ, ಇವಳಿಗೆ ಸಂಗೀತ ವನ್ನು ಹೇಳಿಕೊಡಿ. ಒಳ್ಳೇ ವಿದ್ಯಾವತಿಯಾಗುತ್ತಾಳೆ. ಇನ್ನೂ ಎಂಟು ವರ್ಷದ ಹುಡುಗಿ; ಆಗಲೇ ಎಷ್ಟು ಬುದ್ಧಿಯಪ್ಪ!' ಎಂದರು. ಅಂದೇ ಚಂದ್ರಶೇಖರಯ್ಯ ಅಶ್ವತ್ಥನಾರಾಯಣರಾಯರಿಂದ ನೀಲಾಗೆ ಸಂಗೀತ ಹೇಳಿ ಸಲು ಪ್ರಾರಂಭಿಸಿದರು. ರಾಯರೂ ಹುಡುಗಿಯ ಬುದ್ಧಿಗೆ ಮೆಚ್ಚಿ ಅವಳಿಗೆ ಪಾಠ ಹೇಳಿಕೊಡುತ್ತಿದ್ದರು. ನಾರಾಯಣರಾಯರ ಹೆಂಡತಿಯೂ ನೀಲಳನ್ನು ಬಹುವಾಗಿ ಪ್ರೀತಿಸುತ್ತಿದ್ದಳು.ನೀಲ ಸದಾ ಗುರುವಿನ ಮನೆಯ ಲ್ಲಿಯೇ ಇರುತ್ತಿದ್ದಳು.

ರಾಯರೂ ಅಷ್ಟೇ, ಎಲ್ಲಿಯಾದರೂ ಹೋಗಿ ಬಂದೊಡನೆಯೇ ಶಿಷ್ಯಳನ್ನು

ನೋಡಿದರೆಯೇ ಅವರಿಗೆ ತೃಪ್ತಿ. ಅವಳನ್ನು ನೋಡುವ ತನಕ ಯಾವ ಕೆಲಸವನ್ನೂ ಮಾಡುತ್ತಿರಲಿಲ್ಲ. ಹೀಗೆಯೇ ದಿನಗಳು ಕಳೆದುವು. ನೀಲಳಿಗೆ ಹನ್ನೆರಡು ವರ್ಷವೂ ತುಂಬಿತು. ಅಂದಿಗೇನೇ ರಾಯರು ತಮ್ಮ ಸಂಗೀತ ವಿದ್ಯೆಯನ್ನೆಲ್ಲಾ ಶಿಷ್ಯಳಿಗೆ ಧಾರೆ ಎರೆದಿದ್ದರು.

ಒಮ್ಮೆ ನೀಲ ತನ್ನ ಸೋದರತ್ತೆಯ ಮನೆಯಲ್ಲಿದ್ದಳು. ಅರಮನೆಯ ಅಧಿಕಾರಿಯೊಬ್ಬನು ಅಯ್ಯನವರನ್ನು ನೋಡಲು ಬಂದನು. ಮನೆಯ ಮುಂದಿರುವ ಗಿಡಗಳಲ್ಲಿ ಹೂ ಕೀಳುತ್ತಿದ್ದ ನೀಲಳನ್ನು 'ಅಯ್ಯನವರಿರು ವರೇ ?' ಎಂದು ಕೇಳಿದನು. ನೀಲ ತಲೆಬಗ್ಗಿಸಿಕೊಂಡೇ ಹೂ ಕೀಳು ತ್ತಿದ್ದಳು. ಗಿಡಗಳಿಗೆ ಪಾರೆ ಮಾಡುತ್ತಿದ್ದ ಆಳು 'ಬುದ್ಧಿ ! ಬುದ್ಧಿಯವರು ' ಕಂಚಿಗೆ ಹೋಗಿದ್ದಾರೆ. ಇನ್ನು ಮೂರು ದಿನಕ್ಕೆ ಬರುತ್ತಾರೆ' ಎಂದನು. ಆತ ನೀಲಳ ಕಡೆಯೇ ನೋಡುತ್ತಾ 'ಈಕೆ ಅಯ್ಯನವರಿಗೆ ಏನಾಗಬೇಕು ?' ಎಂದು ಕೇಳಿದನು. 'ಇವರು ಅವರ ಸೋದರಸೊಸೆ, ನೀಲಮ್ಮನವರ, ಬುದ್ಧೀ' ಎಂದು ಆಳು ಹೇಳಿದನು. 'ನೀಲಮ್ಮಾ! ನೀಲಮ್ಮ !! ಪರವಾ ಇಲ್ಲ-ರೂಪವಿದೆ, ಮುಂದೆ ನೀಲಾಸಾನಿಯಾಗುತ್ತಾಳೆ ' ಎನ್ನುತ್ತಾ ಹುಡುಗಿಯ ಕಡೆಯೇ ದಿಟ್ಟಿಸಿ ನೋಡುತ್ತಾ ಹೊರಟುಹೋದನು.

ಆ ಮಾತನ್ನು ಕೇಳಿ ನೀಲ ಅತ್ತಳು. ತನ್ನನ್ನು ರೂಪವತಿಯನ್ನಾಗಿ ಸೃಷ್ಟಿಸಿದ ವಿಶ್ವಕರ್ತನನ್ನು ಶಪಿಸಿದಳು. ತನ್ನ ಹೆಸರಿಗೇ ತಾನು ಅತ್ತಳು. ತನ್ನ ನಾಮಕರಣವನ್ನು ಮಾಡಿದ ತಂದೆ-ತಾಯಿಗಳನ್ನೂ ಬಯ್ದುಕೊಂಡಳೋ ಏನೋ! ಅಂದು ಆಕೆ ಊಟವನ್ನೇ ಮಾಡಲಿಲ್ಲ. ಸೋದರತ್ತೆ ಎಷ್ಟು ಬಲಾತ್ಕರಿಸಿ ದರೂ ಆಕೆಯ ಮಾತುಗಳಿಗೆ ಉತ್ತರವನ್ನೇ ಕೊಡಲಿಲ್ಲ. ಕೊನೆಯಲ್ಲಿ ಆಕೆ ರಾಯರಿಗೆ ಸಮಾಚಾರವನ್ನು ತಿಳಿಸಿ ಅವರನ್ನೇ ಕರೆತಂದಳು. ರಾಯರು ಸ್ವಲ್ಪ ಬಲಾತ್ಕಾರಮಾಡಿ ಸಮಾಚಾರವೇನೆಂದು ಕೇಳಿದುದರ ಮೇಲೆ, ನೀಲ ಗುರುವಿಗೆ ಅಂದು ನಡೆದ ಸಂಗತಿಯನ್ನೆಲ್ಲಾ ತಿಳುಹಿಸಿದಳು. ರಾಯರು ನಸುನಗುತ್ತಾ 'ಏನು ಬುದ್ಧಿ ಇದೆ ಕಂದಾ, ನಿನಗೆ. ನೀನು ಮುಟ್ಟಿದರೆ ಮುನಿಗಿಡ, ಇಷ್ಟೆಯೇ ! ಬಿಡಮ್ಮಾ. ನಾನು ಹಿಂದೆ ನಿನಗೆ ಬೇರೆ ಹೆಸರಿಡ ಬೇಕೆಂದೇ ಇದ್ದೆ. ಆದರೆ ನಿಮ್ಮ ಮನೆಯವರೆಲ್ಲಿ ನೊಂದುಕೊಳ್ಳುತ್ತಾರೋ

ಎಂದು ಸುಮ್ಮನಿದ್ದೆ. ನಿನ್ನನ್ನೂ ಎಷ್ಟೋ ಸಲ 'ವೇದಾ, ವೇದಾ' ಎಂದು ಬಾಯಿತಪ್ಪಿ ಕರೆಯಲಿಲ್ಲವೇ ?' ಎಂದು ಕಣ್ಣೀರು ಸುರಿಸುತ್ತಾ ಹೇಳಿದರು.

'ಗುರುಗಳೇ ಕಣ್ಣೀರೇಕೆ ?' ಎಂದು ನೀಲ ತನ್ನ ಕಣ್ಣೀರನ್ನೊರಸಿ ಕೊಳ್ಳುತ್ತಾ ಕೇಳಿದಳು.

'ಕಂದಾ ! ನಿನ್ನಂತೆಯೇ ನನಗೆ ಒಬ್ಬ ಮಗಳಿದ್ದಳು. ಅವಳಿಗೆ ವೇದ ಎಂದು ಹೆಸರಿಟ್ಟಿದ್ದೆ. ಆಕೆ ತನ್ನ ಐದನೆಯ ವಯಸ್ಸಿನಲ್ಲಿಯೇ ತೀರಿಹೋದಳು. ನೀನು ಅವಳ ಪ್ರತಿಬಿಂಬ, ಮಗು. ಅದಕ್ಕೇ ಎಷ್ಟೋಸಲ ನಿನ್ನನ್ನೂ 'ವೇದ, ವೇದ' ಎಂದು ಕರೆಯುತ್ತಿದ್ದೆ. ಮಗು, ನೀನೇ ಆ ವೇದ ನನಗೆ. ನನಗೆ ನೀನೇ ಮಗಳು, ಕಂದ. ಇನ್ನುಮೇಲೆ ನಿನಗೆ ಆ ಹೆಸರೇ ಇರಲಿ. ವೇದವತಿಯಂತೆ ಕೀರ್ತಿಯಿಂದ ಬಾಳು. ನಿಮ್ಮ ತಂದೆ ನಿನ್ನನ್ನು ಬರಹೇಳಿದ್ದರಲ್ಲಾ, ಎಂದು ಹೋಗುತ್ತೀ ?' ಎಂದು ಕೇಳಿದರು.

'ಮಾವನವರು ಬಂದೊಡನೆಯೇ' ಎಂದು ನೀಲ ಉತ್ತರಕೊಟ್ಟಳು.

ಎಂಟು ದಿನಗಳಾದ ಮೇಲೆ ವೇದಳನ್ನು ಕಂಚಿಗೆ ಕರೆದುಕೊಂಡು ಹೋಗಲು ಅಮ್ಮನವರು ನಿಶ್ಚಯಿಸಿದ್ದರು.

ವೇದ ಕಂಚಿಗೆ ಹೊರಡುವ ಕಾಲದಲ್ಲಿ ರಾಯರ ಸ್ಥಿತಿ ಕಣ್ವರಂತಾಗಿದ್ದಿತು !

ವೇದ ಕಂಚಿಯಲ್ಲಿಯೇ ನೆಲಸಿದಳು. ನಾಲ್ಕು ವರ್ಷಗಳ ಮೇಲೆ ಬಂದ ಜ್ವರದಲ್ಲಿ ಊರೇ ಹಾಳಾಯಿತು. ವೇದಳ ತಂದೆತಾಯಿಗಳೂ ಅದರಲ್ಲಿ ಮಡಿದರು. ಭಾರಿ ಆಸ್ತಿಗೆ ವೇದವತಿಯೇ ಯಜಮಾನಿಯಾದಳು. ತನ್ನ ಚಿಕ್ಕಪ್ಪನಿಂದ ಆಸ್ತಿಯ ವಿಚಾರವನ್ನೆಲ್ಲಾ ನೋಡಿಸುತ್ತಿದ್ದಳು. ಪ್ರತಿ ವರ್ಷವೂ ತಪ್ಪದೆ ಮೈಸೂರಿಗೆ ಹೋಗಿ, ಗುರುವನ್ನು ಮತ್ತು ಸೋದರತ್ತೆ, ಮಾವ ಮೊದಲಾದವರನ್ನು ನೋಡಿ ಹೋಗುತ್ತಿದ್ದಳು. ತಾನು ಅಭ್ಯಾಸಿಸಿದ್ದ ಕಲೆಯಲ್ಲಿ ಆಕೆ ಸರಸ್ವತಿಯಾದಳು—ವೇದವತಿಯಾದಳು !

ಗುರುವನ್ನು ಆಕೆ ತನ್ನ ಎಳೆತನದಿಂದಲೂ ತನ್ನ ಪ್ರಾಣಕ್ಕಿಂತಲೂ ಹೆಚ್ಚಾಗಿ ಕಾಣುತ್ತಿದ್ದಳು. ಅವರ ಯಾವ ಮಾತನ್ನೂ ಅವಳು ಮೀರುತ್ತಿರಲಿಲ್ಲ. ಯಾರಾದರೂ ಅವರನ್ನು ಹಳಿದರೆ ತನಗಾದ ಅವಮಾನಕ್ಕಿಂತಲೂ ಜಾಸ್ತಿ ಎಂದುಕೊಂಡು ದುಃಖಿಸುತ್ತಿದ್ದಳು. ಇಂದವಳ ದುಃಖಕ್ಕೆ ತನ್ನ

ಗುರುವಿನ ವಿಷಯದಲ್ಲಿ ನಾರಾಯಣ ಪಿಳ್ಳೆ ಉದಾಸೀನನಾಗಿ ಮಾತ ನಾಡಿದ್ದೇ ಕಾರಣ.

ವೇದವತಿ ದೇವದೇವನ ವೇದಿಕೆಯ ಬಳಿ ನಿಂತಳು; ಮುಂದಾಸನದ ಮೇಲುಗಡೆ, ಗೋಡೆಗೆ ನೇತುಹಾಕಿದ್ದ ನಿಲುಗನ್ನಡಿಯ ಆಕಾರದ ದೊಡ್ಡ ಎರಡು ಚಿತ್ರಪಠಗಳ ಕಡೆ ದೃಷ್ಟಿಸಿ ನೋಡಿದಳು. ಅವೆರಡು ಸೊಗಸಿನ ಚಿತ್ರ ಗಳು ! ಪ್ರತಿಯೊಬ್ಬ ಸಂಗೀತಗಾರನೂ ಮನೆಯಲ್ಲಿಡತಕ್ಕಂತಹವು.

ಒಂದರಲ್ಲಿ ದೇವಾಲಯವು ಚಿತ್ರಿಸಲ್ಪಟ್ಟಿದೆ. ನವರಂಗದಲ್ಲಿ ಸಂಗೀತ ಗಾರರೆಲ್ಲಾ ನೆರೆದಿದ್ದಾರೆ. ತ್ಯಾಗರಾಜರು ವೀಣೆಯ ಮುಂದೆ ಕುಳಿತಿ ದ್ದಾರೆ. ತನಗಿಂತಲೂ ಚಿಕ್ಕವನಾದ ಮುರಲಿಯಿಂದ ಸೋಲಿಸಲ್ಪಟ್ಟವರು, ಅಂದು ದೈವಹೃದಯವನ್ನು ತಿಳಿದಿದ್ದಾರೆ. ಜಂಭವನ್ನು ಅಡಗಿಸಿದ ಭಕ್ತಿ, ಅವರ ಸೋಲಿನಿಂದಾದ ಲಜ್ಜೆಯಿಂದ ಕೂಡಿದ ಮುಖದಲ್ಲಿ ಕಂಡು ಬಂದಿದೆ. ಸಭೆಗೆಲ್ಲಾ ಕೈಮುಗಿದು ಹಾಡುವಂತಿದ್ದಾರೆ.

ವೇದವತಿಯ ಕಣ್ಣುಗಳು ಈ ಪಠದ ಮೇಲೆಯೇ ನಿಂತವು. ಅದನ್ನೇ ದಿಟ್ಟಿಸಿ ನೋಡಿದಳು. ಕಣ್ಣೀರಿನಿಂದ ತುಂಬಿದ್ದ ಅವಳ ಮುಖದಲ್ಲಿ ಭಕ್ತಿ ಪ್ರೇರಿತವಾದ ಎಳನಗುವಿನ ಅಲೆಯೊಂದು ಚದರಿತು. ಮುಗಿಸಿಕ್ಕಳು ! ಆ ಪಠಕ್ಕೆ ನಮಿಸಿದಳು. ಅದರ ಬಳಿಯಿದ್ದ ಮತ್ತೊಂದು ಪಠದ ಮೇಲೆ ಅವಳ ಕಣ್ಣುಗಳು ಹೋದುವು. ಆ ಪಠವನ್ನೂ ಕೈಮುಗಿಯುತ್ತಲೆ ದೃಷ್ಟಿಸಿ ನೋಡಿದಳು.

ತ್ಯಾಗರಾಜರು ತಮ್ಮ ಮನೆಯ ಅಂಗಳದಲ್ಲಿ ವೀಣೆ ಹಿಡಿದು ಕುಳಿ ತಿದ್ದಾರೆ. ಅಂದು ಅವರ ಹೃದಯದಲ್ಲಿದ್ದ ಗರ್ವವೆಲ್ಲಾ ಮುರಲಿಯಿಂದ ಮುರಿದ ದಿನ. ಪ್ರಪಂಪಚದ ಕೀರ್ತಿಯ ಮೇಲಿನ ಆಸೆ ಅವರ ಹೃದಯ ವನ್ನು ಬಿಟ್ಟು ತೊಲಗಿದೆ. ಮುಖದಲ್ಲಿ ಪರಮೇಶನ ಸಾಕ್ಷಾತ್ಕಾರವನ್ನು ಕಾಣುತ್ತಿರುವ ತೇಜಸ್ಸು! ಹಿಂದಿನ ಜೀವನಕ್ಕಾಗಿ ಹೃದಯದಿಂದ ಹರಿಯು ತ್ತಿರುವ ಕಾಲುವೆಯು ಕಣ್ಣಿನಿಂದ ಧಾರೆಧಾರೆಯಾಗಿ ಬರುತ್ತಿದೆ. ಮುಂದಿ ರುವ ರಾಮಪಟ್ಟಾಭಿಷೇಕದ ಪಠದ ಕಡೆಯೇ ನೋಡುತ್ತಿದ್ದಾರೆ. ಪಠ ದಲ್ಲಿದ್ದ ಅವರ ನಿತ್ಯಾರಾಧಕ ಮೂರ್ತಿಗಳು ಶ್ರೀರಾಮ, ಸೀತೆ, ಲಕ್ಷ್ಮಣ ಅವರ ಕಣ್ಣೆದುರಿಗೇ ನಿಜರೂಪದಲ್ಲಿ ನಿಂತಿದ್ದಾರೆ. ತ್ಯಾಗರಾಜರು ಕೈ

ಮುಗಿಯುತ್ತಾ ಎವೆಯಿಕ್ಕದೆ ಅವರನ್ನೇ ನೋಡುತ್ತಿದ್ದಾರೆ. ಅಡಿಗೆ ಮನೆಯ ಬಾಗಿಲನ್ನು ಅರ್ಧ ತೆಗೆದು ಅವರ ಧರ್ಮಪತ್ನಿ ಗಂಡನ ಸ್ಥಿತಿಯನ್ನು ನೋಡುತ್ತಾ, ಕಾಣುತ್ತಿರುವ ದೇವರುಗಳಿಗೆ ಕೈಮುಗಿದು ನಿಂತಿದ್ದಾಳೆ.

ವೇದ ಈ ಪಠವನ್ನು ದೃಷ್ಟಿಸಿ ನೋಡಿ 'ಮಹಾತ್ಮಾ' ಎಂದು ತನ್ನಲ್ಲಿ ತಾನೇ ಹೇಳಿದಳು. ಆಗ 'ವೇದಾ! ವೇದಾ!!' ಎನ್ನುವ ಆದರ ಧ್ವನಿಯೊಂದು ಆಕೆಗೆ ಕೇಳಿಸಿತು. ಧ್ವನಿಯು ಕಿವಿಗೆ ಬಿದ್ದೊಡನೆಯೇ ಅವಳ ಎದೆ ಸಂತೋಷದಿಂದ ಉಬ್ಬಿತು. ಹಿಂತಿರುಗಿದಳು. ಗುರು ನಸುನಗುತ್ತಾ ನಿಂತಿದ್ದರು. ವೇದ ಆತನನ್ನು ದೃಷ್ಟಿಸಿ ನೋಡಿದಳು. ಏನೇನೋ ಹೇಳಬೇಕೆಂದಿದ್ದಳು. ತನ್ನ ಹೊಟ್ಟೆಯಲ್ಲಿದ್ದುದನ್ನೆಲ್ಲಾ ಗುರುವಿನ ಮುಂದೆ ಹೇಳಬೇಕೆಂಬ ಆತುರ. ಆದರೆ ಮಾತೇ ಹೊರಡದು. ಆ ಸ್ಥಿತಿ ಅವಳ ಮುಖದಲ್ಲಿ ಚೆನ್ನಾಗಿ ವ್ಯಕ್ತವಾಗುತ್ತಿತ್ತು. 'ವೇದಾ! ಏನು ಸಮಾಚಾರವಮ್ಮಾ?' ಎಂದು ಅಶ್ವತ್ಥನಾರಾಯಣರಾಯರು ಅವಳನ್ನು ಕೇಳಿದರು.

ಜೀವನ ಮುಂದೆ ಕುಳಿತಿದ್ದ ವೇದ, ಬಳಿ ನಿಂತಿದ್ದ ಗುರುವಿನ ಪಾದಗಳ ಮೇಲೆ ಬಿದ್ದಳು; ಪಾದಗಳನ್ನು ಕಣ್ಣಿಗೊತ್ತಿಕೊಂಡಳು; ಮುಖವನ್ನು ಮೇಲಕ್ಕೆತ್ತಿ ಆತನ ಕಡೆ ನೋಡಿದಳು.

ರಾಯರು ಎಂಭತ್ತು ವರ್ಷದ ಮುದುಕರು. ಆದರೂ ಎಳೆತನದ ಉತ್ಸಾಹ ಅವರ ಮುಖದಲ್ಲಿ ಕಾಣುತ್ತಿತ್ತು. ಆತ ಆರಡಿಯ ಆಜಾನುಬಾಹು. ಕಳೆಯಿಂದ ಕೂಡಿದ ಬಿಳುಪು ಬಣ್ಣದ ಮೈ. ಹಣೆಯಲ್ಲಿ ಕಸ್ತೂರಿ ತಿಲಕ. ಬಿಳಿಯ ನಿಲುವಂಗಿಯೊಂದನ್ನು ಹಾಕಿದ್ದರು; ಮೇಲುಕೋಟೆಯ ಪಂಚೆಯನ್ನು ಉಟ್ಟಿದ್ದರು. ನಿಲುವಂಗಿಯ ಮೇಲೆ ಹಸುರಂಚಿನ ರೇಷ್ಮೆಯ ಶಲ್ಯವೊಂದು. ಅವರು ನಮಸ್ಕರಿಸುತ್ತಿದ್ದ ವೇದಳ ಕೈಹಿಡಿದು ಕುಳ್ಳಿರಿಸಿ, 'ಮಗೂ! ಯಾಕೆ ಹೀಗಿದ್ದೀ?' ಎಂದರು.

'ಏನೂ ಇಲ್ಲ' ವೇದ ನಿಧಾನವಾಗಿ ಹೇಳಿದಳು.

'ನೋಡಿದೆಯಾ, ಕಂದಾ! ಹಿಂದೆ ನಿಮ್ಮಲ್ಲಿ ಏನನ್ನೂ ಮರೆಮಾಚುವುದಿಲ್ಲ' ಎಂದು ಹೇಳಿರುವ ಗುರುದಕ್ಷಿಣೆಯನ್ನು ಮರೆತಿರುವೆಯಾ? ಹೇಳು, ಕಂದಾ! ಮುದುಕನ ಮನಸ್ಸು ನೋಯುವಂತೆ ಮಾಡಬೇಡ.'

'ಏನೂ ಇಲ್ಲ; ಈ ಊರಲ್ಲಿರುವ ಪ್ರಸಿದ್ಧ ಸಂಗೀತಗಾರ ಗೊತ್ತುಂಟೇ?'

'ನಾರಾಯಣ ಪಿಳ್ಳೆ ತಾನೇ?'

'ಹೌದು!'

'ಆತ ವಿದ್ವಾಂಸ, ವೇದ. ಇರಲಿ, ಆತನ ಸಮಾಚಾರವೇನು?'

'ಈ ದಿನ ದೇವಸ್ಥಾನದ ಬಳಿ ಆತನನ್ನು ನೋಡಿದ್ದೆ. ಆತ ವಿದ್ಯಾವಂತನೇನೋ ಹೌದು; ಆದರೆ ಬಲು ಜಂಭ ಆತನದು. ಮೈಸೂರಿನ ಮಾತು ಬಂದಿತು....ಪ್ರಪಂಚದ ಎಲ್ಲಾ ಸಂಗೀತಗಾರರೂ ಆತನಿಗೆ ಕೆಲಸಕ್ಕೆ ಬಾರದವರು....'

'ಮುದುಕನಾದ ನನ್ನನ್ನು ತಾನೇ ಅಲಕ್ಷಿಸಿದ.'

ವೇದ ಗುರುವಿನ ಕಡೆ ನೋಡಿದಳು. 'ನಿಮಗೆ ಹೇಗೆ ತಿಳಿಯಿತು?' ಎನ್ನುವ ದೃಷ್ಟಿಯನ್ನು ಆತನ ಕಡೆ ಬೀರಿದಳು.

'ನನಗೆಲ್ಲಾ ಗೊತ್ತು, ಕಂದ! ಒಂದು ವೇಳೆ ಆತ ನಿನ್ನನ್ನು ವಿದ್ಯಾವತಿಯಲ್ಲ ಎಂದಿದ್ದರೂ ನೀನು ಸುಮ್ಮನಿರುತ್ತಿದ್ದೆ. ಬಹುಶಃ ನನ್ನನ್ನೇನೋ ಹೇಳಿದ್ದಾನೆ. ಹೋಗಲಿ ಬಿಡು, ಮಗು. ಮುದುಕ ನಾನು. ಎಷ್ಟು ದಿನ ಈ ಪ್ರಪಂಚದಲ್ಲಿ ಶಾಶ್ವತ! ಯಾರು ಏನಾದರೂ ಅಂದುಕೊಂಡು ಹೋಗಲಿ ಬಿಡು.'

'ಅದಕ್ಕಲ್ಲ ಗುರುಗಳೇ. ಪಾಪ ಇಲ್ಲಿಗೆ ಬಂದ ಎಷ್ಟೋ ಜನ ಸಂಗೀತಗಾರರು ಆತನಿಂದ ಅಪಮಾನ ಹೊಂದಿ ಹೋಗಿದ್ದಾರೆ. ಅವರ ಪಾಡನ್ನು ನೋಡಿ ನನಗೆ ಎಷ್ಟೋ ಸಲ ಅಯ್ಯೋ ಎನ್ನಿಸಿದೆ. ಎಲ್ಲಿ ಹೋದರೂ ತನಗೆ ಬಿರುದುಗಳು ಬರುತ್ತವೆಂದು ಆತನಿಗೆ ಜಂಭ. ಹೋದವರ್ಷ ಮೈಸೂರು ಮಹಾರಾಜರು 'ರಾಗರತ್ನ' ಎನ್ನುವ ಬಿರುದನ್ನು ದಯಪಾಲಿಸಿದರಂತೆ! ಕಳೆದ ತ್ಯಾಗರಾಜರ ಜಯಂತಿಯಲ್ಲಿ ಭಾರತದ ಸಂಗೀತಗಾರರೆಲ್ಲಾ ಸೇರಿ ಆತನಿಗೆ 'ರಾಗಚಕ್ರವರ್ತಿ' ಎನ್ನುವ ಹೆಸರಿಟ್ಟರು. ಇದು ಎಲ್ಲದಕಿಂತಲೂ ಈಗ ಇಪ್ಪತ್ತು ದಿನಗಳ ಹಿಂದೆ ಮದರಾಸಿನ ಜಡ್ಜ ಕೃಷ್ಣಸ್ವಾಮಿ ಅಯ್ಯರರವರು ತಮ್ಮ ಮಗಳ ಮದುವೆಯ ಐದು ದಿನಗಳ ಓಲಗಕ್ಕಾಗಿ ನಾರಾಯಣ ಪಿಳ್ಳೆಗೆ ಸಾವಿರ ರೂಪಾಯಿ ಮಾತನಾಡಿದ್ದರಂತೆ. ಪಿಳ್ಳೆ ಐದನೆಯ ದಿನ ಮಾತ್ರ ಹೋದನಂತೆ. ಅಯ್ಯರವರು ಕೋಪದಿಂದ 'ಈ ದಿನನೆ ಬರುವುದು?

ಅಂತು ಮೆರವಣಿಗೆಯು ದಿನವಾದರೂ ಬಂದಿರಲ್ಲಾ!' ಎಂದರಂತೆ. ಅಲ್ಲಿನ ಜನರೆಲ್ಲಾ ಪಿಳ್ಳೆಯ ನಾಗಸ್ವರ ಕೇಳಲು ಆತುರರಾಗಿದ್ದರಂತೆ. ಆದರೆ ಪಿಳ್ಳೆ ತನ್ನನ್ನು ಹೀಗೆ ಜಡ್ಜಿಗಳು ಅಂದುಬಿಟ್ಟರಲ್ಲಾ ಎನ್ನುವ ರೋಷಕ್ಕೆ ಮೆರವಣಿಗೆಯಲ್ಲೆಲ್ಲಾ ನಾಗಸ್ವರವನ್ನು ಅಪಸ್ವರದಿಂದ್ಲೆ ಬಾರಿಸಿದನಂತೆ. ಎಲ್ಲರೂ ಈತನ ಕಡೆ 'ಇಂದೇಕೆ ಹೀಗಾದ!' ಎಂದು ನೋಡುತ್ತಿದ್ದರಂತೆ. ಆದರೆ ಪುನಃ ಮನೆಯ ಬಳಿ ಬಂದಾಗ ಆತನು ಕಲ್ಯಾಣಿರಾಗವನ್ನು ಆಲಾಪನೆ ಮಾಡಿದನಂತೆ. ಅದನ್ನು ಕೇಳಿ ಎಲ್ಲರೂ ಬೆರಗಾದರಂತೆ. ಅಯ್ಯರರವರು ಒಂದು ಬೆಳ್ಳಿಯ ತಟ್ಟೆಯಲ್ಲಿ ಸಾವಿರ ರೂಪಾಯಿಗಳನ್ನೂ ಒಂದು ಪೀತಾಂಬರವನ್ನೂ ಇಟ್ಟು ಆತನಿಗೆ ಕೈಮುಗಿದು ಕೊಟ್ಟರಂತೆ.'

'ಹೌದು; ನಾನೂ ಇವನ್ನೆಲ್ಲಾ ಕೇಳಿದ್ದೇನೆ, ವೇದ. ಆತ ಕಲ್ಯಾಣಿ ರಾಗದಲ್ಲೇನೋ ಪ್ರವೀಣ. ದೇವ ಆತನನ್ನು ಒಲಿದಿರುವುದು ಆ ರಾಗ ಒಂದರಲ್ಲೇ. ನೋಡು, ಸಂಗೀತದ ಗುರುಗಳಾದ ತ್ಯಾಗರಾಜರು ದೇವನನ್ನು ಒಲಿಸಿಕೊಂಡದ್ದು ಆ ಶ್ರೀರಾಗದಲ್ಲಿ. ತಾವು ಗೆದ್ದಾಗ, ಸೋತಾಗ, ದೇವನಲ್ಲಿ ಮೊರೆಯಿಟ್ಟಾಗ ಆ ರಾಗದಲ್ಲೇ ಕೀರ್ತನೆಯನ್ನು ಹಾಡಿದರು.'

'ಅಂಥಾ ಗುರುಗಳ ಜೀವನದಲ್ಲೇ ಪಿಳ್ಳೆಗೆ ನಂಬಿಕೆ ಇಲ್ಲ, ಗುರುಗಳೇ. ಅವರ ಆ ಕತೆ, ಕಟ್ಟುಕತೆಯಂತೆ. ಅದನ್ನು ನಂಬುವುದಿಲ್ಲವಂತೆ. ಪೂರ್ಣ ವಿದ್ಯಾವಂತನೆಂದು ಹೆಸರು ಪಡೆದಿರುವವನು ಅಜ್ಞೇಯನಂತೆ! ತ್ಯಾಗರಾಜರ ಆ ಕೀರ್ತನೆಯನ್ನು ಎಂದೂ ಹಾಡುದಿವುಲ್ಲವಂತೆ.'

ರಾಯರು ಮುಖದಲ್ಲಿ ನಸುನಗುವನ್ನು ಸೂಚಿಸಿದರು. 'ಹೋಗಲಿ ಆತನ ವಿಚಾರವೇನು ಬಿಡು, ಮಗು' ಎಂದರು.

'ದೇವರಲ್ಲಿ–ನನ್ನದೊಂದು–ಪ್ರಾರ್ಥನೆ' ಎಂದು ವೇದ ರಾಗತೆಗೆದು ಹೇಳಿದಳು.

'ಏನು, ಕಂದಾ!'

'ಸಂಗೀತಾಚಾರ್ಯರ ಕತೆಯನ್ನು ಆತ ನಂಬುವಂತೆ ಮಾಡಬೇಕು. ಇನ್ನು ಮೇಲೆಯಾದರೂ ಈ ಊರಿಗೆ ಬರುವ ಸಂಗೀತಗಾರರನ್ನು ಆತ ಅನಾದರಣೆಯಿಂದ ನೋಡದಂತೆ ಮಾಡಬೇಕು' ಎನ್ನುತ್ತಾ ರಾಯರ ಕಾಲುಗಳನ್ನು ಹಿಡಿದುಕೊಂಡಳು.

' ಆಗಲಿ ಬಿಡು, ಮಗು ! ನಿನ್ನ ಇಷ್ಟಾರ್ಥ ನೆರವೇರುವಂತೆ ಮಾಡು ತ್ತೇನೆ. '

' ನನ್ನ ದೇವರು ! ' ರಾಯರಿಗೆ ಕೈಮುಗಿಯುತ್ತಾ, ಮುಖವನ್ನು ಮೇಲಕ್ಕೆತ್ತಿ ರಾಯರ ಮುಖವನ್ನೇ ನೋಡುತ್ತಾ ಮುಗುಳುನಗೆಯನ್ನು ಮುಖದಲ್ಲಿ ವೇದ ಸೂಚಿಸಿದಳು.

ಯೋಚನಾಸಕ್ತರಾಗಿದ್ದ ರಾಯರು ' ನಾಳೆ ಅಲ್ಲವೆ ವರದಸ್ವಾಮಿಗೆ ಗರುಡೋತ್ಸವ, ವೇದಾ ? 'ಎಂದು ಕೇಳಿದರು.

' ಹೌದು ' ಎಂದು ವೇದ ಸಂತೋಷದಿಂದ ಹೇಳಿದಳು. ರಾಯರ ಮುಖದಿಂದ ಕಾಂತಿಯೊಂದು ಮಿಣುಗಿತು; ನಸುನಗೆಯಿಂದ ವೇದಳ ಕಡೆ ನೋಡಿದರು; ಮುಂದಿದ್ದ ಕಂಚಿವರದನ ಪ್ರತಿಮೆಗೂ, ಸಂಗೀತಾಚಾರ್ಯರಾದ ತ್ಯಾಗರಾಜರಿಗೂ ಕೈಮುಗಿದರು.

೩

ಇಂದು ಕಂಚಿಯ ವರದರಾಜ ಸ್ವಾಮಿಗೆ ಗರುಡೋತ್ಸವ. ದಕ್ಷಿಣ ದೇಶದಲ್ಲೆಲ್ಲಾ ಸುಪ್ರಸಿದ್ಧವಾದ ಉತ್ಸವವದು. ಅದನ್ನು ನೋಡಲು ಭಾರತದ ಎಲ್ಲ ಭಾಗಗಳಿಂದಲೂ ಜನರು ಬಂದು ಕಿಕ್ಕಿರಿಯುವರು. ಪ್ರತಿ ಸಂಗೀತ ಕಲಾಕೋವಿದನೂ ತನ್ನ ಕಲೆಯಲ್ಲಿ ಪ್ರವೀಣತೆಯನ್ನು ಅಲ್ಲಿ ತೋರಿಸಲು ಬರುವನು.

ಸುಮಾರು ಬೆಳಗ್ಗೆ ಒಂಭತ್ತು ಗಂಟೆ. ದೇವತಾರ್ಚನೆಗೆ ಪ್ರಾರಂಭ ವಾಗಿದೆ. ಗರ್ಭಗುಡಿಯ ಬಳಿ ವೇದಪಾಠಕರು ನಿಂತು ಮಂತ್ರಗಳನ್ನು ಹೇಳುತ್ತಿದ್ದಾರೆ. ದೇವಾಲಯದ ನವರಂಗದಲ್ಲಿ ಸಂಗೀತಗಾರರೆಲ್ಲಾ ನೆರೆ ದಿದ್ದಾರೆ. ಅವರೆಲ್ಲರ ದೃಷ್ಟಿಯೂ ನಾರಾಯಣ ಪಿಳ್ಳೆಯ ನಾಗಸ್ವರದ ಮೇಲೆ. ದೇವನನ್ನು ನೋಡಲು ಮತ್ತು ಪಿಳ್ಳೆಯ ಸಂಗೀತವನ್ನು ಕೇಳಲೋಸುಗವೇ ಎಲ್ಲಾ ಸಂಗೀತಗಾರರೂ ಅಲ್ಲಿ ನೆರೆದಿದ್ದುದು.

ಅದೊಂದು ಹಬ್ಬದ ದಿನದಂತಿತ್ತು. ದೇವಾಲಯವೆಲ್ಲಾ ತಳಿರು ತೋರಣಗಳಿಂದಲೂ, ಬಾಳೆಯ ಕಂದುಗಳಿಂದಲೂ, ಮಂತ್ರಾಕ್ಷತೆಯ ಎರಚು ವಿಕೆಯಿಂದಲೂ, ವೇದ ವಾದ್ಯಘೋಷಗಳಿಂದಲೂ ಮೆರೆಯುತ್ತಿತ್ತು. ಭಾರ ತದ ಎಲ್ಲಾ ತರದ ವಿಚಿತ್ರ ಉಡುಪುಗಳನ್ನು ನೋಡಬೇಕಾದರೆ ಅದೇ ದಿನ !

ದೇವನಿಗೆ ಅಭಿಷೇಕವಾಯಿತು; ಅಲಂಕಾರವಾಯಿತು. ಬಲಿಪೂಜೆ
ಯಾಯಿತು. ಅರ್ಚಕರು ಸ್ವಸ್ತಿಯನ್ನು ಮುಗಿಸಿ ಮುಂದಿದ್ದ ವರದ
ಸ್ವಾಮಿಯ ಕಡೆಯಿಂದ ಸಂಗೀತಗಾರರ ಕಡೆಗೊಮ್ಮೆ ತಮ್ಮ ದೃಷ್ಟಿಯನ್ನು
ಬೀರಿದರು. ಇವರನ್ನು ನೋಡಿ ತಮ್ಮ ಮುಖದಲ್ಲಿ ಮುಗುಳುನಗೆಯನ್ನು
ಸೂಚಿಸಿದವರು ಸಂಗೀತಗಾರರ ವೃಂದದಲ್ಲಿ ನಿಂತಿದ್ದ ಅಶ್ವತ್ಥನಾರಾಯಣ
ರಾಯರೊಬ್ಬರೇ! ಇವರೂ ಎಲ್ಲಾ ಸಂಗೀತಗಾರರೊಡನೆ ಓಲಗದವರ
ಮುಂದುಗಡೆ ನಿಂತಿದ್ದರು. ಅವರ ಪಕ್ಕದಲ್ಲಿ ವೇದವತಿ, ಸರಸ್ವತಿ, ಶಾರದ
ಮೊದಲಾದ ಸಂಗೀತಗಾತಿಯರೂ ಇದ್ದರು.

ವೇದವತಿ ಸುಮಾರು ಇಪ್ಪತ್ತು ವರ್ಷದ ಯುವತಿ. ತನಗೆ ಮೈಸೂ
ರಲ್ಲಿ ಬಹುಮಾನವಾಗಿ ಬಂದಿದ್ದ ಜರತಾರಿ ನೀಲಿ ಬಣ್ಣದ ಸೀರೆಯನ್ನು
ಉಟ್ಟಿದ್ದಳು. ಮೇಘ ಬಣ್ಣದ ರವಿಕೆಯನ್ನು ತೊಟ್ಟಿದ್ದಳು. ಅವಳ ಕುರುಳಿನ
ತುರುಬಿನಲ್ಲಿ ಪೋಣಿಸಿದ ಮಲ್ಲಿಗೆ ಮೊಗ್ಗಿನ ಸರ. ಕತ್ತಿನಲ್ಲಿ ಎರಡೆಳೆಯ
ಚೈನೊಂದು. ಕೈಗಳಲ್ಲಿ ಎರಡೆರಡು ಚಿನ್ನದ ಬಳೆಗಳು. ಕಿವಿಗಳಲ್ಲಿ ಸಣ್ಣ
ವಜ್ರದ ಓಲೆಗಳಿಂದ ಕೂಡಿದ ಲೋಲಾಕು. ನಡುವಿನಲ್ಲಿ ಚಿನ್ನದ ಸಾದಾ
ಡಾಬು. ಕೆಂಪು ಮಿಶ್ರವಾದ ಅವಳ ದೇಹದ ಬಿಳುಪು ಬಣ್ಣಕ್ಕೂ, ಅವಳ
ನೀಲಿ ಜರತಾರಿ ಸೀರೆಗೂ ಸೊಗಸಾಗಿ ಒಪ್ಪಿತ್ತು. ಆಕೆ ಸಂಗೀತದೇವಿ
ಯಾದ ಸರಸ್ವತಿಯೇ ಸಂಗೀತಗಾರರ ಪಾಂಡಿತ್ಯವನ್ನು ಪರೀಕ್ಷಿಸಲು ಬಂದಿ
ರುವಳೋ ಎನ್ನುವಂತಿದ್ದಳು. ಅವಳು ಪರೀಕ್ಷಿಸುವ ರೀತಿಯಲ್ಲಿಯೇ
ನಿಂತಿದ್ದಳು. ಅವಳ ಕಿವಿಗಳು ಪಿಳ್ಳೆಯ ನಾಗಸ್ವರದ ಮೇಲೂ, ಕಣ್ಣುಗಳು
ವರದಸ್ವಾಮಿಯ ಮೇಲೂ ಇದ್ದುವು.

ಅರ್ಚಕರ ನಗುಮುಖವನ್ನು ನೋಡಿದೊಡನೆಯೇ ರಾಯರೂ ತಮ್ಮ
ಮುಖದಲ್ಲಿ ಪ್ರತ್ಯುತ್ತರದ ನಗುವನ್ನು ಸೂಚಿಸಿದರು. ಓಲಗವನ್ನು ನಿಲ್ಲಿ
ಸಿರೆಂದು ಅರ್ಚಕರು ಕೈತೋರಿಸಿದರು. ನವರಂಗದಲ್ಲಿ ಆದಷ್ಟು ಮಟ್ಟಿನ
ನಿಶ್ಶಬ್ದತೆಯಿದ್ದಿತು.

ಅರ್ಚಕರು ಮಂತ್ರಪಠನೆಗೆ ಮೊದಲುಮಾಡಿದರು. ದೇವನಿಗೆ ಅರ್ಚನೆ
ಮಾಡುತ್ತಾ '........ಚಾಮರಮವಧಾರಯ - ಸಂಗೀತಮವಧಾರಯ.... '
ಎಂದು ಮಂತ್ರಪಠನೆಯನ್ನು ಸ್ವಲ್ಪ ನಿಲ್ಲಿಸಿ ಓಲಗದವರ ಕಡೆಗೊಮ್ಮೆ

ನೋಡಿದರು. ಓಲಗದವರು ತಮ್ಮ ತಮ್ಮ ವಾದ್ಯಗಳನ್ನು ತೆಗೆದುಕೊಂಡರು. ಹಿಂದೆ ಬಾರಿಸುತ್ತಿದ್ದ ಸಾಧಾರಣ ನಾಗಸ್ವರದವನ ಸ್ಥಾನಕ್ಕೆ ಪಿಳ್ಳೆ ಬಂದು ನಿಂತನು. ಆತ ದೇವಸ್ಥಾನದಲ್ಲಿ ಉತ್ಸವಕಾಲಗಳಲ್ಲಿ ಮಾತ್ರ ನಾಗಸ್ವರ ಬಾರಿಸುತ್ತಿದ್ದನು. ಪಿಳ್ಳೆ ಅಂದು ನಗುಮುಖದಿಂದ್ದಿನು. ತನ್ನ ಹೃದಯ ದಲ್ಲಿರುವ ಪೂರ್ಣ ಸಂಗೀತ ವಿದ್ಯೆಯನ್ನೂ ಅಂದು ದೇವನಿಗರ್ಪಿಸಿ ಯಶಸ್ಸು ಪಡೆಯಬೇಕೆಂದು ತನಗೆ ಮೈಸೂರಿನಲ್ಲಿ ನವರಾತ್ರಿಯಲ್ಲಿ ಮಹಾರಾಜರಿಂದ ಬಹುಮಾನವಾಗಿ ಬಂದಿದ್ದ ಚಿನ್ನದ ನಾಗಸ್ವರವನ್ನು ಕೈಗೆ ತೆಗೆದು ಕೊಂಡನು.

ಅರ್ಚಕರು ಪಿಳ್ಳೆಯ ಕಡೆಗೊಮ್ಮೆ ನೋಡಿದರು; ಬಿರುಗಣ್ಣಿನಿಂದ ನೋಡಿದರು. ಅವರಿಗೆ ಮಂತ್ರ ಮುಂದೆ ಹೊರಡಲಿಲ್ಲ. ದೇವನ ಪಾದದ ಬಳಿಯಿದ್ದ ಮಡಿಸಿದ್ದ ಕಾಗದವನ್ನು ಕೈಗೆ ತೆಗೆದುಕೊಂಡರು. ಮತ್ತೆ ಸಂಗೀತಗಾರರ ಕಡೆಗೊಮ್ಮೆ ನೋಡಿ, ಪಿಳ್ಳೆಯ ಕಡೆ ನೋಡಿ, 'ಸಂಗೀತ ಮವಧಾರಿಯ' ಎಂದು ಪುನಃ ಹೇಳಿ, ಮಂತ್ರವನ್ನು ಸ್ವಲ್ಪ ತಡೆದು, 'ವಿಶ್ವಾಂಬರಿ ರಾಗಮವಧಾರಿಯ....' ಎಂದರು. ಇದನ್ನು ಕೇಳಿದೊಡನೆಯೆ ರಾಗಚಕ್ರವರ್ತಿಯು ಬೆಸ್ಪಾದನು! ಆತನು ಬಾಯಲ್ಲಿಟ್ಟಿದ್ದ ನಾಗಸ್ವರ ಹಾಗೆಯೇ ನಿಂತಿತು. ಆತನ ಬಿಳಿಯ ಮುಖ ಕೆಂಪಾಯಿತು; ದೇಹ ವೆಲ್ಲಾ ನಡುಗಿತು. ಅರ್ಚಕರು ಮತ್ತೊಮ್ಮೆ 'ವಿಶ್ವಾಂಬರಿ ರಾಗಮವ ಧಾರಿಯ' ಎಂದು ಪಿಳ್ಳೆಯ ಕಡೆ ನೋಡಿದರು. ಅದು 'ರಾಗ ಚಕ್ರವರ್ತಿ'ಯ ಎಲ್ಲಿಯಲ್ಲಿಲ್ಲದ ರಾಗವಾಗಿತ್ತು. ಸಂಗೀತಗಾರರೆಲ್ಲಾ ದೇವನ ಕಡೆ ಇಟ್ಟಿದ್ದ ತಮ್ಮ ದೃಷ್ಟಿಯನ್ನು ಪಿಳ್ಳೆಯ ಕಡೆ ತಿರುಗಿಸಿದರು. ವೇದವತಿ ನಸು ನಗೆಯಿಂದ ಪಿಳ್ಳೆಯನ್ನು ನೋಡಿದಳು. ಅವಳ ದೃಷ್ಟಿ ಬಿದ್ದೊಡನೆಯೇ ಪಿಳ್ಳೆ ತಲೆ ತಗ್ಗಿಸಿಕೊಂಡನು. ಅರ್ಚಕರು ಮೂರನೆಯ ಸಲ 'ವಿಶ್ವಾಂಬರಿ ರಾಗಮವಧಾರಿಯ' ಎಂದರು. ವೇದವತಿ ಮೆಲ್ಲನೆ 'ಆ....ಆ..' ಎಂದು ರಾಗಾಲಾಪನೆಗೆ ತಾನು ಹಾಡುತ್ತೇನೆಂಬ ಪ್ರಜ್ಞೆಯಿಲ್ಲದೆಯೇ ಪ್ರಾರಂಭಿಸಿ ದಳು. ರಾಯರು ಬಿರುಗಣ್ಣಿನಿಂದ ಅವಳನ್ನು ನೋಡಿದರು. ಅವಳು ಬೆಚ್ಚಿ ದಳು. ಸುಮ್ಮನಾದಳು. ಆನಂತರ ಅರ್ಚಕರು ಮಂತ್ರವನ್ನು ಮುಂದು

ಮರಿಸಿ 'ಚಕ್ರವಾಕ ರಾಗಮವಧಾರಿಯು' ಎಂದು ಮಂತ್ರಕ್ಕೆ ಉತ್ತರವನ್ನು ಎದುರುನೋಡಿದರು. ಯೋಚಿಸುತ್ತಿದ್ದ ಪಿಳ್ಳೆಯು ನಾಗಸ್ವರದಿಂದ—

"ಸುಗುಣಮುಲೆ। ಚೆಪ್ಪುಕೊಂಟಿ। ಸುಂದರ ಶ್ರೀ। ರಾಮಚಂದ್ರ ॥ಪ॥
ಸ್ನಾನಾದಿ ಸುಕರ್ಮಂಬುಲು। ವೇದಾಧ್ಯಯನಂಬುಲೆರಗ।
ಶ್ರೀನಾಯಕಕ್ಷಮಿಯಿಂಬುಮು। ಶ್ರೀತ್ಯಾಗರಾಜಾನುತ॥"

ಎನ್ನುವ ಕೀರ್ತನೆಯು ಚಕ್ರವಾಕ ರಾಗದಲ್ಲಿ ರೂಪಕ ತಾಳದಲ್ಲಿ ಹೊರಟಿತು. ಅದು ಅಂದು ಆತನು ಹೃದಯದಿಂದ ಅನುಭವಿಸಿ ನುಡಿಸಿದ ಕೀರ್ತನೆಯಾಗಿತ್ತು. ನಾಗಸ್ವರವನ್ನು ಬಾರಿಸುತ್ತಿರುವಲ್ಲಿ ದೈನ್ಯದಿಂದ ದೇವನ ಕಡೆ ನೋಡುತ್ತಿದ್ದನು. ಪರಮೇಶನ ಸಾಕ್ಷಾತ್ಕಾರವನ್ನು ಪಡೆಯುತ್ತಿದ್ದ ಯೋಗಿಯ ಕಳೆ, ಆತನ ಮುಖದಲ್ಲಿ ತುಂಬುತ್ತಿತ್ತು. ಆತನ ಆ ರಾಗವನ್ನು ಕೇಳಿದ ಸಂಗೀತಗಾರರೆಲ್ಲಾ ತಲೆದೂಗಿದರು. ಕೀರ್ತನೆ ಮುಗಿಯಿತು. ಅರ್ಚಕರು ತಮ್ಮ ಮಂತ್ರವನ್ನು ಮುಂದುವರಿಸಿ 'ಶ್ರೀ ರಾಗಮವಧಾರಿಯು' ಎಂದರು. ಪಿಳ್ಳೆಯು ನಡುಗುತ್ತಿದ್ದ ಕೈಯಿಂದ ನಾಗಸ್ವರ ತನ್ನಷ್ಟಕ್ಕೆ ತಾನೇ, ಆತನಿಗೆ ಅರಿವಿಲ್ಲದಂತೆ ಆತನ ಬಾಯಿ ಬಳಿ ಬಂದಿತು. ಆತನ ಕಣ್ಣ ಮುಂದೆ ಸರ್ತಿಸುತ್ತಿದ್ದ, ಆತನ ತಲೆಯಲ್ಲಿ ಸೆರೆಯಾಗಿದ್ದ ತ್ಯಾಗರಾಜರ ನೆಚ್ಚಿನ ಕೀರ್ತನೆ ಶ್ರೀರಾಗದ್ದು 'ಎಂದುರೊ ಮಹಾನುಭಾವುಲು!..' ಎನ್ನುವುದು ಆತನ ನಾಗಸ್ವರದಿಂದ ಹೊರಟಿತು. ಪಿಳ್ಳೆ ಅದನ್ನು ಸೊಗಸಾಗಿ ಬಾರಿಸಿದನು. ಆ ಕೀರ್ತನೆಯೂ ಮುಗಿಯಿತು. ಪಿಳ್ಳೆ ತಲೆ ಎತ್ತಿ ಸಂಗೀತಗಾರರ ಕಡೆಗೊಮ್ಮೆ ನೋಡಿದೊಡನೆಯೇ ಅಶ್ವತ್ಥನಾರಾಯಣರಾಯರೂ ತಮ್ಮ ಮುಖದಲ್ಲಿ ಮುಗುಳುನಗೆ ಸೂಚಿಸಿದರು. 'ಅಭಿನವಸರಸ್ವತಿ' ಯ ಮುಖದಿಂದ ಹುಸಿ ನಗುವಿನ ಕಿಡಿಯೊಂದು ಚದರಿ ಪಿಳ್ಳೆಯ ಮುಖದ ಮೇಲೆ ಬಿದ್ದಿತು. ಅದು ಆತನ ಹೃದಯವನ್ನು ಸುಟ್ಟಿತು.

ಅರ್ಚಕರು ದೇವನಿಗೆ ಮಾಡಬೇಕಾಗಿದ್ದ ಎಲ್ಲಾ ಅರ್ಪಣೆಗಳನ್ನೂ ಅರ್ಪಿಸಿದರು. ಆಮೇಲೆ ಮಹಾಮಂಗಳಾರತಿಯಿಂದಲೂ ದೇವನನ್ನು ಬೆಳಗಿದರು.

ಮಂಗಳಾರತಿಯಾದ ಮೇಲೆ ಶ್ರೀದೇವಿ ಭೂದೇವಿ ಸಹಿತನಾದ ವರದರಾಜಸ್ವಾಮಿಯ ಉತ್ಸವಮೂರ್ತಿಯನ್ನು ಸಿಂಗರಿಸಿದ ರಥದಲ್ಲಿದ್ದ ಗರುಡ

ಸ್ವಾಮಿಯ ಮೇಲೆ ಅರ್ಚಕರಿಟ್ಟರು. ರಥ ಹೊರಡಲು ಸಿದ್ಧವಾಯಿತು. ಮುಂದೆ ವಾದ್ಯಗಳು. ಅವುಗಳ ಬಳಿ ಸಂಗೀತಗಾರರು. ಅವರ ಪಕ್ಕದಲ್ಲಿ ವೇದಘೋಷ; ಜನರ ಸಂತೋಷ ನಿನಾದಗಳಿಂದ ಉತ್ಸವವು ಹೊರಟಿತು.

ಅಂದು ಪಿಳ್ಳೆಯ ಸ್ಥಿತಿ ಒಂದು ತರವಾಗಿತ್ತು. ಅವನ ಮೋಹಿತ ಕಲ್ಯಾಣಿಯೂ ಕೂಡ ಅಂದು ಅಪಶ್ರುತಿಯಿಂದ ಹೊರಗೆ ಬಂದಳು! ಉತ್ಸವ ಸ್ವಲ್ಪ ದೂರ ಬಂದ ಮೇಲೆ ವೇದವತಿ ಪಿಳ್ಳೆಯನ್ನು ನೋಡಿ, ' ಇನ್ನು ಬರುತ್ತೇವೆ, ರಾಗಚಕ್ರವರ್ತಿಗಳೇ ! ತಮ್ಮ ಚಕ್ರವಾಕ ಶ್ರೀರಾಗಗಳು ಸೊಗಸಾಗಿದ್ದುವು! ' ಎಂದು ನಸುನಗೆಯಿಂದ ಹೇಳಿ ಆತನ ಪ್ರತ್ಯುತ್ತರ ವನ್ನೂ ಸಹ ನಿರೀಕ್ಷಿಸದೆ, ತನ್ನ ಗುರುವಿನೊಡನೆ ದೇವನಿಗೆ ತಟ್ಟೆಯನ್ನು ಕೊಡಲು ಸಿದ್ಧಪಡಿಸಲು ಮನೆಗೆ ಹೋದಳು.

' ವೇದ ! ನಿನ್ನ ಇಷ್ಟಾರ್ಥ ನೆರವೇರಿತೇ ? ' ಎಂದು ರಾಯರು ತ್ಯಾಗ ರಾಜರ ಪಠಗಳಿಗೂ ವೇದಿಕೆಯಲ್ಲಿದ್ದ ವರದಸ್ವಾಮಿಯ ಪ್ರತಿಮೆಗೂ ಮಂಗ ಳಾರತಿಯನ್ನು ನಗುಮುಖದಿಂದ ಬೆಳಗುತ್ತಿದ್ದ ವೇದವತಿಯ ಕಡೆ ನೋಡುತ್ತಾ ಹೇಳಿದರು.

' ಎಲ್ಲಾ ದೇವರ ಪ್ರಸಾದ ' ಎಂದು ದೇವನಿಗೆ ಮಂಗಳಾರತಿ ಬೆಳ ಗಿದ ತಟ್ಟೆಯನ್ನು ಕೆಳಗಿಟ್ಟು, ಸ್ವಾಮಿಗೆ ನಮಸ್ಕರಿಸಿ, ಆಮೇಲೆ ಗುರುವಿಗೆ ನಮಸ್ಕಾರ ಮಾಡಿದಳು. ರಾಯರು ' ವೇದ, ಅನ್ಯಾಯವಾಗಿ ಒಬ್ಬ ವಿದ್ವಾಂಸನನ್ನು ಅವಮಾನಪಡಿಸಿದೆ ' ಎಂದರು.

'ಆತ ಎಷ್ಟು ಜನರನ್ನು ಹಿಂದೆ ಹೀಗೆ ಮಾಡಲಿಲ್ಲ ! ಎಲ್ಲರ ಹೃದಯವೂ ಅವಮಾನಪಟ್ಟಾಗ ಹೇಗಾಗುತ್ತೆ ಎನ್ನುವುದನ್ನು ಅವನೂ ತಿಳಿದ. ಅದಿರಲಿ ಗುರುಗಳೇ, ನಿಮಗೆ ಅರ್ಚಕರು ಹೇಗೆ ಗುರುತಾದರು !'

' ಆತನ ಹೆಂಡತಿ ವಿಮಾನ, ನನ್ನ ಶಿಷ್ಯೆ. ಅವಳು ಮೈಸೂರಿನವಳು. ಅರ್ಚಕ ಕೃಷ್ಣಸ್ವಾಮಿಯವರ ಮಗಳು. ಅವಳೂ ನನ್ನ ಒಬ್ಬ ಸಾಕು ಮಗಳು, ಕಂಡಾ ! ಅವರು ನನಗೆ ಚಿರಪರಿಚಿತರು. ಅರ್ಚಕ ರಾಮಸ್ವಾಮಿ ಯವರೂ ಸಹ ಮೈಸೂರಿಗೆ ಮಾವನ ಮನೆಗೆ ಬಂದಿದ್ದಾಗ ನನ್ನನ್ನು ಇಲ್ಲಿಗೆ ಬಾ ಎಂದು ಕರೆದಿದ್ದರು. ಆತನ ಹೆಂಡತಿ ವಿಮಾನಾನೂ ಅನೇಕ ಸಲ ನನ್ನನ್ನು ಇಲ್ಲಿಗೆ ಬರಹೇಳಿದ್ದಳು. ನಿನ್ನೆ ನಿನ್ನ ಮಾತನ್ನು ಕೇಳಿದೊಡನೆಯೇ ಆತನಿಗೆ

ಎಲ್ಲಾ ಸಮಾಚಾರವನ್ನು ಹೇಳಿದೆ. ಆತನಿಗೂ ಪಿಳ್ಳೆಯನ್ನು ಕಂಡರೆ ಸ್ವಲ್ಪ ಹಾಗೆ ಹಾಗೆಯೇ. 'ಪಿಳ್ಳೆ ವಿದ್ಯಾವಂತನೇನೋ ಹೌದು. ಆದರೆ, ಬಹು ಜಂಭ' ಎಂದು ಆತ ಹೇಳಿದ. ಆತ ನಿತ್ಯ ಹೇಳುತ್ತಿದ್ದ ಮೂರು ರಾಗ ಗಳಿಗೆ ಪ್ರತಿಯಾಗಿ ಈ ದಿನ ಈ ಮೂರನ್ನು ಹೇಳುವಂತೆ ಚೀಟಿಯಲ್ಲಿ ಬರೆ ದುಕೊಟ್ಟೆ.'

'ರಾಗಚಕ್ರವರ್ತಿಯ ಬೊಕ್ಕಸದಲ್ಲೂ ಆ ವಿಶ್ವಾಂಬರಿ ಇಲ್ಲದೆ ಹೋಯಿತಲ್ಲ!'

'ವಿಶ್ವಾಂಬರಿ ಅದು ವೇದಾ! ಎಲ್ಲಾ ದೇವನ ಲೀಲೆ. ಈಗ ಮೂರು ತಿಂಗಳ ಹಿಂದೆ ನಮ್ಮ ತಾತನವರಿಟ್ಟಿದ್ದ ತಾಳೆಯೋಲೆಯ ಪ್ರತಿಯೊಂದು ಸಿಕ್ಕಿತು. ಅದರಲ್ಲಿ ಇದ್ದುವು ತ್ಯಾಗರಾಜರ ಕೃತಿಗಳು. ಆ ಪ್ರತಿಯಲ್ಲಿದ್ದ ಕಟ್ಟಕಡೆಯ ಕೃತಿ ವಿಶ್ವಾಂಬರಿಯಲ್ಲಿತ್ತು. ಇದು ಹೊಸ ರಾಗವೆಂದು ಎಲ್ಲೂ ಹಾಡದೆ ಸುಮ್ಮನಿದ್ದೆ. ನಮ್ಮಿಬ್ಬರವಿನಾ ಅದು ಮತ್ತೆ ಯಾರಿಗೂ ಸದ್ಯಕ್ಕೆ ಗೊತ್ತಿಲ್ಲ.'

'ಅದನ್ನೂ ನನಗೆ ಹೇಳಿಕೊಟ್ಟಿರಲ್ಲಾ!'

'ವೇದ! ನಿನ್ನಲ್ಲಿ ನಾನು ಒಂದನ್ನೂ ಮರೆಮಾಚಲಿಲ್ಲ. ನನ್ನ ಪೂರ್ಣ ವಿದ್ಯೆಯನ್ನು ನಿನಗೆ ಧಾರೆ ಎರೆದಿದ್ದೇನೆ, ಕಂದಾ!'

'ವಿಶ್ವಾಂಬರಿ ಅಷ್ಟೇನೂ ಕಷ್ಟವಾಗಿಲ್ಲ. ಆದರೆ ಕಿವಿಗೆ ಬಹು ಇಂಪನ್ನು ಕೊಡುತ್ತದೆ ಅದು. ಆ ರಾಗವೇ ನನ್ನ ಪ್ರಾಣ. ಎಷ್ಟೋಸಲ ದೇವಸ್ಥಾನದಲ್ಲಿ ಹಾಡಬೇಕೆಂದು ಮನಸ್ಸು ಬಂದಿತು. ಆದರೆ ನಿಮಗೆ ಕೊಟ್ಟಿದ್ದ ಭಾಷೆ– ಅದನ್ನು ಎಲ್ಲೂ ಹಾಡುವುದಿಲ್ಲವೆಂಬುದು–ನನ್ನ ಕಣ್ಣೆ ದುರಿಗೆ ನಿಲ್ಲುತ್ತಿತ್ತು. ಆದುದರಿಂದಲೇನೇ ನಾನು ಅದನ್ನು ಎಲ್ಲಿಯೂ ಹಾಡಲಿಲ್ಲ.'

'ಅದು ನಮ್ಮ ಮನೆತನದವರು ನನಗೆ ಕೊಟ್ಟಿರುವ ನಿಧಿ, ವೇದಾ. ಇದೂ ಅಲ್ಲದೆ ನೀನು ಅದನ್ನು ಅಲ್ಲಿ ಹಾಡಿದ್ದರೆ ಪಾಪ ಅವನಿಗೆ ಬಹು ಅಪ ಮಾನವಾಗುತ್ತಿತ್ತು. ಸೋಲಿನಿಂದ ಅನ್ಯಾಯವಾಗಿ ಒಂದು ಪ್ರಜ್ಞಾನಿಧಿ ಅಳಿದಿದ್ದರೆ ಅದು ಯಾರಿಗೆ ಪಾಪ! ನಮ್ಮ ಮನೆಯವರ ಜಯಾಪಜಯ

ಳಿಲ್ಲಾ ಈ ವಿಶ್ವಾಂಬರಿಯಿಂದಲೇ, ಮಗು. ನನ್ನಲ್ಲೇ ಈ ರಾಗ ಕೊನೆಗಾಣ ಕೂಡದೆಂದು ನಿನಗೆ ಅದನ್ನು ಹೇಳಿಕೊಟ್ಟೆ.'

'ಅದೇನೋ ಸರಿ, ಗುರುಗಳೇ! ಆತ ನಿತ್ಯ ಹಾಡುತ್ತಿದ್ದ ಕಾಂಬೋ ದಿಗೆ ಬದಲಾಗಿ ಚಕ್ರವಾಕವನ್ನು ಏಕೆ ಹಾಕಿದಿರಿ?'

'ಆತ ಯಾವುದೊ ಹೊಸ ಕೀರ್ತನೆಗಳನ್ನು ಕಲಿಯುತ್ತಿದ್ದಾನೆಂದು ಅರ್ಚಕರು ನನಗೆ ಹೇಳಿದರು. ಅವುಗಳಲ್ಲಿ 'ಸುಗುಣಮುಲೆ ಚೆಪ್ಪುಕೊಂಟಿ' ಎನ್ನುವುದೂ ಒಂದೆಂದರು. ಎಲ್ಲರ ಮುಂದೆಯೂ ತನ್ನ ಹೃದಯದಲ್ಲಿರುವು ದನ್ನು ಹೇಳಿಕೊಳ್ಳಲಿ ಎಂದು ಹಾಗೆ ಮಾಡಿದೆ.'

'ಗುರುಗಳೇ! ಅದು ಒಂದೇನೇ ಚಕ್ರವಾಕ ರಾಗದಲ್ಲಿರುವ ಕೀರ್ತನೆ? ಅದನ್ನೇ ಹಾಡುವನೆಂದು ನಿಮಗೆ ಹೇಗೆ ಗೊತ್ತಾಯಿತು?'

'ಅಯ್ಯೋ ಬೆಪ್ಪು ಹುಡುಗಿ! ನೀನು ಎಂದು ಅವನನ್ನು 'ಸಂಗೀತದ ಆಚಾರ್ಯರಾದ ತ್ಯಾಗರಾಜರನ್ನು ನೆನೆಯಿರಿ. ಅವರ ಜೀವನದ ಕಡೆ ನೋಡಿರಿ' ಎಂದೆಯೋ, ಅಂದಿನಿಂದ ಆತನ ಹೃದಯ ಅವರನ್ನೇ ನೆನೆಯುತ್ತಿದೆ. ಹೃದಯ ಒಪ್ಪದಿದ್ದರೂ ಆಚಾರ್ಯರಲ್ಲಿ ಅರ್ಪಿತವಾಗಿರುವ ಭಕ್ತಿಯ ವಾಣಿಯು ಆತನ ಹೃದಯವಾಣಿಯೊಡನೆ ಹೋರಾಡುತ್ತಿದೆ. ಆಕಸ್ಮಾತ್ತಾದ ಪ್ರಹಸನ ಒದಗಿದೊಡನೆಯೇ ಈ ಹೋರಾಡುತ್ತಿದ್ದ ವಾಣಿಗಳೇ ಮುಂದೆ ಬರುತ್ತವೆ. ಆದುದರಿಂದಲೇನೆ, ನಾನು ಎಣಿಸಿದಂತೆಯೇ ಆತ ಆ 'ಸುಗುಣಮುಲೆ ಚೆಪ್ಪುಕೊಂಟಿ....' ಎನ್ನುವುದನ್ನೂ 'ಎಂದರೋ ಮಹಾನುಭಾವುಲು....' ಎನ್ನುವುದನ್ನೂ ಹಾಡಿದನು' ಎಂದರು.

ರಾಯರ ಮಾತುಗಳನ್ನು ಕೇಳುತ್ತಿದ್ದ ಆಕೆ ಅವರ ಮುಖವನ್ನು ದೃಷ್ಟಿಸಿ ನೋಡಿ 'ನನಗೆ ಅಷ್ಟು ಮಾತ್ರ ತಿಳಿದುಕೊಳ್ಳುವ ಬುದ್ಧಿ ಇಲ್ಲದೆ ಹೋಯಿತು' ಎಂದು ನಸುನಗುತ್ತಾ ಹೇಳಿದಳು. ಆಗ ಹೊರಗಿನಿಂದ 'ವೇದವತಿ! ಅಮ್ಮಾ ವೇದವತಿ!' ಎನ್ನುವ ಕೂಗು ಬಂದಿತು. ವೇದವತಿ ಬಾಗಿಲಬಳಿ ಹೋದಳು. ಪಿಳ್ಳೆ ನಿಂತಿದ್ದಾನೆ! ಆತನ ಮುಖ, ಹೃದಯ ವನ್ನು ಸುಡುತ್ತಿದ್ದ ಲಜ್ಜೆಯಿಂದ ತುಂಬಿದೆ. ಅವನು 'ತಂಗೀ, ವೇದವಮ್ಮಾ ಗುರುಗಳಿದ್ದಾರೆಯೇ?' ಎಂದನು.

ವೇದವತಿ ಆಶ್ಚರ್ಯದಿಂದ ಪಿಳ್ಳೆಯನ್ನು ನೋಡುತ್ತಾ 'ಹೂ!'

ಎಂದಳು. ದೇವನ ವೇದಿಕೆಯ ಬಳಿ ನಿಂತಿದ್ದ ರಾಯರ ಪಾದಗಳ ಮೇಲೆ ಬಿದ್ದು, ಪಿಳ್ಳೆ 'ಗುರುಗಳೇ, ಈ ಅಧಮನ ತಪ್ಪುಗಳನ್ನು ಕ್ಷಮಿಸಬೇಕು ! ಎಂದನು.

ರಾಯರು ಅವನನ್ನು ಪ್ರೀತಿಯಿಂದ ಮೇಲಕ್ಕೆತ್ತಿ ' ಪಿಳ್ಳೆಯವರೆ' ಇದೇನು ! ನಿಮ್ಮ ರೀತಿಯೇ ಒಂದು ತರವಾಗಿದೆ !' ಎಂದರು.

'ರಾಯರೇ ನಾನು ಪಾಪಿ. ಕ್ಷಮಿಸಿ. ವೇದವತಿಯ ಬಳಿ ನಿನ್ನೆ ನಾನು ತಮ್ಮನ್ನು ಹಳಿದೆ. ಇಂದು ನನ್ನ ಹೃದಯದಲ್ಲಿರುವ ಅಹಂಕಾರ ಸುಟ್ಟಿತು. ನೀವು ನನ್ನಲ್ಲಿದ್ದ ಅಹಂಕಾರವನ್ನು ಸುಟ್ಟು ನನ್ನನ್ನು ಪವಿತ್ರನನ್ನಾಗಿ ಮಾಡಿದಿರಿ. ಆ ರಾಗವನ್ನೂ ದಯವಿಟ್ಟು ಶಿಷ್ಯನಿಗೆ ಹೇಳಿಕೊಡಬೇಕು. ವೇದವತಿಯು ಯಾವಾಗಲೋ ಒಂದೊಂದು ಸಲ ಒಂದು ರಾಗವನ್ನು ಸ್ವಲ್ಪ ಆಲಾಪಿಸಿ ಏನೋ ನೆನಪಿಗೆ ಬಂದು ಆ ರಾಗವನ್ನು ನಿಲ್ಲಿಸಿಬಿಡುತ್ತಿದ್ದಳು. ಈ ದಿನವೂ ಹಾಗೇ ಮಾಡಿದಳು. ಅದರ ಕಾರಣ ನನಗೆ ಗೊತ್ತಾಗಲಿಲ್ಲ. ಕೇಳಿದರೆ ಆಕೆ ಅದು ತನಗೆ ಇನ್ನೂ ಪೂರ್ತಿ ಪಾಠವಾಗಲಿಲ್ಲ. ಆದರೆ ಹಾಡು ಹಾಡಬೇಕೆಂದು ಚಪಲ; ಈ ಸಲ ಖಂಡಿತವಾಗಿಯೂ ಕಲಿತುಕೊಂಡು ಬಂದು ಹಾಡುತ್ತೇನೆ ಎನ್ನುತ್ತಿದ್ದಳು. ನಾನು ಕೇಳಿದ್ದಷ್ಟು ಮಟ್ಟಿನ ಆ ಆಲಾಪನೆಯೇ ಬಹು ಇಂಪಾಗಿತ್ತು !'

ವೇದ ಗುರುವಿನ ಕಡೆಗೊಮ್ಮೆ ಮುಗುಳುನಗೆಯಿಂದ ನೋಡುತ್ತಾ 'ಅದೇ ವಿಶ್ವಾಂಬರಿ, ಪಿಳ್ಳೆಯವರೇ ! ನಮ್ಮ ಗುರುವಿನ ರಾಗಬೊಕ್ಕಸದಲ್ಲಿನ ಅಮೌಲ್ಯ ರತ್ನವದು. ಅವರ ಮಾತು ದೊರೆಯುವವರೆಗೂ ಅದು ಯಾರಿಗೂ ಗೋಚರಿಸುವ ಹಾಗಿಲ್ಲ ಎಂದಳು.

'ಗುರುಗಳೇ ನನ್ನ ತಪ್ಪುಗಳನ್ನು ಕ್ಷಮಿಸಬೇಕು.'

'ಕ್ಷಮಿಸಲು ನಾನು ಯಾರು ! ನಾನೇನು ಮಾಡಿದೆ ? '

'ತಾವೇನೂ ಮಾಡಲಿಲ್ಲ; ಈ ಪಾಮರನ ಅಜ್ಞತೆಯನ್ನು ತೋರಿಸಿಕೊಟ್ಟು ಪ್ರಪಂಚದಲ್ಲಿ ಇನ್ನೆಷ್ಟು ಮಂದಿ ಮಹಾನುಭಾವರಿರುವರು ಎನ್ನುವುದನ್ನು ತೋರಿಸಿಕೊಟ್ಟಿರಿ. ನೀವಿಲ್ಲದಿದ್ದರೆ ಆ ಬಡ ಪೂಜಾರಿಗೆ ಹೇಗೆ ಗೊತ್ತಾಗುತ್ತಿತ್ತು ಆ ರಾಗ ! ಎಲ್ಲಾ ನೀವು ಮಾಡಿದ್ದೇ ಸ್ವಾಮಿ. ಆಮೇಲೆ ಅವರೇ ಎಲ್ಲವನ್ನೂ ಹೇಳಿದರು. ದೇವನ ರಥದ ಮುಂದೆ ಹೋದೆ. ಆದರೆ

ಮನಸ್ಸು ಸರಿಯಾಗಿರಲಿಲ್ಲ. ನನ್ನ ಶಿಷ್ಯ ಮಾಧವನಿಗೆ ನಾಗಸ್ವರವನ್ನು ಕೊಟ್ಟು ತಮಗೆ ತಪ್ಪುಗಾಣಿಕೆ ಒಪ್ಪಿಸಲು ಇಲ್ಲಿಗೆ ಬಂದೆ. ಗುರುವೇ ನಮ್ಮ ಗಳ ಮನಸ್ತಾಪಗಳಿಂದ ದೇವನಿಗೆ ಪೂರ್ತಿ ಅರ್ಪಣೆಯಾಗಲಿಲ್ಲ. ಸ್ವಾಮಿ ಅತೃಪ್ತಿ ಹೊಂದಿದಂತೆ ತೋರಿದನು, ದಯವಿಟ್ಟು ಆ ರಾಗವನ್ನು ಹೇಳಿ ಕೊಡಬೇಕು.

'ಪಿಳ್ಳೆ, ನೀವು ವಿದ್ಯಾವಂತರು. ನೀವು ಒಪ್ಪಿಸುವ ತಪ್ಪು ಕಾಣಿಕೆ ನನಗಲ್ಲ ಆ ಸ್ವಾಮಿಗೆ, ಆಚಾರ್ಯರಿಗೆ. ವೇದ ನಿಮಗೆ ಬದಲಾಗಿ ಆ ರಾಗ ವನ್ನು ಸ್ವಾಮಿಗರ್ಪಿಸಿದಳು. ಇಲ್ಲಿರುವ ಆ ಸ್ವಾಮಿಯನ್ನೇ ನೋಡಿ;ಮುಖ ದಲ್ಲಿ ತೃಪ್ತಿ ಇಲ್ಲವೇ ? ನಾನು ಈ ದಿನ ಸಂಜೆ ಮೈಸೂರಿಗೆ ಹೋಗಬೇಕು. ವೇದವತಿಯೇ ಆ ರಾಗವನ್ನು ನಿಮಗೆ ಹೇಳಿಕೊಡುತ್ತಾಳೆ.

'ಪುನಃ ಯಾವಾಗ ಬರುತ್ತೀರಿ ಗುರುಗಳೇ ?' ಎಂದು ಪಿಳ್ಳೆ ಕೇಳಿದನು.

'ವೇದಳ ಮದುವೆಗೆ' ಎಂದು ರಾಯರು ನಸುನಗುತ್ತಾ ಹೇಳಿದರು. ವೇದ ರಾಯರ ಮಾತು ಕೇಳಿ ಮುಖದಲ್ಲಿ ಎಳೆನಗೆ ಸೂಚಿಸಿದಳು. ನಾರಾ ಯಣ ಪಿಳ್ಳೆ ವರದಸ್ವಾಮಿಯ ಪ್ರತಿಮೆಯ ಕಡೆ ನೋಡುತ್ತಾ, ತ್ಯಾಗರಾಜರ ಚಿತ್ರಗಳನ್ನು ದಿಟ್ಟಿಸಿನೋಡಿ, 'ತಾಯಿ ವೇದವತಿ! ಸ್ವಾಮಿ ಏನೋ ಮನೆ ತನದವರಿಂದ ಬಂದವನು. ಈ ಹೊಸ ಪಠಗಳು ಯಾವಾಗ ಬಂದುವು ' ಎಂದು ಕೇಳಿದನು.

'ಎರಡು ತಿಂಗಳಾದುವು. ಮೈಸೂರಿನ ಎಂ. ವಿ. ರಾವ್ ಅವರ ಮಗಳ ಮದುವೆಗೆ ಹೋಗಿದ್ದೆ. ಆತ ನಮ್ಮ ತಂದೆಯ ಬಾಲ್ಯ ಸ್ನೇಹಿತ. ಪ್ರಸಿದ್ಧ ಚಿತ್ರಕಾರ. ಮದುವೆಯಲ್ಲಿ ಸಂಗೀತ ಕಚೇರಿ ನನ್ನದು. ಆತ ಪಾಪ ಬಡವ. ತನ್ನ ಮಗಳಿಗೆ ಮದುವೆಗಾಗಿ ತೆಗೆದಿದ್ದ ಪೀತಾಂಬರವನ್ನು ನನಗೆ ಕೊಡಲು ಬಂದ. 'ನಿಮ್ಮ ಕೊಠಡಿಯಲ್ಲಿ ನೀವು ಬರೆದಿರುವ ಆ ಎರಡು ಪಠಗಳನ್ನೂ ಕೊಡಿ' ಎಂದು ಕೇಳಿದೆ. ಆತ ಸಂತೋಷದಿಂದ ಕೊಟ್ಟ. ನನ್ನ ಆರಾಧ್ಯ ದೇವತೆಗಳಿರುವ ಪಠಗಳೇ ಅವು.

ಪಿಳ್ಳೆ ಆದಕ್ಕೆ ಕೈಮುಗಿದು ರಾಯರಿಗೆ ಸಾಷ್ಟಾಂಗ ನಮಸ್ಕಾರಮಾಡಿ, 'ಗುರುಗಳೇ! ಇಂದು ಸೋದರಿಯ ನೆವದಿಂದ ಆಚಾರ್ಯಹೃದಯವನ್ನರಿತೆ. ಆ

ಆಚಾರ್ಯರೇ, ಇಂದು ನನಗೆ ಮೈನವಿಲ್ಲದಿದ್ದರೂ ತಮ್ಮ ಮನಸ್ಸಿನಲ್ಲಿದ್ದ ಕೀರ್ತನೆಯನ್ನು ಪಾಮರನಿಗೆ ಪ್ರಜ್ಞೆ ಇಲ್ಲದಂತೆ ಹಾಡಿಸಿದರು' ಎಂದು ಹೃದಯದಿಂದ ಬಂದ ಗದ್ಗದ ವಾಣಿಯಿಂದ ಪಿಳ್ಳೆ ಹೇಳಿದನು. ರಾಯರು ಆತನ ಕೈಹಿಡಿದು ಮೇಲಕ್ಕೆತ್ತಿ 'ಮಗು! ಅದಕ್ಕಾಗಿಯೇ ಅಷ್ಟು ಇಂಪಾಗಿತ್ತು. ಹೃದಯದಿಂದ ನೇರವಾಗಿ ಬಂದ ದೇವನ ವಾಣಿಯದು. ಎಲ್ಲಾ ಆಚಾರ್ಯರ ಮತ್ತು ಆ ಸ್ವಾಮಿಯ ಕೃಪೆ' ಎಂದು ಮುಂದಿದ್ದ ಸ್ವಾಮಿಯನ್ನೂ ತ್ಯಾಗರಾಜರ ಪಟಗಳನ್ನೂ ತೋರಿಸುತ್ತಾ ಹೇಳಿದರು.

ಮೂವರೂ ಏಕದೃಷ್ಟಿಯಿಂದ ರಾಯರು ತೋರಿಸಿದ ಮೂರ್ತಿಗಳ ಕಡೆಯೇ ನೋಡಿದರು. ಅವರ ಕಣ್ಣುಗಳಿಂದ ಬಾಷ್ಪವು ಹರಿಯಿತು. ಪರಮೇಶನ ಸಾಕ್ಷಾತ್ಕಾರದ ಪ್ರಸಾದವದು.

---

## ವಿಶ್ವಪ್ರೇಮ

ಈಸ್ಟರ್ ಹಬ್ಬದಲ್ಲಿ ಬರುವ ಗುಡ್‌ಫ್ರೈಡೆ ದಿವಸ ಲಿಲ್ಲಿಯ ಹುಟ್ಟಿದ ಹಬ್ಬ. ಲಿಲ್ಲಿ ಶ್ರೀಮಂತರಾದ ಡೇವಿಡ್ಸರ ಒಬ್ಬಳೇ ಮಗಳು. ಡೇವಿಡ್ಡರು ಮೈಸೂರು ಸರ್ಕಾರದ ನ್ಯಾಯ ಶಾಖೆಯಲ್ಲಿ ನ್ಯಾಯಾಧೀಶರಾಗಿ ಮೈಸೂರಿನಲ್ಲಿದ್ದರು. ಅವರಿಗೆ ಲಿಲ್ಲಿಯಲ್ಲದೆ ಮತ್ತೆ ಯಾರೂ ಮಕ್ಕಳಿಲ್ಲ. ಮಗಳು ಮತ್ತು ಅಳಿಯ ಮನೆಯಲ್ಲಿಯೇ ಇರಲೆಂದುಕೊಂಡು ವಿಶ್ವವಿದ್ಯಾನಿಲಯದ ಪದವೀಧರನಾದ, ಕ್ರಿಸ್ತ ಸಮಾಜದಿಂದ ಮುಂದಕ್ಕೆ ತರಲ್ಪಟ್ಟ ಅನಾಥನಾದ ಜೋಸೆಫ್‌ನ ಗುಣವನ್ನು ನೋಡಿ ಡೇವಿಡ್ಡರು ಅವನಿಗೆ ಲಿಲ್ಲಿಯನ್ನು ಮದುವೆ ಮಾಡಿಕೊಟ್ಟಿದ್ದರು.

ವಿಶ್ವವಿದ್ಯಾನಿಲಯದ ಪದವಿ ಬಂದ ಮೇಲೆ ಜೋಸಫ್ ಕೆಲವು ತಿಂಗಳು ಅತ್ತೆಯ—ಇಲ್ಲ ಮಾವನ— ಮನೆಯಲ್ಲಿಯೇ ಇದ್ದನು. ಕೆಲಸ ಕಾರ್ಯವಿಲ್ಲದ ಅಳಿಯನನ್ನು ಆಸಿ ಡೇವಿಡ್ಡರು (ಡೇವಿಡ್ಡರ ಕುಟುಂಬ) ಹಂಗಿಸಲು ಪ್ರಾರಂಭಿಸಿದರು. ಆಕೆಯು ಶ್ರೀಮಂತ ಮನೆತನದ ಅಸಂಭಾವದ ಮೂರ್ತಿ. ಅನಾಥನಾಗಿದ್ದು ಈಗ ಅಳಿಯನಾಗಿರುವ ಹುಡುಗ ಹೇಗೂ ಮನೆಯಲ್ಲಿಯೇ ಬಿದ್ದಿರುತ್ತಾನೆಂದು ಕೆಲಸಕ್ಕೆ ಬಾರದ ವಿಷಯಕ್ಕೆಲ್ಲಾ ಆಕೆ ಆತನಿಗೆ ಏನಾದರೂ ಹೇಳುತ್ತಿದ್ದರು.

ಒಂದು ಶ್ರೀರಾಮನವಮಿ ದಿನ ಜೋಸಫ್‌ನು ತನ್ನ ಗೆಳೆಯ ರಾಮ

ಮೂರ್ತಿಯು ಆಹ್ವಾನದ ಪ್ರಕಾರ ಮಧ್ಯಾಹ್ನದ ಭೋಜನಕ್ಕೆ ಹೆಂಡತಿಯನ್ನು ಕರೆದುಕೊಂಡು ಹೋದನು. ಅಂದು ಅವನತ್ತೆ ಸಮಾಜಕ್ಕೆ ಹೋಗಿದ್ದವರು ಹನ್ನೆರಡು ಗಂಟೆಯಾದರೂ ಬಾರದಿದ್ದುದರಿಂದ, ಅವನು ಆಕೆಗೆ ಹೇಳದೆಯೇ ಹೆಂಡತಿಯೊಡನೆ ಹೊರಟುಹೋಗಿದ್ದನು.

ಭೋಜನಾದಿಗಳು ಮುಗಿದ ಮೇಲೆ ರಾತ್ರಿ ಎಂಟು ಗಂಟೆಗೆ ಜೋಸಫ್ ಹೆಂಡತಿಯೊಡನೆ ಮನೆಗೆ ಹಿಂತಿರುಗಿದನು. ಬುಸುಗುಟ್ಟುತ್ತಿದ್ದ ಆನಿಯವರು ಮೊದಲು ಮಗಳ ಮೇಲೆ ತನ್ನನ್ನು ಕೇಳದೆ ಹೋದುದಕ್ಕಾಗಿ ಮಾತಿನ ಮಳೆಯನ್ನು ಸುರಿಸಿದರು. ಆಮೇಲೆ ಅಳಿಯನನ್ನು 'ಇನ್ನೇನು ಸಂಪಾದಿಸೋಕೆ ಯೋಗ್ಯತೆ ಇಲ್ಲ; ಆಫೀಸರಂತೆ ಹೆಂಡತಿಯೊಡನೆ ಅಲ್ಲಿ ಇಲ್ಲ ತಿರುಗೋದಕ್ಕೆ ಮಾತ್ರ ಆಗುತ್ತದೆ. ನಾಚಿಕೆ ಆಗೋದಿಲ್ಲವೇ ಬಾಳನ್ನು ನೋಡಿಕೊಂಡು' ಎಂದರು.

ಜೋಸಫ್ ಏನೂ ಉತ್ತರ ಕೊಡಲಿಲ್ಲ. ನೆಟ್ಟನೆ ತನ್ನ ಕೊಟಡಿಯೊಳಕ್ಕೆ ಹೋದನು. ಹಾಸಿದ್ದ ಹಾಸಿಗೆಯ ಮೇಲೆ ಬಿದ್ದುಕೊಂಡು ತನ್ನ ಬಾಳನ್ನು—ಎಳೆತನದಿಂದಲೂ ಅಂದಿನ ವರೆಗೂ ಅನಾಥನಾಗಿದ್ದ ತನ್ನ ಬಾಳನ್ನು—ನೋಡಿ ಕಣ್ಣೀರು ಸುರಿಸಿದನು. ಲಿಲ್ಲಿ ಕೊಟಡಿಯ ಬಾಗಿಲನ್ನು ಹಾಕಿ, ಒಳಗೆ ಬಂದು ಅವನ ಪಕ್ಕದಲ್ಲಿ ಕುಳಿತಳು. ಜೋಸಫ್ ತಲೆ ಎತ್ತಿ ಹೆಂಡತಿಯ ಕಡೆ ನೋಡುತ್ತಾ 'ಲಿಲ್ಲಿ! ನನ್ನ ಇಷ್ಟಾರ್ಥವೊಂದನ್ನು ಪೂರೈಸಿ ಕೊಡಬೇಕು. ನೋಡು ಅದನ್ನು ನೀನು ನೆರವೇರಿಸಿಕೊಟ್ಟರೆ ಬಾಳಿನಲ್ಲೆಲಾ ನಿನ್ನನ್ನು ದೇವತೆಯಂತೆ ನೋಡಿಕೊಳ್ಳುತ್ತೇನೆ ' ಎಂದನು.

'ನೀವು ಅಷ್ಟು ಕೇಳಬೇಕೆ! ನಾನು ತಮ್ಮ ದಾಸಿ.'

'ಬೆಳಗ್ಗೆ--ಹೂ--ಮನೆಯಲ್ಲಿ ಕೂಡ ಹೇಳದೇ--ಅಷ್ಟು ಹೊತ್ತಿಗೇನೇ ನನ್ನೊಡನೆ ರೈಲ್ವೆ ಸ್ಟೇಷನ್ನಿಗೆ ಬರಬೇಕು.'

'ಏಕೆ?'

'ಅದೆಲ್ಲಾ ಕೇಳಬೇಡ ನನ್ನ ಮನನೋಯುತ್ತೆ....ಸೈಂಟ್ ಜೋಸಂಟ್ ಕಾಲೇಜಿನ ಪ್ರಿನ್ಸಿಪಾಲರು ಬಂದು ನೋಡಹೇಳಿದ್ದಾರೆ.' ಅವನಿಗೆ ಪೂರ್ತಿಯಾಗಿ ಮನಸ್ಸಿನಲ್ಲಿರುವುದನ್ನೆಲ್ಲಾ ಹೆಂಡತಿಗೆ ಹೇಳಲಾಗಲಿಲ್ಲ; ಗಂಟಲು ಒಣಗಿತ್ತು; ಮನಸ್ಸೂ ಇರಲಿಲ್ಲವೇನೋ!

ಲಿಲ್ಲಿ ಅವನ ಕೈಗಳೆರಡನ್ನೂ ಹಿಡಿದುಕೊಂಡು, 'ಅಮ್ಮನ ಸ್ವಭಾವವೇ ಹಾಗೆ ಸ್ವಲ್ಪ ದುಡುಕು. ಮನಸ್ಸಿಗೆ ಅದನ್ನು ತೆಗೆದುಕೊಳ್ಳಬೇಡಿ ಎಂದು ದೈನ್ಯದಿಂದ ಕೇಳಿಕೊಂಡಳು.

'ಇಷ್ಟವಿದ್ದರೆ ಬಾ. ಅಂತೂ ಬೆಳಗ್ಗೆ ಹೊರಡುತ್ತೇನೆ.'

ಲಿಲ್ಲಿ ಮಾತನಾಡಲಿಲ್ಲ; ಕಣ್ಣೀರು ಸುರಿಸಿದಳು.

ಮಾರನೆಯ ದಿನ ಬೆಳಗ್ಗೆ ಸುಮ್ಮನೆ ಮುಚ್ಚಿದ್ದ ಕೊಠಡಿಯಲ್ಲಿ ತಮ್ಮ ವಿಳಾಸಕ್ಕೆ ಅಳಿಯ ಬಿಟ್ಟುಹೋಗಿದ್ದ ಕಾಗದವನ್ನು ನೋಡಿ ಡೇವಿಡ್ಡರು ಹೆಂಡತಿಯ ಮೇಲೆ ಉರಿದುಬಿದ್ದರು. ಇಬ್ಬರೂ ಅಂದು ಕಣ್ಣೀರು ಸೋನೆಯನ್ನು ಕರೆದರು!

ಎಂಟು ದಿನಗಳಾದ ಮೇಲೆ ಲಿಲ್ಲಿಯಿಂದ ತಾಯಿಯ ವಿಳಾಸಕ್ಕೆ ಕಾಗದವೊಂದು ಬಂದಿತು.

'............ಜೋಸೇಫ್‌ರಿಗೆ ಸೈಂಟ್ ಜೋಸಫ್ ಕಾಲೇಜಿನಲ್ಲಿ ಚರಿತ್ರೆಯ ಲೆಕ್ಚರರ್ ಪದವಿ ದೊರೆತಿದೆ. ತಿಂಗಳಿಗೆ ನೂರು ರೂಪಾಯಿ ಕೊಡುತ್ತಾರೆ. ನಾವು ಕ್ಯಾನಲರಿ ರಸ್ತೆಯಲ್ಲಿ ಮನೆ ಮಾಡಿದ್ದೇವೆ. ಇದನ್ನು ತಿಳಿಸ ಹೇಳಿ ಕಾಗದವನ್ನು ಬರೆಯುವಂತೆ ಅವರು ನನಗೆ ಹೇಳಿದರು. ತಂದೆಯವರಿಗೆ ನಮ್ಮ ನಮಸ್ಕಾರವನ್ನು ತಿಳುಹಿಸುವುದು............'

ಲಿಲ್ಲಿ,

ಇದೆಲ್ಲಾ ನಡೆದು ಒಂದು ವರ್ಷವಾಗಿತ್ತು. ಎಂಟು ಗಂಟೆಯಾದರೂ ಜೋಸಫ್ ಹಾಸಿಗೆಯಲ್ಲಿ ಮಲಗಿ ತನ್ನ ಕಳೆದ ವರ್ಷದ ಅತ್ತೆಯ ಮನೆಯಲ್ಲಿ ನಡೆದ ತನ್ನ ಬಾಳನ್ನು ಕನವರಿಸುತ್ತಿದ್ದನು. ಲಿಲ್ಲಿಯ ತಂದೆ ತಾಯಿಗಳು ಒಂದು ವರ್ಷವಾದರೂ ಇವರನ್ನು ನೋಡಲು ಬಂದಿರಲಿಲ್ಲ. ಇಂದು ಲಿಲ್ಲಿಯ ಹುಟ್ಟಿದ ಹಬ್ಬವಾದುದರಿಂದ ಅವರು ಬರಬಹುದೆಂಬ ಆಸೆ ಜೋಸಫ್‌ಗೆ ಇತ್ತು.

ಆಗ ಲಿಲ್ಲಿ ಮನೆಯೊಳಗಿನಿಂದ ಬಂದು, 'ಎಂಟು ಗಂಟೆಯಾಯಿತು. ಏಳಿ. ಈ ದಿನ ಗುಡ್‌ಫ್ರೈಡೆ....' ಎಂದು ಗಂಡನ ಭಾವವನ್ನು ನೋಡುವ ಕುತೂಹಲದಿಂದ ನುಡಿದಳು. ಜೋಸಫ್ ಮುಸಿನಕ್ಕು 'ನಿನ್ನ ಹುಟ್ಟಿದ ಹಬ್ಬ ಇಂದು. ನೆನಪಿದೆ, ಲಿಲ್ಲಿ! ಅಮ್ಮ ಅಣ್ಣ ಬಂದರಾ?' ಎಂದು ಕೇಳಿದನು.

'ಇಲ್ಲ! ಅಮ್ಮನಿಗೆ ಮೈ ಸ್ವಸ್ಥವಿಲ್ಲವಂತೆ. ,ಆದುದರಿಂದ ಬರಲಾಗಲಿಲ್ಲ ಕ್ಷಮಿಸಬೇಕು. ದೇವರು ನಿಮಗೆ ಸದಾ ಒಳ್ಳೆಯದನ್ನು ಮಾಡಲಿ' ಎಂದು ಅಣ್ಣಾ ಕಾಗದವನ್ನೂ ಹುಟ್ಟಿದ ಹಬ್ಬದ ಬಹುಮಾನವನ್ನೂ ನಮ್ಮ ಆಳು ಲಿಂಗನ ಕೈಯಲ್ಲಿ ಕೊಟ್ಟಕಳುಹಿಸಿದ್ದಾರೆ. ಅವನು ಈಗ ತಾನೇ ಮೈಸೂರು ರೈಲಿಳಿದು ಬಂದನು.'

'ಲಿಂಗನಿಗೆ ಕಾಫಿ ತಿಂಡಿ ಕೊಟ್ಟೆಯಾ?'

'ಆಯ್ತು ನೀವು ಏಳಿ. ಇನ್ನು ಮಾರ್ಕೆಟಿಗೆ ಹೋಗಬೇಕು.'

'ಆಗಬಹುದು' ಎಂದು ಹಾಸಿಗೆಯಿಂದ ಜೋಸಫ್‌ನು ಎದ್ದು, ಸ್ನಾನಾದಿಗಳನ್ನು ಮುಗಿಸಿಕೊಂಡು, ಉಡುಪನ್ನು ಧರಿಸಿ, ಹೊರಗೆ ಹೊರಡಲು ಸಿದ್ಧಳಾಗಿದ್ದ ಲಿಲ್ಲಿಯೊಡನೆ ಹಬ್ಬಕ್ಕೆ ಪದಾರ್ಥಗಳನ್ನು ತೆಗೆಯಲೋಸುಗ ಬೆಂಗಳೂರು ದಂಡಿನಟ್ಟಿಗೆ ರಸಲ್ ಮಾರ್ಕೆಟ್ಟಿಗೆ ಹೊರಟನು.

ಇಬ್ಬರೂ ಮನೆಯ ಮುಂಬಾಗಿಲ ವರೆಗೂ ಬಂದರು. ಆಗ ಜೋಸಫ್‌ನು 'ಲಿಲ್ಲಿ! ಆ ಇಬ್ಬರು ಮಕ್ಕಳಿಗೆ ರಾಜು, ಮೈಖೆಲ್‌ರಿಗೆ ಕಾಫಿ ಕೊಟ್ಟೆಯಾ ಎಂದು ಕೇಳಿದನು.

'ಅವರು ಕೋಣೆಯಲ್ಲಿ ಓದುತ್ತಾ ಕುಳಿತಿದ್ದರು. ಅಡಿಗೆಯವಳಿಗೆ ಕೊಡಹೇಳಿದ್ದೇನೆ, ಅವಳು ಕೊಡುತ್ತಾಳೆ.'

'ಅವರಿಗೆ ಅವಳು ಕಾಫಿ ಕೊಟ್ಟಿದ್ದಾಳೇನೋ ಹೋಗಿ ನೋಡಿ ಬಾ ಪಾಪ! ಅನಾಥ ಬಾಲಕರವರು.'

ಲಿಲ್ಲಿ ಮನಸ್ಸಿನಲ್ಲಿಯೇ ಗೊಣಗುಟ್ಟುತ್ತಾ, ಮನೆಯೊಳಕ್ಕೆ ಹೋಗಿ, ಅಡಿಗೆಯವಳು ಇನ್ನೂ ಕೊಡದಿದ್ದುದರಿಂದ ಆ ಇಬ್ಬರು ಹುಡುಗರಿಗೂ ತಾನೇ ಕಾಫಿ ಕೊಟ್ಟು, ಮುಂಬಾಗಿಲು ಬಳಿ ಬಂದು ನಿಂತಳು. ಹೆಂಡತಿಯ ಬೇಸರಿಕೆಮುಖವನ್ನು ಜೋಸಫ್ ನೋಡಿ, ಮುಗುಳುನಗೆಯನ್ನು ಸೂಚಿಸಿ 'ಲಿಲ್ಲಿ! ನೀನು ಕರುಣಾಪೂರ್ಣ ಹೃದಯಳು. ನೋಡು ನನ್ನನ್ನು ನೀನು ಆದರಿಸುವ ಹಾಗೆ ಆ ಅನಾಥ ಮಕ್ಕಳಿಬ್ಬರನ್ನೂ ನಮ್ಮ ಮಕ್ಕಳಂತೆಯೇ ಆದರಿಸು. ಆಗ ಈಶನು ಮೆಚ್ಚುವನು. ನೀನೆಲ್ಲಾ ಸರಿಯೇ ಆದರೆ ನಿನಗೆ ವಿಶ್ವಪ್ರೇಮವೊಂದು ಮಾತ್ರ ಇಲ್ಲ!' ಎಂದನು

'ಇರಲಿ ಬನ್ನಿ. ಆಗಲೇ ಒಂಭತ್ತು ಗಂಟೆಯಾಯಿತು!' ಎಂದು ಲಿಲ್ಲಿ ಗಂಡನಿಗೆ ಹೇಳಿದಳು.

ಇಬ್ಬರೂ ಮಾರ್ಕೆಟ್ಟನ್ನು ಸೇರಿದರು. ಮೊದಲು ಅವರು ಹೊರ ಬಾಗಿಲು ಬಳಿ ಇರುವ ಹೂವಿನವರ ಹತ್ತಿರ ಬಂದರು. ಲಿಲ್ಲಿ ಗುಲಾಬಿಯ ಪ್ರೇಮಿ. ಜೋಸಫ್ ಲಿಲ್ಲಿಗೋಸ್ಕರ ತಾನೆ ಹೂ ಆರಿಸಲು ಕೈಹಾಕಿದನು. ಹೂ ಮಾರುವವಳು—ಅವಳೂ ರಸಿಕೆ—ತರುಣ ದಂಪತಿಗಳ ನಡೆನುಡಿಗಳನ್ನು ನೋಡುತ್ತಾ 'ನೀವು ಸುಮ್ಮನಿರಿ, ಅಪ್ಪ. ಅಮ್ಮನವರಿಗೆ ಒಪ್ಪುವ ಹೂ ಆರಿಸಿಕೊಡುತ್ತೇನೆ' ಎಂದಳು! ಅವಳ ಮಾತನ್ನು ಕೇಳಿ ಜೋಸಫ್ ಇನಿಯಳ ಕಡೆ ತನ್ನ ಕಟಾಕ್ಷವನ್ನು ಬೀರಿದನು. ಹೂವಿನವಳು ಆರಿಸಿ ಕೊಟ್ಟ ಹೂವಿನೊಂದಿಗೆ, ಲಿಲ್ಲಿಯ ಮೆಚ್ಚಿಗೆಯ ಕೆಲವು ಹೂಗಳೂ, ಜೋಸಫ್‌ನ ಒಪ್ಪಿಗೆಯ ಕೆಲವು ಹೂಗಳೂ ಲಿಲ್ಲಿಯ ಕೈಸೇರಿದುವು. ಅವುಗಳಿಗಾಗುವ ಹಣವನ್ನು ಜೋಸಫ್‌ನೇ ಹೂ ಮಾರುವವಳಿಗೆ ಕೊಟ್ಟು, 'ಈ ದಿನದ ನಿನ್ನ ಖರ್ಚಿಗೆ' ಎಂದು ತನ್ನ ಇನಿಯಳ ಕೈಗೆ ಮೂವತ್ತು ರೂಪಾಯಿಗಳನ್ನು ಕೊಟ್ಟನು.

ಲಿಲ್ಲಿ ಎಲ್ಲಾ ವಿಧದಲ್ಲಿಯೂ ಮನೆಯ ಒಡತಿಯಾಗಿದ್ದರೂ ಹಣದ ವಿಚಾರದಲ್ಲಿ ಮಾತ್ರ ಜೋಸಫ್‌ನೇ ಒಡೆಯ ಇದುವೊಂದರಲ್ಲಿ ಮಾತ್ರ ಇನ್ನೂ ಜೋಸಪ್ ಲಿಲ್ಲಿಗೆ ಸ್ವಾತಂತ್ರ್ಯವನ್ನು ಕೊಟ್ಟಿರಲಿಲ್ಲ. ಏಕೆಂದರೆ ಆಕೆ ಸ್ವಲ್ಪ ಕೈಬಿಗಿಹಿಡಿಯುವ ಸ್ವಭಾವದವಳು ಸಂಪೂರ್ಣ ಸ್ವಾರ್ಥಪರಳು. ಜೋಸಫ್‌ನದು ಸರಳವಾದ ಉದಾರ ಹೃದಯ. ಆತನಿಗೆ ಆರ್ತರನ್ನು ಕಂಡರೆ ಬಹಳ ಕನಿಕರ. ಆದುದರಿಂದಲೇ ಆತ ಶಾಲೆಯಲ್ಲಿ ಓದುತ್ತಿದ್ದ ಇಬ್ಬರು ಅನಾಥ ಬಾಲಕರನ್ನು ಮನೆಯಲ್ಲಿಟ್ಟುಕೊಂಡು, ಅವರ ತಿಂಡಿತೀರ್ಥ ವಿದ್ಯಾಭ್ಯಾಸ ಮೊದಲಾದುವುಗಳನ್ನೆಲ್ಲಾ ತಾನೇ ನೋಡಿಕೊಳ್ಳುತ್ತಿದ್ದನು. ಅದನ್ನು ಕಂಡರೆ ಲಿಲ್ಲಿಗೆ ಆಗುತ್ತಿರಲಿಲ್ಲ. 'ಪ್ರಪಂಚವನ್ನೇ ಕಟ್ಟಿಕೊಂಡು ಹೆಣಗುತ್ತಾನೆ ನನ್ನ ಗಂಡ' ಎನ್ನುತ್ತಿದ್ದಳು ಆಕೆ ತನ್ನ ಗೆಳತಿಯರೊಡನೆ. ಒಮ್ಮೆ ಬಡತನದ ಬೇಗೆಯಲ್ಲಿ ಬೆಂದು ವಿಶಾಲ ಹೃದಯವನ್ನು ಪಡೆದಿದ್ದ ಆತನ ಹೃದಯವನ್ನು, ಪ್ರೇಮಭಾವದಲ್ಲಿ ಮಾತ್ರ ಆತನ ಹೃದಯೇಶ್ವರಿಯಾಗಿದ್ದ ಲಿಲ್ಲಿ ಹೇಗೆ ಬಲ್ಲಳು!

ಲಿಲ್ಲಿ ತನಗೆ ಒಪ್ಪಿಗೆಯಾಗಿದ್ದ ಸೇಬು, ಕಿತ್ತಳೆ, ದ್ರಾಕ್ಷೆ, ಬಾಳೆಹಣ್ಣು ಗಳನ್ನು, ಈಸ್ಟರಿನ ರೊಟ್ಟಿಗಳನ್ನೂ ಕೊಂಡಳು. ಹನ್ನೊಂದು ಗಂಟೆಯ ವೇಳೆಗೆ ಇಬ್ಬರೂ ಮನೆಯನ್ನು ಸೇರಿದರು. ಆಕೆ ಅಂದು ಗಂಡನೊಡನೆ ನಿತ್ಯದಂತೆ ಬಹಳ ಮಾತನಾಡಲಿಲ್ಲ. ಅವಳಿಗೆ ಆದಿನ ತನ್ನ ಗಂಡ ತನಗೆ ಯಾವ ಹುಟ್ಟಿದ ಹಬ್ಬದ ಉಡುಗರೆಯನ್ನು ಕೊಡುತ್ತಾನೋ ನೋಡ ಬೇಕೆಂದು ಕುತೂಹಲ. ಆದರೆ ಆತ ಆಕೆಗೆ ತಿಳಿದ ಹಾಗೆ ಅಂದು ಎರಡು ವಾಟರ್‌ಮನ್ ಫೌಂಟನ್‌ಪೆನ್‌ಗಳನ್ನಲ್ಲದೆ ಮತ್ತೆಯಾವುದನ್ನೂ ಕೊಂಡು ಕೊಂಡಿರಲಿಲ್ಲ. ‘ ಇವು ಯಾರಿಗೆ ! ’ ಎಂದು ಆಕೆ ಮನಸ್ಸಿನಲ್ಲಿಯೇ ಅಂದು ಕೊಂಡಳು. ‘ ಆಗಲಿ ಈ ದಿನ ಅವರನ್ನು ಚೆನ್ನಾಗಿ ಹಂಗಿಸಲು ಸರಿಯಾದ ದಿನ ’ ಎಂದುಕೊಂಡು ಗಂಡನ ಕಡೆ ಆಗಿಂದಾಗ್ಯೆ ನೋಡುತ್ತಿದ್ದಳು.

ಅಡಿಗೆಯವಳು ಊಟಕ್ಕೆ ಸಿದ್ಧಪಡಿಸಿದ್ದಳು.

ರಾಜು, ಮೈಖೇಲ್, ಲಿಲ್ಲಿ, ಜೋಸಫ್ ಎಲ್ಲಾ ಒಟ್ಟಿಗೇ ಊಟಕ್ಕೆ ಕುಳಿತರು. ಆದರೆ ಲಿಲ್ಲಿ ತಾನು ತಂದಿದ್ದ ಹಣ್ಣುಹಂಪಲು ಮತ್ತು ರೊಟ್ಟಿ ಗಳನ್ನು ಮೊದಲು ಬಡಿಸಿ ಆ ಮೇಲೆ ತಾನೂ ಊಟಕ್ಕೆ ಕುಳಿತಳು. ತನ್ನ ಇನಿಯನನ್ನು ಮೆಚ್ಚಿಸಲು ಆ ಬಾಲಕರಿಗೆ ಅಂದು ತಾಯಿಯಂತೆ ಭಾಗವಿ ತ್ತಳು ! ಜೋಸಫ್ ತನ್ನ ಇನಿಯಳನ್ನು ನೋಡಿ, ನಸುನಗೆಯನ್ನು ಆಕೆಯ ಮೇಲೆಸೆದು, ಆ ಬಾಲಕರನ್ನು ನೋಡುತ್ತಾ, ‘ ನಿನ್ನೆ ರಾತ್ರಿ ಊಟಕ್ಕೆ ನೀವಿಬ್ಬರೂ ಏಕೆ ಹೊತ್ತು ? ’ ಎಂದು ಕೇಳಿದನು.

‘ ಸಿಟಿಯ ಅಪೆಕ್ಸ್‌ಬ್ಯಾಂಕಿನ ಮಂದಿರದಲ್ಲಿ ಲಲಿತಕಲಾಪ್ರದರ್ಶನವಿತ್ತು ನೋಡಲು ಹೋಗಿದ್ದೆವು. ಒಳ್ಳೆ ಚಿತ್ರಗಳು ಬಂದಿವೆ. ‘ ಎಂದು ಮೈಖೇಲ್ ಹೇಳಿದನು.

‘ ಸಿಲೋನ್‌ನ್ನಿಂದ ಕಸೂತಿ ಬಟ್ಟೆಗಳೂ ಚಿತ್ರಕೆಲಸ ಮಾಡಿರುವ ಬೆಳ್ಳಿ ಸಾಮಾನುಗಳೂ ಬಂದಿವೆ' ಎಂದು ರಾಜುವೂ ಹೇಳಿದನು.

‘ ಅವೆಲ್ಲದರಲ್ಲಿಯೂ ಬಹಳ ಸೊಗಸಾದ ಚಿತ್ರವಾವುದು, ಮೈಖೇಲ್?' ಎಂದು ಲಿಲ್ಲಿ ಮೈಖೇಲನನ್ನು ಕೇಳಿದಳು. ಅವನು ಡ್ರಾಯಿಂಗಿನಲ್ಲಿ ಬಹಳ ಆಸ್ತಕ್ತಿಯುಳ್ಳವನೆಂದು ಆಕೆ ಬಲ್ಲಳು. ತನ್ನ ಅನೇಕ ಎಂಬ್ರಾಯಿಡರಿ ಡ್ರಾಯಿಂಗುಗಳನ್ನು ಆತನಿಂದ ಅನೇಕ ಸಲ ಬರಸುತ್ತಿದ್ದಳು.

'**ವಿಶ್ವಪ್ರೇಮ** ಎನ್ನುವ ಚಿತ್ರ ಬಹಳ ಚೆನ್ನಾಗಿದೆ,' ಅಕ್ಕಾ ಎಂದು ಮೈಖೆಲ್ ಲಿಲ್ಲಿಗೆ ಹೇಳಿದನು.

'ಏನಿದೆ ಮೈಖೇಲ್ ಆ ಚಿತ್ರದಲ್ಲಿ?' ಎಂದು ಜೋಸಫ್ ಕೇಳಿದನು.

'ಬೀದಿಯ ಕಸದಗುಂಡಿಯೊಂದು. ಅದರ ಬಳಿಯಲ್ಲಿ ಹೋಗುವ ರಸ್ತೆಯಲ್ಲಿ, ಗುಂಡಿಯ ಬಳಿ, ಭಿಕ್ಷುಕನೊಬ್ಬನು ಕುಳಿತಿದ್ದಾನೆ. ಆತ ಬರಿಯ ಅಸ್ಥಿಪಂಜರದ ಆಳು! ಬಹುಶಃ ಹೊಟ್ಟೆಗಿಲ್ಲದೆ ಹಾಗೆ ಇದ್ದಾನೆ. ಅವನ ಬಳಿಯಲ್ಲಿ ಅವನ ಸ್ಥಿತಿಯಲ್ಲಿಯೇ ಇರುವ ಗೆಳೆಯನೊಬ್ಬ—ಅವನ ನಾಯಿ! ಅವನ ಎಡಗೈಯಲ್ಲಿ ತಿರುಪೆಯ ತಟ್ಟೆಯೊಂದು. ಅದರಲ್ಲಿ ಸ್ವಲ್ಪ ಅನ್ನವಿದೆ. ಅವನ ಸುತ್ತಮುತ್ತಲೂ ಹೊಟ್ಟೆಗಿಲ್ಲದ ಕಾಗೆಗಳು. ಒಂದೆರಡು ಇಲಿಗಳು ಏನೂ ಇಲ್ಲದ ಗುಂಡಿಯಲ್ಲಿರುವ ಎಂಜಲೆಲೆಗಳನ್ನು ನೆಕ್ಕುತ್ತಾ ಇವೆ. ಬಿಕ್ಷುಕನು ತನ್ನ ಕೈಯಲ್ಲಿದ್ದ ಅನ್ನವನ್ನು ತನ್ನ ನಾಯಿಗಿಂತಲೂ ಮೊದಲು ಆ ಕಾಗೆಗಳಿಗೆ ಹಾಕುತ್ತಿದ್ದಾನೆ. ಆತನ ಮುಖದಲ್ಲಿ–ಬಹುಶಃ ಎಂಟು ದಿನಗಳ ಉಪವಾಸದಿಂದ ಬಾಡಿದ ಹಾಗಿದ್ದ ಆತನ ಮುಖದಲ್ಲಿ–ವಿಶ್ವಪ್ರೇಮವನ್ನು ತೋರಿಸಿದುದರಿಂದುಂಟಾದ ಸಂತೋಷವಿದೆ........'

'ಇಷ್ಟೇತಾನೆ!' ಎಂದು ಲಿಲ್ಲಿ ಅಸಡ್ಡೆಯಿಂದ ಹೇಳಿದಳು. ಮೈಖೇಲ್ ತಾನು ಹೇಳುತ್ತಿದ್ದುದು ಮನೆಯ ಯಜಮಾನಿಗೆ ಇಷ್ಟವಿಲ್ಲವೆಂದು ಅಷ್ಟಕ್ಕೆ ನಿಲ್ಲಿಸಿದನು. ಜೋಸಪ್ ಇದನ್ನರಿತು 'ಅದನ್ನು ಬರೆದವರಾರು?' ಎಂದು ವಿಷಯವನ್ನು ಮುಂದುವರಿಯುವಂತೆ ಮಾಡಿದನು.

'ದುರ್ಗಾಶಂಕರ ಭಟ್ಟಾಚಾರ್ಜಿಯವರು'

'ಅವರ ಹೆಸರನ್ನು ಕೇಳಿದ್ದೇನೆ. ಸುಪ್ರಸಿದ್ಧ ವಂಗಚಿತ್ರಕಾರರವರು!' ಎಂದು ಲಿಲ್ಲಿಯ ಕಡೆ ನೋಡುತ್ತಾ ಜೋಸಫ್ ಹೇಳಿದನು.

'ಈ ದಿನ ನಾವು ಹೋಗಿ ಕಲಾಪ್ರದರ್ಶನವನ್ನು ನೋಡೋಣ ಬಾ?' ಎಂದು ಲಿಲ್ಲಿ ರಾಗ ತೆಗೆದು ಇನಿಯನನ್ನು ಕೇಳಿದಳು.

'ನಿನ್ನ ಇಷ್ಟಾರ್ಥಗಳ ಯಾವುದನ್ನು ಪೂರೈಸಿ ಕೊಟ್ಟಿಲ್ಲ ನಾನು, ಲಿಲ್ಲಿ?' ಎಂದು ಜೋಸಫ್‌ನು ನಸುನಗೆಯಿಂದ ಹೇಳಿ, 'ಐದುಗಂಟೆಗೆ ರಾಜು ಒಂದು ಟ್ಯಾಕ್ಸಿಗೆ ಹೇಳಿ ಬಾ' ಎಂದನು.

'ಬೇಡ. ಹೋಗುವಲ್ಲಿ ಸಂಜೆ, ನಡೆದುಕೊಂಡೇ ಹೋಗೋಣ.

ವಾಕ್ ಆಗುತ್ತೆ. ಬರುವಲ್ಲಿ ಟ್ಯಾಕ್ಸಿಯಲ್ಲಿ ಬರೋಣ ' ಎಂದು ಲಿಲ್ಲಿ ಗಂಡನಿಗೆ ಹೇಳಿದಳು.

' ಆಗಬಹುದು ' ಎಂದು ಜೋಸಫ್ ಹೇಳಿದನು.

ಊಟ ಮಾಡಿದ ಮೇಲೆ ಜೋಸಫ್ ತನ್ನ ಕೊಠಡಿಯಲ್ಲಿ ಹಾಸಿಗೆಯ ಮೇಲೆ ಬಿದ್ದುಕೊಂಡಿದ್ದನು, ಆಗ ಲಿಲ್ಲಿ ವೀಳೆಯದೆಲೆ ತಟ್ಟೆಯನ್ನು ಕೈಯಲ್ಲಿ ಹಿಡಿದು ಅಲ್ಲಿಗೆ ಬಂದು, ಅದನ್ನು ಮುಂದಿದ್ದ ಮೇಜಿನಮೇಲಿಟ್ಟು ಮಂಚದ ಮೇಲೆ ಗಂಡನ ಬಳಿ ಕುಳಿತಳು.

ಅಂದು ಆಕೆ ತನಗೆ ತಂದೆ ಮದುವೆಯಲ್ಲಿ ಕೊಟ್ಟಿದ್ದ ಗುಲಾಬಿಯ ಬಣ್ಣದ ಸೀರೆಯನ್ನುಟ್ಟು, ಅದೇ ಬಣ್ಣದ ಜಾಕೆಟ್ಟನ್ನು ತೊಟ್ಟಿದ್ದಳು. ಮಾರ್ಕೆಟ್ಟಿನಿಂದ ತಂದಿದ್ದ-ಅದರಲ್ಲೂ ತನ್ನಿನಿಯನು ಆಯ್ದುಕೊಟ್ಟ—ಹೂಗಳನ್ನೇ ಮುಡಿದಿದ್ದಳು. ಆಕೆ ಮೊದಲೇ ರೂಪವತಿ. ಸಾಲದ್ದಕ್ಕೆ ಹುಟ್ಟಿದ ಹಬ್ಬದ ಉಡುಪಿನ ವೈಚಿತ್ರ್ಯ! ಅವಳ ಕೊರಳಿನಲ್ಲಿ ಚಿನ್ನದ ಲಾಂಗ್ ಚೈನ್ ಒಂದು ಹೊಸದಾಗಿ ಜೋಸಫ್‌ನ ಕಣ್ಣಿಗೆ ಬಿದ್ದಿತು. ಅದರಲ್ಲಿ ಥಳಿಸುತ್ತಿದ್ದ ಚಿನ್ನದ ಲಾಕೆಟ್ ' ಇದೆಲ್ಲಿಯದು ಹೊಸದು ! ' ಎಂದು ಜೋಸಫ್ ಲಿಲ್ಲಿಯನ್ನು ಕೇಳಿ, ಲಾಕೆಟ್ಟಿನಲ್ಲಿದ್ದ ತನ್ನ ಮತ್ತು ತನ್ನ ಇನಿಯಳ ಮದುವೆಯಲ್ಲಿ ತೆಗೆದಿದ್ದ ಫೋಟೋವನ್ನು ಕೈಯಲ್ಲಿ ಹಿಡಿದು ನೋಡಿದನು.

' ಅಣ್ಣಾ ಅವರು ಹುಟ್ಟಿದ ಹಬ್ಬಕ್ಕಾಗಿ ಲಿಂಗನ ಕೈಯಲ್ಲಿ ಕೊಟ್ಟು ಕಳುಹಿಸಿದ್ದು. ಅವರು ನಿಮಗೆ ಈ ಗಡಿಯಾರ ಕೊಟ್ಟು ಕಳುಹಿಸಿದ್ದಾರೆ, ಇದು ನನ್ನ ಹುಟ್ಟಿದ ಹಬ್ಬಕ್ಕೆ ನಿಮಗೆ ಕೊಡುವ ಉಡುಗರೆ ' ಎಂದು ಹಂಗಿಸುವ ಧ್ವನಿಯಲ್ಲಿ ' ನೀವೇನು ನನಗೆ ಉಡುಗರೆ ಕೊಟ್ಟಿದ್ದೀರಿ ಇಂದು ? ' ಎಂದು ಕೇಳುವ ದೃಷ್ಟಿಯನ್ನು ಬೀರಿ ಫೇಬ್ರಿಲ್ಯೂಬ ಕಂಪನಿಯ ಜನಿತ್ ಚಿನ್ನದ ಕೈಗಡಿಯಾರವನ್ನು ತಾನೇ ಅವನ ಕೈಗೆ ಕಟ್ಟಿದ್ದಳು.

ಜೋಸಫ್ ಅವಳ ಕೈ ಹಿಡಿದುಕೊಂಡು, ತನ್ನ ಷರಟು ಜೇಬಿನಿಂದ ಕಾಗದದಲ್ಲಿ ಸುತ್ತಿದ್ದ ವಸ್ತುವೊಂದನ್ನು ತೆಗೆದನು. ಅದರಲ್ಲಿ ಏನಿದೆಯೋ ಎನ್ನುವ ಕುತೂಹಲ ದೃಷ್ಟಿಯಿಂದ ಲಿಲ್ಲಿ ಅದರ ಕಡೆ ನೋಡಿದಳು. ಜೋಸಫ್‌ನು ಕಾಗದವನ್ನು ಬಿಚ್ಚಿದನು. ವಜ್ರದಿಂದ ಕೂಡಿದ ಜತೆ ಬಂಗಾರದ

ಬಳೆಗಳು! ಜೋಸಫ್‌ನೇ ಅವನ್ನು ಅಲ್ಲಿಗೆ ಕೊಡಿಸಿದನು.' ಇವೆಲ್ಲಿಯವು!' ಎನ್ನುವ ಆಶ್ಚರ್ಯ ದೃಷ್ಟಿಯನ್ನು ಲಿಲ್ಲಿ ಇನಿಯನ ಮೇಲೆ ಬೀರಿ, 'ಮನೆಯ ಖರ್ಚಿಗೇ ತಿಂಗಳಿಗೆ ತೊಂಬತ್ತು ರೂಪಾಯಿಗಳಾಗುತ್ತವೆ. ಇವಕ್ಕೆಲ್ಲಿ ಸರಿ ಮಾಡಿದಿರಿ? ಎಷ್ಟು ಐನೂರು ಕೊಟ್ಟಿರಾ?' ಎಂದು ಸಂತೋಷದಿಂದ ಕೇಳಿದಳು.

'ಐನೂರಿಪ್ಪತ್ತೆಂಟು' ಎಂದು ಜೋಸಫ್ ಮುಗುಳುನಗೆಯಿಂದ ಹೆಂಡತಿಗೆ ಹೇಳಿದನು.

'ಹಣ ಎಲ್ಲಿತ್ತು!'

'ಲಿಲ್ಲಿ! ನಿನಗೆ ಏನಾದರೂ ತೆಗೆದುಕೊಡಬೇಕೆಂದು ಮನಸ್ಸನ್ನು ನಮ್ಮ ಮದುವೆಯಲ್ಲಿಯೇ ಮಾಡಿಕೊಂಡೆ. ಆಗಂತೂ ನಾನು ಅನಾಥ; ನಿನಗೆ ಏನೂ ಕೊಡಲಾಗಲಿಲ್ಲ. ಒಂದು ವರ್ಷದಿಂದ ಕ್ಯಾಪ್ಟನ್ ಆಂಡ್ರೂಸರ ಮಗನಿಗೆ ಸಂಜೆಯಲ್ಲಿ ಪಾಠ ಹೇಳಿಕೊಡುತ್ತಿದ್ದೇನೆ. ಅವರು ತಿಂಗಳಿಗೆ ನಲವತ್ತೈದು ರೂಪಾಯಿ ಕೊಡುತ್ತಿದ್ದಾರೆ....ಇಂದು ನನ್ನ ಇಷ್ಟಾರ್ಥ ಪೂರೈಸಿತು, ಲಿಲ್ಲಿ!'

'ಅದನ್ನು ಇದುವರೆಗೂ ನನಗೆ ಹೇಳಲೇ ಇಲ್ಲ!'

'ಸರ್ಪ್ರೈಜ್ ಪ್ಯಾಕೆಟ್!' ಎಂದು ಜೋಸಫ್‌ನು ನಕ್ಕನು.

'ಬಳೆ ಕೈಗೆ ಗುತ್ತವಾಗಿದೆ. ಅಳತೆ ಎಲ್ಲಿ ಸಿಕ್ಕಿತು ನಿಮಗೆ!'

'ಡ್ರಾಯರಿನಲ್ಲಿ ಒಂದು ಗೂಡೆ ಬಳೆ ಇಟ್ಟಿದ್ದೀಯಲ್ಲಾ!'

'ಘಾಟಿ!' ಎಂದುಕೊಂಡು, ತನ್ನ ಮೇಲಿನ ಆತನ ಅನಂತ ಪ್ರೀತಿಗಾಗಿ ಸೋತು, ಲಿಲ್ಲಿ ಆತನನ್ನು ಅಪ್ಪಿ ಮುದ್ದಿಟ್ಟಳು!

ಆಗ ಜೋಸಫ್‌ನು 'ನನಗಂತೂ ನಿನ್ನ ಹುಟ್ಟಿದ ಹಬ್ಬದ ಬಹುಮಾನ ಬಂದಿತು. ಆ ಹುಡುಗರಿಗೆ ನಿನ್ನ ಹುಟ್ಟಿದ ಹಬ್ಬಕ್ಕಾಗಿ ಏನು ಬಹುಮಾನ ಕೊಟ್ಟೆ?' ಎಂದು ಕೇಳಿದನು. ಲಿಲ್ಲಿ ತನ್ನ ತಲೆಯನ್ನು ತಗ್ಗಿಸಿಕೊಂಡು, ದೈನ್ಯಕಟಾಕ್ಷವನ್ನು—ಕ್ಷಮಿಸಿ ಎನ್ನುವ ದೈನ್ಯಕಟಾಕ್ಷವನ್ನು—ಜೋಸಫ್‌ನ ಮೇಲೆ ಬೀರಿದಳು. ಜೋಸಫ್‌ನು ತಾನು ಅಂದು ಕೊಂಡುತಂದಿದ್ದ ಎರಡು ಫೌಂಟನ್‌ಪೆನ್‌ಗಳನ್ನೂ ಲಿಲ್ಲಿಯ ಕೈಗೆ ಕೊಟ್ಟು, 'ಇವನ್ನು ಅವರಿಗೆ ಕೊಡು' ಎಂದು ಹೇಳಿದನು.

'ಆಗಲಿ' ಎಂದು ಲಿಲ್ಲಿ ಇಸಿಯನಿಗೆ ಉತ್ತರಕೊಟ್ಟು, ಅವನ್ನು ರಾಜು ಮತ್ತು ಮೈಖೇಲರಿಗೆ ಕೊಡಲು ಅವರ ಕೊಠಡಿಗೆ ಹೋದಳು.

* * * * *

ಅಂದು ಸಂಜೆ ನಾಲ್ಕು ಗಂಟೆಯ ವೇಳೆಗೆ ಸತಿಪತಿಯರಿಬ್ಬರೂ ಕಲಾ ಪ್ರದರ್ಶನವನ್ನು ನೋಡಲು ಹೊರಡಲು ಸಿದ್ಧರಾದರು. ಲಿಲ್ಲಿಯು ರಾತ್ರಿ ಮಾಡಬೇಕಾಗಿದ್ದ ಅಡಿಗೆಯನ್ನು ಅಡಿಗೆಯವಳಿಗೆ ಹೇಳಿ, ಮನೆಯನ್ನು ನೋಡಿಕೊಳ್ಳುವಂತೆ ಆ ಇಬ್ಬರು ಹುಡುಗರಿಗೂ ಹೇಳಿದಳು. ಇಬ್ಬರೂ ಕಲಾಪ್ರದರ್ಶನವನ್ನು ನೋಡಲು ಹೊರಟರು.

ಅವರು ಮ್ಯೂಜಿಯಂ ರಸ್ತೆಯಲ್ಲಿ ಬಂದರು. ಅಂದು ವಸಂತನು ತನ್ನ ಮಹಿಮೆಯನ್ನು ಪ್ರಕೃತಿಯ ಮೇಲೆ ಬೀರಿದ್ದನು. ಮಧ್ಯಾಹ್ನ ಮಳೆ ಬಿದ್ದಿದ್ದುದರಿಂದ ಎಲ್ಲೆಲ್ಲಿಯೂ ತಣ್ಣಗಿತ್ತು ಬಿಸಿಲುಕಾಲದಲ್ಲಿ ಈ ತರದ ತಣ್ಪು ಬಹಳ ಸುಖಕರವಾಗಿರುತ್ತದೆ. ಸಾಲಗ್ರಕ್ಕೆ ಮೇಘರಹಿತನಾದ ಸೂರ್ಯನು ಮುಳುಗಲು ಸಿದ್ಧನಾಗುತ್ತಿದ್ದನು. ರಸ್ತೆಯಲ್ಲಿ ಹೊಟ್ಟೆಗಿಲ್ಲದೆ ಅಲೆಯು ತ್ತಿದ್ದ ಭಿಕ್ಷುಕ ದಂಪತಿಗಳು ಬಂದು ಇವರನ್ನು ಭಿಕ್ಷೆ ಬೇಡಿದರು. ಜೋಸ ಫ್‌ನು ಕೆಲವು ಆಣೆಗಳನ್ನು ಅವರಿಗೆ ಕೊಟ್ಟು ಮುಂದೆ ಹೆಂಡತಿಯೊಡನೆ ಹೊರಟನು.

'ಸೋಮಾರಿಗಳಿಗೆಲ್ಲಾ ಹೀಗೆ ಉತ್ತೇಜನ ಕೊಡಿ. ನಿಮ್ಮದು ಬಲು ಒಡಕು ಕೈ' ಎಂದು ಲಿಲ್ಲಿ ಗಂಡನಿಗೆ ಹೇಳಿದಳು.

'ನನ್ನದು ಹಾಗೆ ಒಡಕು ಕೈ ಆಗಿದ್ದರೆ ನಿನ್ನ ಕೈಗೆ ವಜ್ರದ ಬಳೆ ಹೇಗೆ ಬರುತ್ತಿತ್ತು, ಲಿಲ್ಲಿ?' ಎಂದು ಜೋಸಫ್‌ನು ನಸುನಗೆಯಿಂದ ಲಿಲ್ಲಿಗೆ ಹೇಳಿದನು.

'ಅಬ್ಬಾ! ಏನು ರೆಡಿ ಉತ್ತರ!! ಎಂದು ಮುಗುಳುನಗೆಯನ್ನು ಲಿಲ್ಲಿ ಮುಖದಲ್ಲಿ ಸೂಚಿಸಿದಳು.

ಆಗ ಜೋಸಫ್‌ನು 'ಲಿಲ್ಲಿ! ನೀನು ಎಲ್ಲಾ ಸರಿಯೇ. ಆದರೆ ಆರ್ತ ರನ್ನು ನೋಡಿ ಮರುಗುವ ಕರುಣಾರ್ದ್ರಹೃದಯವನ್ನು ಸ್ವಲ್ಪಬೆಳೆಯಿಸು' ಎಂದನು.

ಕಲಾಪ್ರದರ್ಶನ ಶಾಲೆಯ ಹತ್ತಿರ ಬಂದು,ಅವರು ಟಿಕೆಟ್ಟನ್ನು ತೆಗೆದು ಕೊಂಡು ಪ್ರದರ್ಶನವನ್ನು ನೋಡಲು ಒಳಗೆ ಹೋದರು.

ಒಂದು ಕಡೆಯಿಂದ ಚಿತ್ರಗಳನ್ನು ನೋಡುತ್ತಾ, ಅವುಗಳನ್ನೂ ಅವು ಗಳ ಚಿತ್ರಕಾರರ ವಿಷಯವನ್ನೂ ಜೋಸಫ್‌ನು ಹೆಂಡತಿಗೆ ವರ್ಣಿಸುತ್ತಾ ಹೋದನು.

ಭೀಷ್ಮರು ಶರಶಯ್ಯೆಯಲ್ಲಿರುವುದನ್ನು ನೋಡಿ, 'ಮುದುಕ, ಎಂತಹ ಕರುಣಾಸಾಗರ ! ಅವನಿಗೆ ಏನು ಗತಿ ಬಂದಿತು ಕಟ್ಟಕಡೆಯಲ್ಲಿ. ಇದೆಲ್ಲಾ ಧರ್ಮಕ್ಕೋಸ್ಕರ! ' ಎಂದು ಲಿಲ್ಲಿ ಜೋಸಫ್‌ಗೆ ಹೇಳಿದಳು. ಅಹಲ್ಯೆಯ ಶಾಪವಿಮೋಚನಾ ದೃಶ್ಯವನ್ನು ನೋಡಿ ಆಕೆ ನಿಟ್ಟುಸಿರನ್ನು ಬಿಟ್ಟು 'ಮಾನ ವತ್ವದ ಚಂಚಲ ಸ್ವಭಾವಕ್ಕಾಗಿ,ನಿರಾಪರಾಧಿಯಾದ ಈಕೆಗೆ ಈ ಶಿಕ್ಷೆಯೇ! ' ಎಂದು ಮರುಗಿದಳು. ಕ್ರಿಸ್ತದೇವನ ವಿಚಾರಣೆಯನ್ನು ಕಂಡು ಲಿಲ್ಲಿ 'ಪಾಪಿ ಗಳು ! ದೇವನನ್ನೂ ಸಾಧಾರಣ ಮಾನವರಂತೆ ವಿಚಾರಣೆಗೆ ಹೀಗೆ ಗುರಿ ಮಾಡಬೇಕೆ? ಇಲ್ಲಿಯೂ ಆತನದು ಎಂತಹ ಶಾಂತವಾದ ಮುಖ ! ' ಎಂದು ಕೊಂಡಳು. ಶಿಲುಬೆಯ ಪೋಲಿಸ ಏಸುವನ್ನು ಕಂಡು, ತಲೆಬಗ್ಗಿಸಿ 'ಮಹಾತ್ಮ ! ' ಎಂದು ಕಣ್ಣನ್ನೊರಸಿಕೊಂಡಳು ಲಿಲ್ಲಿ.ಅನಾಥ ಬಾಲಕರನ್ನು ಕಂಡು 'ಅಯ್ಯೋ ನಮ್ಮ ದೇಶವೇ ಇವರಿಂದ ತುಂಬಲ್ಪಟ್ಟಿದೆ ' ಎಂದು ಅವಳು ಗಂಡನಿಗೆ ಹೇಳಿದಳು. ಇದನ್ನು ತನ್ನಿನಿಯಳಿಂದ ಕೇಳಿ ಜೋಸಫ್ ಮುಗುಳು ನಗೆಯನ್ನು ಸೂಚಿಸಿದನು.

ಇವೆಲ್ಲಾ ನೋಡಿದ್ದಾದ ಮೇಲೆ, ಅವರು ನೋಡಬೇಕೆಂದಿದ್ದ ವಿಶ್ವಪ್ರೇಮದ ಬಳಿಗೆ ಬಂದರು. 'ಏನಿದೆ ಇದರಲ್ಲಿ ? ಆ ತಿರುಕ ಕಾಗೆಗಳಿಗೆ ತಿರಿದುದ್ದನ್ನು ಹಾಕುತ್ತಿದ್ದಾನೆ ಅಷ್ಟೆ! ' ಎಂದು ಲಿಲ್ಲಿ ಜೊಸಫ್‌ಗೆ ಹೇಳಿ ದಳು.

'ಐಶ್ವರ್ಯವಂತರೇ ತಿಪ್ಪೆಯಲ್ಲಿ ಹಾಕುವ ಅಗಳನ್ನು ದಾನಮಾಡಲು ಹಿಂಜರಿಯುವಲ್ಲಿ,ತನಗೆ ಬೇಕಾದುದನ್ನೂ,ತನ್ನ ಸಾವನ್ನು ಲಕ್ಷಿಸದೆ, ತನ್ನನ್ನು ನಂಬಿರುವವರ ಸಾವನ್ನೂ ಲಕ್ಷಿಸದೆ, ಬೇರೆಯವರಿಗೆ ಕೊಡುವುದಕ್ಕಿಂತ ಬೇರೆ ಸ್ವಾರ್ಥತ್ಯಾಗವೇನಿದೆ ಈ ಪ್ರಪಂಚದಲ್ಲಿ ? ವಿಶ್ವಪ್ರೇಮದಿಂದ ಉಂಟಾದ

ಆತನ ಸಂತೋಷವನ್ನು ಮುಖದಲ್ಲಿ ಎಷ್ಟು ಚೆನ್ನಾಗಿ ಚಿತ್ರಿಸಿದ್ದಾರೆ ನೋಡು ದುರ್ಗಾಶಂಕರರು!' ಎಂದು ಜೋಸಫ್ ಲಿಲ್ಲಿಗೆ ಹೇಳಿದನು.

ಈ ಮಾತು ಲಿಲ್ಲಿಯ ಹೃದಯವನ್ನು ಹೊಕ್ಕಿತು! ತನ್ನನ್ನು ಗಂಡನು ಹಂಗಿಸುತ್ತಿದ್ದಾನೆಂದು ಅರಿತಳು. ಕಣ್ಣೀರಿಸಿಕೊಂಡಳು. ತುಟಿಗಳು ಆಕೆಗೆ ಉತ್ತರ ಕೊಡಲು ಅವಕಾಶಕೊಡಲಿಲ್ಲ. ಅವು ನಡುಗತೊಡಗಿದುವು. ಅವಳ ಮುಖದಲ್ಲಿ ಅಂದು ಆಕೆ ಒಂದು ಹೊಸಗುಣವನ್ನು ಪಡೆದ ಕಳೆಯಿತ್ತು!

ಆಮೇಲೆ ಜೋಸಫ್ ಸಿಲೋನ್‌ನಿಂದ ಒಂದಿದ್ದ ಎಂಬ್ರಾಯಿಡರಿ ಮತ್ತು ಬೆಳ್ಳಿಯ ಪಾತ್ರೆಗಳ ಮೇಲೆ ಮಾಡಿರುವ ಚಿತ್ರಕೆಲಸಗಳನ್ನು ತೋರಿಸಲು ಕರೆದುಕೊಂಡು ಹೋದನು. ಆತ ಅವುಗಳನ್ನು ವಿವರಿಸುತ್ತಿದ್ದರೂ ಲಿಲ್ಲಿಯ ಮನಸ್ಸು ಅವುಗಳ ಮೇಲಿರಲಿಲ್ಲ; ಅವಳ ಕಿವಿಗಳು ಆತನ ಮಾತುಗಳನ್ನು ಆಲಿಸುತ್ತಿರಲಿಲ್ಲ; ಅವಳ ಹೃದಯದಿಂದ ಮಾತುಗಳನ್ನು ಕೇಳುತ್ತಿದ್ದುವು. ಅವಳ ಚಿಕ್ಕದ ಹೃದಯವು ಅಂದು ಅಪರಂಜಿಯಾಗುತ್ತಿತ್ತು. ಆಕೆಯೇ 'ಇನ್ನೊಮ್ಮೆ ಆ ಚಿತ್ರವನ್ನು ನೋಡಿ ಮನೆಗೆ ಹೋಗೋಣ ಬನ್ನಿ' ಎಂದು ಗಂಡನಿಗೆ ಹೇಳಿದಳು.

'ಯಾವ ಚಿತ್ರವನ್ನು!'

'ವಿಶ್ವಪ್ರೇಮ. ಅದನ್ನು ಬರೆಯುವಲ್ಲಿ ಆ ವಂಗಚಿತ್ರಗಾರನು ಈ ಸೃಷ್ಟಿಯಲ್ಲಿನ ಬಡತನಕ್ಕೆ ಎಷ್ಟು ನೊಂದು ಆ ಚಿತ್ರದಲ್ಲಿ ತನ್ನ ಕನಿಕರವನ್ನು ಎರಕ ಹೊಯ್ದಿದ್ದಾನೆಯೋ!'

'ಹೌದು; ಈ ಎಂಬ್ರಾಯಿಡರಿ ನೋಡಬೇಡವೇ, ನೀನು!'

'ಅವೆಲ್ಲಾ ಸಾಧಾರಣವು. ಅಂಥಾವನ್ನು ಎಷ್ಟೋ ನೋಡಿದ್ದೇನೆ. ಬನ್ನಿ ಆ ಚಿತ್ರವೊಂದನ್ನು ಮಾತ್ರ ನೋಡಿ ಮನೆಗೆ ಹೋಗೋಣ. ಮಳೆ ಬರುವ ಹಾಗೂ ಇದೆ. ಎಂಟು ಗಂಟೆಯಾಯಿತು. ಪಾಪ ಅವಸರದಲ್ಲಿ ಬರುವಲ್ಲಿ ಆ ಮಕ್ಕಳಿಗೆ ಸಂಜೆ ಒರಿಯ ಕಾಫಿಯನ್ನು ಮಾತ್ರ ಕೊಟ್ಟೆ' ಎಂದು ಲಿಲ್ಲಿ ಗಂಡನಿಗೆ ಹೇಳಿದಳು.

ಇನಿಯಳ ಆರ್ದ್ರತೆಯ ಕಡೆ ಸೋತ ಹೃದಯಕ್ಕೆ ಜೋಸಫ್ ಆಶ್ಚರ್ಯಪಟ್ಟು 'ಇಂದು ನೀನು ನನ್ನ ಹೃದಯೇಶ್ವರಿ' ಎಂದುಕೊಂಡ

ಆಕೆಗೆ ಕಣ್ಣೊದ್ದೇರಿಸಿದ ಕರುಣಾಳು ಕ್ರಿಸ್ತದೇವನನ್ನು ಮನಸ್ಸಿನಲ್ಲಿಯೇ ವಂದಿಸಿದನು.

ಪುನಃ ಇಬ್ಬರೂ ಆ ಚಿತ್ರದ ಬಳಿಗೆ ಬಂದರು. ಅನೇಕರು ಆ ಚಿತ್ರವನ್ನು ನೋಡಿ ಅದರಲ್ಲಿನ ಭಾವಕ್ಕಾಗಿ ಮೆಚ್ಚಿ ಹೋಗುತ್ತಿದ್ದರು. ಲಿಲ್ಲಿ ಮನದಣಿಯುವತನಕ ಆ ಚಿತ್ರವನ್ನು ಚೆನ್ನಾಗಿ ನೋಡಿ, 'ಊ. . ಇನ್ನು.... ಮನೆಗೆ. . . .' ಎಂದು ನಿಧಾನವಾಗಿ ಗಂಡನಿಗೆ ಹೇಳಿದಳು. ಇಬ್ಬರೂ ಪ್ರದರ್ಶನ ಶಾಲೆಯ ಹೊರಗೆ ಬಂದು ಟ್ಯಾಕ್ಸಿಯೊಂದರಲ್ಲಿ ಕುಳಿತು ಮನೆಯ ಕಡೆ ಹೊರಟರು.

೨

ಐದು ವರ್ಷಗಳಾದುವು. ಜೋಸಫ್ ತಾನು ಐದು ವರ್ಷಗಳಿಂದ ಸಂಪಾದಿಸಿದ ಪ್ರೈವೇಟ್ ಟ್ಯೂಷನ್ ಹಣವನ್ನೂ ಮತ್ತು ಎರಡು ವರ್ಷಗಳಿಂದ ಇಂಟರ್‌ಮೀಡಿಯೇಟ್ ಪರೀಕ್ಷೆಗೆ ಚರಿತ್ರೆಯ ಪರೀಕ್ಷಕನಾಗಿದ್ದುದರಿಂದ ಬಂದ ಹಣವನ್ನೂ, ಸಾಲದುದಕ್ಕೆ ಸಾವಿರ ರೂಪಾಯಿಗಳನ್ನೂ ಕ್ರಿಸ್ತ ಸಮಾಜದಿಂದ ಸಾಲವಾಗಿ ತೆಗೆದುಕೊಂಡು, ಒಟ್ಟು ೪೫೦೦ ರೂಪಾಯಿಗಳಿಗೆ ಹಲಸೂರಿನಲ್ಲಿ ಒಂದು ಅಚ್ಚುಕಟ್ಟಾದ ಚಿಕ್ಕ ಮನೆಯನ್ನು ಕೊಂಡುಕೊಂಡನು.

ಇಂದು ಗುಡ್ ಫ್ರೈಡೇ. ಜೋಸಫ್‌ನ ಗೃಹಕ್ಕೆ ಪ್ರವೇಶೋತ್ಸವ! ಅವನ ಅತ್ತೆ ಮಾವಂದಿರೂ ಮತ್ತು ಬಂಧುಮಿತ್ರರೂ ಬಂದಿದ್ದರು. ಮನೆಯೆಲ್ಲಾ ಅಲಂಕರಿಸಲ್ಪಟ್ಟಿತ್ತು. ಮನೆಯು ಮೇಳ ತಾಳಗಳ ಧ್ವನಿಯಿಂದ ತುಂಬಿತ್ತು!

ಸಂಜೆ ಐದು ಗಂಟೆಗೆ ಗೃಹಪ್ರವೇಶ. ಆಗ ಲಿಲ್ಲಿ ಬಟ್ಟೆಯೊಂದರಿಂದ ಮುಚ್ಚಿದ್ದ ಕಟ್ಟು ಹಾಕಿದ್ದ ಚಿತ್ರಪಟವೊಂದನ್ನು ತನ್ನ ರಮಣನ ಕೈಗೆ ಕೊಟ್ಟು 'ಇದನ್ನು ಮುಂಬಾಗಿಲ ಮೇಲೆ, ಚೆನ್ನಾಗಿ ಎಲೆಕ್ಟ್ರಿಕ್ ಬೆಳಕು ಬೀಳುವ ಹಾಗೆ ನೇತುಹಾಕಿ' ಎಂದಳು. ಜೋಸಫ್‌ನು ಆ ಚಿತ್ರವನ್ನು ನೋಡಿದನು. 'ವಿಶ್ವಪ್ರೇಮ! ಎಷ್ಟು ಸೊಗಸಾಗಿ ಕಾಗದದ ಮೇಲೆ ಚಿತ್ರಿಸಿದ ಹಾಗೆ, ಎಳೆ ತೆಗೆದು ರೇಷ್ಮೆ ಬಟ್ಟೆಯಲ್ಲಿ ಮಾಡಿದ್ದೀ, ಲಿಲ್ಲಿ! ಇದೂ ನಿನ್ನ ಸರ್ಪ್ರೈಜ್ ಪ್ಯಾಕೆಟ್ ಇರಬಹುದು!' ಎಂದು ಲಿಲ್ಲಿಗೆ ಹೇಳಿದನು.

'ಈ ಚಿತ್ರವನ್ನು ನಾನು ನೋಡಿದಂದಿನಿಂದ ನಿಮ್ಮ ದಾಸಿಯಾಗಲು ಅರ್ಹಳಾಗಿದ್ದೇನೆ. ಅದಕ್ಕೆ ಕಾಣಿಕೆಯಾಗಿ ನಿಮಗೆ ಈ ಪಠವನ್ನು ಅರ್ಪಿಸಿದ್ದೇನೆ' ಎಂದು ಲಿಲ್ಲಿ—ಆ ಬಾಲತರುಣಿ—ಜೋಸಫ್‌ಗೆ ಹೇಳಿದಳು.

ಜೋಸಫ್ ಅವಳಿಷ್ಟದಂತೆಯೇ ಆ ಚಿತ್ರಪಟವನ್ನು ಮುಂಬಾಗಿಲ ಮೇಲೆ ಎಲೆಕ್ಟ್ರಿಕ್ ದೀಪದ ಷೇಡಿನ ಕೆಳಗೆ, ಸರಿಯಾಗಿ ಬೆಳಕು ಅದರ ಮೇಲೆಯೇ ಬೀಳುವ ಹಾಗೆ ಹಾಕಿ, 'ಲಿಲ್ಲಿ! ಈ ಮನೆಗೂ ಅದೇ ಹೆಸರು. ದುರ್ಗಾಶಂಕರ ಚಿತ್ರದ ಪ್ರತಿಯೇ ಇದು. ಎಂತಹ ನಿಪುಣೆಯೇ ನೀನು ಎಂಬ್ರಾಯಡರಿಯಲ್ಲಿ!' ಎಂದು ಹೇಳಿ ದೀಪದ ಸ್ವಿಚ್ ಹಾಕಿದನು.

ಲಿಲ್ಲಿಯ 'ವಿಶ್ವಪ್ರೇಮ'ವು ಬೆಳಗಿತು!

ಲಿಲ್ಲಿ ಆದರ ಕಡೆ ನೋಡಿ 'ಈಗ ನಿಮಗೆ ಸಂತೋಷವಾ?' ಎಂದು ಕೇಳುವ ದೃಷ್ಟಿಯನ್ನು ಇನಿಯನ ಮೇಲೆ ಬೀರಿದಳು. ಜೋಸಫ್‌ನೂ ತನ್ನ ಹೃದಯದಿಂದ ಬಂದ ಸಂತೋಷವನ್ನು ಸೂಚಿಸುವ ಪ್ರತ್ಯುತ್ತರವನ್ನು ಮುಗುಳುನಗೆಯಿಂದ ಲಿಲ್ಲಿಯ ಮೇಲೆ ಬೀರಿದನು!

ಆಗ ಡೆವಿಡ್ಡರು ಮಗಳನ್ನೂ ಮತ್ತು ಅಳಿಯನನ್ನೂ ನೋಡಿ, 'ಸುಖವಾಗಿ ನಿಮ್ಮಗಳ ಜೀವನದಲ್ಲಿ ಸದಾ ಹೀಗೆಯೇ ನೀವಿಬ್ಬರೂ ಇರಿ' ಎಂದು ನಸುನಗೆಯಿಂದ ಹೇಳಿದರು. 'ಅಂತೂ ಜೋಸಫ್‌ಗೆ ಒಂದು ಸರಿಯಾದ ನೆಲೆ ಸಿಕ್ಕಿತಲ್ಲ ಸಂತೋಷ' ಎಂದು ಮಗಳನ್ನೂ ಅಳಿಯನನ್ನೂ ನೋಡಿ ಆನಿಯವರು ಗಂಡನಿಗೆ ಹೇಳಿದರು.

'ಎಲ್ಲಾ ತಾವು ತಮ್ಮ ಬಡ ಅಳಿಯನ ಮೇಲೆ ತೋರಿಸುತ್ತಿರುವ ಪ್ರೇಮದ ಫಲ, ಅತ್ತೆ', ಎಂದು ಇನಿಯಳ ಮುಖವನ್ನು ಮುಗುಳುನಗೆಯಿಂದ ನೋಡುತ್ತಾ, ಲಿಲ್ಲಿಯ 'ವಿಶ್ವಪ್ರೇಮ'ದ ಕಡೆ ನೋಡಿ ಜೋಸಫ್ ಹೇಳಿದನು.

'ನಿಮ್ಮನ್ನು ಮಾತಿನಲ್ಲಿ ಯಾರು ಜಯಿಸುತ್ತಾರೆ!' ಎಂದು ಲಿಲ್ಲಿ ಗಂಡನಿಗೆ ಹೇಳಿದಳು.

'ನಿನ್ನ ವಿಶ್ವಪ್ರೇಮ, ಲಿಲ್ಲಿ!' ಎಂದು ಜೋಸಫ್ ನಸುನಗೆಯಿಂದ ಲಿಲ್ಲಿಗೆ ಹೇಳಿದನು.

---